## ಡಾ. ಕೆ. ಕೃಷ್ಣಮೂರ್ತಿಯವರ
## ಇತರ ಗ್ರಂಥಗಳು

ಕನ್ನಡ

೧ ಕನ್ನಡ ಪ್ರತಿಮಾನಾಟಕ
೨ ಕನ್ನಡ ಉತ್ತರರಾಮಚರಿತೆ
೩ ಕನ್ನಡ ಕಿರಾತಾರ್ಜುನೀಯ
೪ ಕನ್ನಡ ಕಾವ್ಯಾಲಂಕಾರ
೫ ಕನ್ನಡ ಧ್ವನ್ಯಾಲೋಕ
೬ ಕನ್ನಡ ಕಾವ್ಯಪ್ರಕಾಶ, ಭಾಗ–೧

ಬೆಲೆ :
ಸಾಧಾರಣ ಪ್ರತಿ ೪.೦೦
ಕ್ಯಾಲಿಕೊ ಪ್ರತಿ ೬.೦೦

ಕನ್ನಡ ಕವಿಕಾವ್ಯಮಾಲೆ—೨೯

# ಕನ್ನಡ ಮೃಚ್ಛಕಟಿಕ

## (ಮಣ್ಣಿನ ಕಿರುಬಂಡಿ)

[ಶೂದ್ರಕನ ಮೂಲ ಸಂಸ್ಕೃತ ನಾಟಕದ ಸಮಗ್ರಾನುವಾದ]

ಲೇಖಕರು

**ಡಾ. ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.,**

ಸಂಸ್ಕೃತ ಪ್ರಧಾನಾಧ್ಯಾಪಕರು, ಕೆನರಾ ಕಾಲೇಜು, ಕುಮಟಾ, (ಉ.ಕ.)

(ಕರ್ಣಾಟಕ ವಿಶ್ವವಿದ್ಯಾನಿಲಯ)

**ಶಾರದಾ ಮಂದಿರ**

**ರಾಮಯ್ಯರ್ ರಸ್ತೆ, ಮೈಸೂರು**

# ಅರಿಕೆ

ಮೃಚ್ಛಕಟಿಕವು ಪ್ರಾಚೀನಭಾರತದ ನಾಟಕರತ್ನತ್ರಯದಲ್ಲಿ ಒಂದು. ಕಾಳಿದಾಸನ 'ಶಾಕುಂತಲ', ಭವಭೂತಿಯ 'ಉತ್ತರರಾಮಚರಿತೆ' ಗಳಂತೆಯೇ ವಿಶ್ವವಿಖ್ಯಾತವಾದುದು. ಇದು ಅನುವಾದಿತವಾಗದೆ ಇರುವ ಭಾಷೆಯಿಲ್ಲ; ಇದನ್ನು ಪ್ರಯೋಗಮಾಡದ ರಂಗಸ್ಥಲವಿಲ್ಲ; ಅತ್ಯಂತ ಯಶಸ್ವಿಯಾಗದ ಇದರ ಪ್ರಯೋಗವಿಲ್ಲ. ಹೀಗೆ ಸಾಹಿತ್ಯದೃಷ್ಟಿಯಿಂದಲೂ, ರಂಗದೃಷ್ಟಿಯಿಂದಲೂ, ಪ್ರಾಚೀನಾಭಿರುಚಿಯಂತೆ ವಿನೂತನಾಭಿರುಚಿಗೂ, ಒಂದೇ ಸಮನಾದ ಕಾಲದೇಶಾತೀತ ಮಹತ್ತ್ವಮೋಹಕತ್ತ್ವಗಳನ್ನು ಪಡೆದ ಮತ್ತೊಂದು ಕೃತಿ ಸಂಸ್ಕೃತಸಾಹಿತ್ಯದಲ್ಲಿಯೇ ವಿರಳ.

ಇದರ ಕರ್ತೃವಾದ ಶೂದ್ರಕನು ದಾಕ್ಷಿಣಾತ್ಯ; ಮತ್ತು ಬಹುಶಃ ಕನ್ನಡಿಗನೆಂಬುದು ಕನ್ನಡಿಗರಿಗೆ ಅಭಿಮಾನಾಸ್ಪದವಾದ ವಿಷಯ. ನಾಟಕ ದುದ್ದಕ್ಕೂ ಬರುವ ಮಾತುಗಳು ಇಂದಿನ ಕನ್ನಡಿಗರ ಮನೆಮಾತು ಗಳಂತೆಯೇ ಇರುವುದು ಕವಿಯ ಲೋಕಾನುಭವದಂತೆ ಕನ್ನಡಿಗರ ಹಾಸ್ಯ ವೃತ್ತಿಯನ್ನೂ ಪ್ರತಿಬಿಂಬಿಸುತ್ತದೆ.

ಈಗಾಗಲೇ ಕಳೆದ ಶತಮಾನದಲ್ಲಿ ಬರೆದ ಇದರ ಎರಡು ಕನ್ನಡ ಭಾಷಾಂತರಗಳು ಇಂದು ಅನುಪಲಬ್ಧವಾಗಿರುವುದಲ್ಲದೆ ಹಳೆಗನ್ನಡ ಪ್ರಚುರವೆನಿಸುವುದರಿಂದ, ಈ ಶತಮಾನದಲ್ಲಿ ಬರೆದ ನಂಜನಗೂಡು ಸುಬ್ಬಾಶಾಸ್ತ್ರಿಗಳ ಅನುವಾದವು ಮೂಲದ ಸಂಗ್ರಹರೂಪವಾಗಿರುವುದ ರಿಂದ, ಇಂದಿನ ಭಾಷಾಮರ್ಯಾದೆಗೆ ಒಗ್ಗುವಂತೆ ಮೂಲದ ಸಮಗ್ರ ಭಾಷಾಂತರದ ಅಗತ್ಯವುಂಟೆಂದು ಬಗೆದು ಇದನ್ನು ಬರೆಯಲಾಗಿದೆ.

ಕನ್ನಡ ರಂಗಭೂಮಿಗೆ ಈ ನಾಟಕ ಹೊಸದಲ್ಲ; ಅಭಿನೇತೃಗಳು ಮೂಲದಲ್ಲಿದ್ದ ಎಷ್ಟನ್ನೋ ಬಿಟ್ಟು, ಇಲ್ಲದ ಎಷ್ಟನ್ನೋ ಸೇರಿಸಿಕೊಂಡು ಜನಾನುರಂಜನೆಯನ್ನು ಮಾಡುತ್ತಿದ್ದುದು ನನ್ನ ಅನುಭವದಲ್ಲಿದೆ. ನಿಜ ವಾಗಿಯೂ ಮೂಲವನ್ನು ಇದ್ದಂತೆ ಅಭಿನಯಿಸಿದರೆ ಎಷ್ಟು ಯಶಸ್ವಿಯಾಗ ಬಹುದೆಂಬುದನ್ನು ಅಮೇರಿಕಾ, ಯೂರೋಪುಗಳ ರಂಗಸ್ಥಳದ ಮೇಲೆ ಈ ನಾಟಕ ಪ್ರಯೋಗಕ್ಕೆ ದೊರೆತ ಮನ್ನಣೆಯಿಂದಲೇ ತರ್ಕಿಸಬಹುದಾಗಿದೆ.

ಪುನರುಜ್ಜೀವಿತವಾಗುತ್ತಿರುವ ಕನ್ನಡ ರಂಗಭೂಮಿಯಲ್ಲಿ ಈ ನಾಟಕದ ಪ್ರಯೋಗಕ್ಕೆ ಮತ್ತೆ ಸ್ಥಾನ ದೊರೆಯುವುದೆಂದು ನಾನು ನಂಬಲು ನಾಟಕದ ನಿರುಪಮ ಸೊಬಗೇ ಕಾರಣ.

'ಶಾಕುಂತಲ' ಮುಂತಾದ ಇತರ ಸಂಸ್ಕೃತನಾಟಕಗಳೆಲ್ಲವೂ ಪದ್ಯ ಗದ್ಯ ಮಯ ನಾಟಕಗಳು. ಪದ್ಯಗಳೆಲ್ಲವೂ ಮತ್ತೆ ಮತ್ತೆ ಅನುಸಂಧಾನ ಮಾಡಿ ಆನಂದಿಸಲು ಯೋಗ್ಯವಾದ ಕಾವ್ಯಗಳು. ವಿರಾಮವಿಲ್ಲದೆ ಓದು ವವರಿಗೆ ಹಿಡಿಸುವುದು ಕಡಿಮೆ. ಆದರೆ ಮೃಚ್ಛಕಟಿಕ ಮಾತ್ರ ಹಾಗಲ್ಲ. ಇಲ್ಲಿ ಪದ್ಯಗಳು ಬಂದರೂ ನಾಟಕ ಕ್ರಿಯೆಯನ್ನು ಮುಂದೆ ಸಾಗಿಸುವ ನೇರ ವಾದ ಗುರಿ ಅವಕ್ಕಿದೆ. ಶೈಲಿ ಗದ್ಯದಷ್ಟೇ ಸರಳ, ಕೇವಲ ವರ್ಣನಾತ್ಮಕ ವಾದುವು ಬಹಳ ಕಡಿಮೆ. ಆದುದರಿಂದ ಇಡಿಯ ಗದ್ಯ ಪದ್ಯಮಯವಾದ ಈ ನಾಟಕವನ್ನು ಸಾಮಾನ್ಯ ಪಾಠಕರೂ ಕಾದಂಬರಿಯಂತೆಯೇ ಇಂದಿಗೂ ಓದಿ ಆನಂದಿಸಬಹುದು. ಪ್ರಾಚೀನ ಜನಜೀವನವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳಲು ಭಾರತದಲ್ಲಿಯೇ ಇದಕ್ಕಿಂತ ಉತ್ತಮವಾದ ಮತ್ತೊಂದು ಕೃತಿಯಿಲ್ಲ.

ಪಂಡಿತರಂತೆ ಸಾಮಾನ್ಯ ಪಾಠಕರಿಗೂ ಪ್ರಿಯವಾಗಬೇಕೆಂಬ ಉದ್ದೇಶದಿಂದ ಈ ಹೊಸ ಭಾಷಾಂತರವನ್ನು ಮಾಡಿದೆ. ಇದಕ್ಕೆ ಪ್ರೇರಣೆ ಬಂದುದು ಗೆಳೆಯ ಶಂಕರನಾರಾಯಣರಾಯರಿಂದ. ಅವರಿಗೆ ಈ ನಾಟಕ ವೆಂದರೆ ಪ್ರಾಣ. ಎಷ್ಟೋ ಸಲ ಮೂಲವನ್ನು ಮತ್ತೆ ಮತ್ತೆ ಓದಿದ್ದಾರೆ; ವಿಸ್ತಾರವಾದ ವಿಮರ್ಶೆಯ ಗ್ರಂಥವನ್ನೂ ಬೇರೆ ಪ್ರಕಟಿಸಿದ್ದಾರೆ. ಅವರು ಆರೇಳು ವರ್ಷಗಳಿಂದಲೂ ಒತ್ತಾಯ ಮಾಡುತ್ತಿದ್ದರೂ ಕೂಡ, ಈ ಕೆಲಸ ವನ್ನು ನಿರ್ವಹಿಸಲು ನನಗಿದ್ದ ಅಧೈರ್ಯ ನನ್ನನ್ನು ತಡೆಯುತ್ತಿದ್ದಿತು. ಈ ನಾಟಕ ಉಳಿದ ಸಂಸ್ಕೃತನಾಟಕಗಳಿಗೆ ಗಾತ್ರದಲ್ಲಿ ದ್ವಿಗುಣವಾಗಿರುವಂತೆ, ರಂಗೋಚಿತವಾದ ಶೈಲಿಯಲ್ಲಿ ಶತಗುಣವಾಗಿಯೂ, ಸರ್ವಜನಾಕರ್ಷಣೆ ಯಲ್ಲಿ ಸಹಸ್ರಗುಣವಾಗಿಯೂ ಇದೆ. ಮೂಲದ ಸ್ವಾರಸ್ಯ ಭಾಷಾಂತರದಲ್ಲಿ ಅಚ್ಚಳಿಯದಂತೆ ಮೂಡಿ ಬರುವುದು ಅಸಂಭವವೇ ಸರಿ. ಕಡೆಗೂ ಅವರ ಪ್ರೀತಿಯ ಪ್ರೇರಣೆಗೆ ಪರವಶನಾಗಿ ಯಥಾಶಕ್ತಿ ಸಾಹಸಕ್ಕೆ ಕೈ ಹಾಕಿದ್ದೇನೆ. ಸಹೃದಯರಾದ ಕನ್ನಡಿಗರು ಲೋಪಗಳನ್ನು ಮನ್ನಿಸುವರೆಂದು ನಂಬುತ್ತೇನೆ.

ಈ ನಾಟಕವು ಕನ್ನಡಿಗರಿಗೆ ಚಿರಪರಿಚಿತವಾಗಿರುವುದರ ಜತೆಗೆ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ. 'ಸಂಸ್ಕೃತ ನಾಟಕ' ದಲ್ಲಿ ಸಣ್ಣನಾದರೂ ಸರ್ವಾಂಗಸುಂದರವಾದ ಇದರ ವಿಮರ್ಶೆಯಿರುವುದರಿಂದಲೂ, ಶ್ರೀ ಎಚ್. ಎಮ್. ಶಂಕರನಾರಾಯಣರಾಯರ ವಿಸ್ತೃತವಾದ ಸ್ವತಂತ್ರ ಗ್ರಂಥವೇ ಇರುವುದರಿಂದಲೂ, ಮತ್ತೆ ವಿಸ್ತಾರವಾಗಿ ಪೀಠಿಕೆ ಬರೆಯುವುದನ್ನು ನಿಲ್ಲಿಸಿ ಸಂಕ್ಷಿಪ್ತವಾದ ಒಂದು ವಿವೇಚನೆಯನ್ನು ಪೀಠಿಕೆಯಾಗಿ ಸೇರಿಸಿದ್ದೇನೆ. ಇವರಿಬ್ಬರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ. ಶ್ರೀ ರಾಯರು ಈ ನಾಟಕದ ಕರಡುಗಳನ್ನು ನೋಡುವ ಶ್ರಮವನ್ನು ತಾವೇ ಹೊತ್ತುಕೊಂಡು ನನಗೆ ಉಪಕಾರಮಾಡಿದ್ದಾರೆ.

ಕುಮಟಾ ೧-೪-೧೯೫೭ ಕೆ. ಕೃಷ್ಣಮೂರ್ತಿ

# ಸಂಪಾದಕರ ಮಾತು

ನನ್ನ ಪ್ರಿಯಮಿತ್ರರಾದ ಡಾ. ಕೆ. ಕೃಷ್ಣಮೂರ್ತಿಯವರ 'ಕನ್ನಡ ಮೃಚ್ಛಕಟಿಕ'ವನ್ನು ನಾನು ಅತ್ಯಂತ ಸಂತೋಷದಿಂದ ಪ್ರಕಟಿಸುತ್ತಿದ್ದೇನೆ.

ಸಂಸ್ಕೃತ ನಾಟಕಸಾಹಿತ್ಯದಲ್ಲಿ ಶೂದ್ರಕಕವಿಯಿಂದ ರಚಿತವಾದ 'ಮೃಚ್ಛಕಟಿಕ'ಕ್ಕೆ ಅಪೂರ್ವವಾದ ಸ್ಥಾನವುಂಟು. ಇದಕ್ಕೆ ಹಲವಾರು ಕಾರಣಗಳುಂಟು. ಮೊದಲನೆಯದಾಗಿ ಇದರಲ್ಲಿ ಬರುವುದು ರಾಜರಾಣಿಯರ, ಅಂತಃಪುರದ ಕಥೆಯಲ್ಲ. ನಾಟಕದ ನಾಯಕನಾದ ಚಾರುದತ್ತನಾದರೋ ಜಾತಿಯಲ್ಲಿ ಬ್ರಾಹ್ಮಣ, ದಾನಧರ್ಮದಲ್ಲಿ ಕ್ಷತ್ರಿಯ, ವೃತ್ತಿಯಲ್ಲಿ ವೈಶ್ಯ. ಹೆಚ್ಚೇನು, ಅವನು ಗುಣಪಕ್ಷಪಾತಿ. ನಾಯಿಕೆಯಾದ ವಸಂತಸೇನೆ ಶ್ರೀಮಂತ ವೇಶ್ಯೆಯಾದರೂ ಬಡವನಾದ ಚಾರುದತ್ತನನ್ನು ಪ್ರೀತಿಸಿ, ವಧೂಪದವಿಯನ್ನು ಅರಸಿ ಬಂದವಳು; ಚಾರುದತ್ತನನ್ನು ಕೈಹಿಡಿದ ಹೆಂಡತಿಯನ್ನು ಆದರದಿಂದ ಕಂಡವಳು; ಹೆತ್ತತಾಯಿಗಿಂತಲೂ ಅತಿಶಯವಾಗಿ ಚಾರುದತ್ತನ ಮಗನನ್ನು ಪ್ರೀತಿಸಿದವಳು. ಸಂಸ್ಕೃತ ನಾಟಕಗಳಲ್ಲಿ ಚಿತ್ರಿತವಾಗಿರುವ ಅಂತಃಪುರದ ಪ್ರಣಯವನ್ನು ನೋಡಿ ಬೇಸರಗೊಂಡಿರುವವರಿಗೆ, ಈ ನಾಟಕದ ಪ್ರೇಮಪ್ರಪಂಚವನ್ನು ಕಂಡು ಮನಸ್ಸು ಹರ್ಷಗೊಳ್ಳುತ್ತದೆ. ಎರಡನೆಯದಾಗಿ ಈ ನಾಟಕ ಭಾಸನ ಅಪೂರ್ಣವಾದ 'ದರಿದ್ರ ಚಾರುದತ್ತ'ದಂತೆ ಚಾರುದತ್ತ ವಸಂತಸೇನೆಯರ ಪ್ರೇಮದ ಕಥೆಯಾಗಿ ಮಾತ್ರ ಉಳಿಯದೆ, ಆ ಕಾಲದ ಉಜ್ಜಯಿನಿಯ ರಾಜ್ಯಕ್ರಾಂತಿಯ ಕಥೆಯೂ ಆಗಿದೆ. ಚಾರುದತ್ತ ವಸಂತಸೇನೆಯರ ಪ್ರಣಯ ಕಥೆಯನ್ನೂ ಆರ್ಯಕಪಾಲಕರ ವೃತ್ತಾಂತವನ್ನೂ ಈ ನಾಟಕದಲ್ಲಿ ಕವಿ ಹಾಸುಹೊಕ್ಕಾಗಿ ಹೆಣೆದಿದ್ದಾನೆ. ಮೂರನೆಯದಾಗಿ ಆ ಕಾಲದ ಸಂಪ್ರದಾಯಗಳು, ಆಚಾರ, ನಂಬಿಕೆ ಇವೇ ಮೊದಲಾದ ಸಾಮಾಜಿಕಾಂಶಗಳು ಈ ನಾಟಕದಲ್ಲಿ ಎಷ್ಟು ಸೊಗಸಾಗಿ ಮೂಡಿ ಬಂದಿವೆ! ಚೌರ್ಯ, ವೇಶ್ಯಾವೃತ್ತಿ, ಜೂಜು, ದಾಸ್ಯವೃತ್ತಿ, ನ್ಯಾಯತೀರ್ಮಾನದ ರೀತಿ, ವೈದಿಕ ಬೌದ್ಧಧರ್ಮಗಳ ಸಾಮರಸ್ಯ ಇವೇ ಮೊದಲಾದ ಸಾಮಾಜಿಕ ರಾಜಕೀಯ ಆವರಣವನ್ನೂ, ಆ ಕಾಲದ ರಾಜಕೀಯ ಅನೈಕಮತ್ಯವನ್ನೂ, ಉಜ್ಜಯಿ

ನಿಯ ಜನರ ರಸಿಕತೆ, ಸೌಜನ್ಯ, ಗುಣಗ್ರಹಣ ಶಕ್ತಿಯನ್ನೂ, ಖಳಸ್ವಭಾವ ವನ್ನೂ ಈ ನಾಟಕ ತೆರೆದು ತೋರಿಸುತ್ತದೆ. ನಾಲ್ಕನೆಯದಾಗಿ ಇಲ್ಲಿ ಬರುವ ಹಾಸ್ಯದ ಸ್ವರೂಪವಾದರೂ ಎಂಥದ್ದು! ಕಟುಹಾಸ್ಯದಿಂದ ಹಿಡಿದು ಮನಸ್ಸನ್ನು ಅರಳಿಸುವ, ಉಲ್ಲಾಸಗೊಳಿಸುವ ನಗೆಮಲ್ಲಿಗೆಯ ವಿವಿಧ ಸ್ವರೂಪವನ್ನು ಈ ಪ್ರಕರಣದಲ್ಲಿ ಕಾಣಬಹುದು. ಇಷ್ಟೆಲ್ಲ ವಿಷಯ ಗಳನ್ನೂ, ಇದಕ್ಕೂ ಮಿಗಿಲಾದ ಅಂಶಗಳನ್ನೂ ಅಡಕಮಾಡಲೆಂದೇ ಕವಿ ರೂಪಕಗಳಲ್ಲೆಲ್ಲ ಅತ್ಯಂತ ವಿಸ್ತಾರವಾದ ಹತ್ತು ಅಂಕಗಳ ಪ್ರಕರಣವನ್ನು ತನ್ನ ಕಾರ್ಯಕ್ಕೆ ಆಯ್ದುಕೊಂಡಂತೆ ತೋರುತ್ತದೆ. ನಾಟಕದಲ್ಲಿ ಬರುವ ಘಟನೆಗಳನ್ನು ನೆನೆದರೆ ಇದರಲ್ಲಿ ಬರುವ ಪಾತ್ರಗಳೂ ಹೆಚ್ಚಿಲ್ಲವೆಂದೇ ಹೇಳಬೇಕು.

ಶತಶತಮಾನಗಳಿಂದ ಪಂಡಿತಪಾಮರರಿಗೆ ಇಷ್ಟು ಪ್ರಿಯವಾಗಿರುವ ಈ ನಾಟಕದ ವಿಷಯದಲ್ಲಿ ಬಿಡಿಸಬೇಕಾದ ಎಷ್ಟೋ ಸಮಸ್ಯೆಗಳಿವೆ. 'ಶೂದ್ರಕ' ನೆಂಬುದು ನಿಜವಾದ ಹೆಸರೇ ಇಲ್ಲವೆ ಕಾಲ್ಪನಿಕವಾದದ್ದೇ? 'ದಂಡಿ' ಮೃಚ್ಛ ಕಟಿಕದ ಕರ್ತೃವೇ? ಶೂದ್ರಕನು ದಾಕ್ಷಿಣಾತ್ಯನೇ, ಕನ್ನಡಿಗನೇ? ಮೃಚ್ಛ ಕಟಿಕದ ಸಂಗ್ರಹರೂಪ 'ಚಾರುದತ್ತ'ವೇ ಇಲ್ಲವೆ ಚಾರುದತ್ತದ ವಿಸ್ತೃತ ರೂಪ ಮೃಚ್ಛಕಟಿಕವೆ?–ಇವೇ ಮೊದಲಾದ ಸಮಸ್ಯೆಗಳನ್ನೂ ನಾಟಕದ ವಿಮರ್ಶೆಯನ್ನೂ ತಮ್ಮ ಪೀಠಿಕೆಯಲ್ಲಿ ಡಾ. ಕೃಷ್ಣಮೂರ್ತಿಯವರು ಸಂಗ್ರಹವಾಗಿ ಸಾರವತ್ತಾಗಿ ಮಾಡಿದ್ದಾರೆ. ಡಾ. ಕೃಷ್ಣಮೂರ್ತಿಯವರ ಪೀಠಿಕೆ, ಪ್ರೊ. ಎ. ಆರ್. ಕೃ ಅವರ ಸಂಸ್ಕೃತ ನಾಟಕದಲ್ಲಿನ ಶೂದ್ರಕ ಕವಿಯ ಪ್ರಬಂಧ, ಶ್ರೀ. ಎಸ್. ರಾಮಚಂದ್ರರಾಯರ ಪರಿಷತ್ ಪತ್ರಿಕೆ ಯಲ್ಲಿ ಪ್ರಕಟವಾದ ಈ ನಾಟಕದ ವಿಮರ್ಶೆ, ನನ್ನ 'ಮೃಚ್ಛಕಟಿಕ ಪ್ರಕರಣ' ವೆಂಬ ಕಿರುಹೊತ್ತಿಗೆ ಇವುಗಳಿಂದ ಕನ್ನಡಿಗರಿಗೆ ಈ ನಾಟಕದ ಸೊಗಸು ತಕ್ಕಮಟ್ಟಿಗೆ ಅರಿವಾಗುವುದೆಂದು ನಾನು ತಿಳಿಯುತ್ತೇನೆ.

ಬೆಂಗಳೂರಿನಲ್ಲಿ ನಾನು ಇಂಟರ್‌ಮೀಡಿಯೆಟ್ ತರಗತಿಯಲ್ಲಿ ವ್ಯಾಸಂಗಮಾಡುತ್ತಿದ್ದಾಗ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳಿಂದ ಈ ನಾಟಕದ ಸ್ವಾರಸ್ಯವನ್ನು ಅರಿಯುವ ಸುಯೋಗ ನನ್ನದಾಗಿತ್ತು. ಶಾರದಾ ವಿಲಾಸ ಕಾಲೇಜಿನಲ್ಲಿ ಇದನ್ನು ಪಾಠ ಹೇಳಿದಾಗ ಈ ನಾಟಕದ ಕನ್ನಡದ

ಅನುವಾದವೊಂದರ ಆವಶ್ಯಕತೆ ನನಗೆ ಕಂಡು ಬಂತು. ಕನ್ನಡದಲ್ಲಿ ಒಂದೆರಡು ಭಾಷಾಂತರಗಳಿದ್ದರೂ ಅವು ರಂಗಸ್ಥಳಕ್ಕಾಗಿ ಬರೆದ ಸಂಗ್ರಹಗಳು; ಇಲ್ಲವೆ ಹಳೆಯ ರೀತಿಯಲ್ಲಿ ಬರೆದವು. ಅವೂ ಈಗ ದುರ್ಲಭವಾಗಿವೆ. ಈ ಕೊರತೆಯನ್ನು ನನ್ನ ಮಿತ್ರರಲ್ಲಿ ನಿವೇದಿಸಿಕೊಂಡಾಗ ಅವರು ಈ ಪ್ರಕರಣವನ್ನು ಕನ್ನಡಿಸಿಕೊಟ್ಟು, ಇದರ ಪ್ರಕಟನೆಗೆ ಅನುಮತಿ ಕೊಟ್ಟರು. ಈ ಉಪಕಾರಕ್ಕಾಗಿ ನನ್ನ ಮಿತ್ರರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಈ ಗ್ರಂಥ ಬಹಳ ಹಿಂದೆಯೇ ಪ್ರಕಟವಾಗಬೇಕಾಗಿತ್ತು. ಇದರ ಪ್ರಕಟನೆಯ ವಿಲಂಬನೆಗೆ ನಾನೇ ಕಾರಣ. ಬಹಳಕಾಲ ಇದನ್ನು ಅಚ್ಚುಕೂಟದಲ್ಲಿ ಸೆರೆಹಿಡಿದಿಟ್ಟುದಕ್ಕಾಗಿ ಲೇಖಕರ ಹಾಗೂ ಮುದ್ರಣಾಲಯದವರ ಕ್ಷಮೆಬೇಡಿ, ಇದನ್ನು ಸುಂದರವಾಗಿ ಮುದ್ರಿಸಿಕೊಟ್ಟ ನನ್ನ ಪ್ರಿಯಮಿತ್ರರಾದ ಶ್ರೀ. ಜಿ. ಎಚ್. ರಾಮರಾಯರ ಸಹಾಯಸಹಕಾರಗಳನ್ನು ಕೃತಜ್ಞತೆಯಿಂದ ನೆನೆದು ಈ ಕೃತಿಯನ್ನು ಸಹೃದಯರ ಮುಂದಿಡುತ್ತಿದ್ದೇನೆ. ಈ ಕೃತಿ ಕನ್ನಡಿಗರಿಗೆ ಈ ಲೇಖಕರ ಇತರ ಕೃತಿಗಳಂತೆ ಪ್ರಿಯವಾಗಲೆಂದು ಹಾರೈಸುತ್ತೇನೆ.

ಶಾರದಾ ಮಂದಿರ<br>ರಾಮಯ್ಯರ್ ರಸ್ತೆ<br>ಮೈಸೂರು

ಎಚ್. ಎಂ. ಶಂಕರನಾರಾಯಣರಾವ್

## ಸಮರ್ಪಣೆ

ಮಾತೃಶ್ರೀ ಗೌರಮ್ಮನವರ ಚರಣಾರವಿಂದಗಳಲ್ಲಿ

ಬರೆಬರೆದಂತೀ ಕೃತಿಯಂ
ಕುರಿತೋದುತೆ ಸವಿದ ತಾಯ್ವಿರಡಿದಾವರೆಯೊಳ್ ।
ಸುರುಚಿರ ಪುಸ್ತಕರೂಪದೊ
ಳಿರಿಸುತ್ತುಂ ಪಡೆವೆನಿಂದು ಕೃತಕೃತ್ಯತೆಯಂ ॥

---

# ಪೀಠಿಕೆ

## ೧. ಕವಿಕಾಲವಿಚಾರ

ನಾಟಕದ ಪ್ರಸ್ತಾವನೆಯಲ್ಲಿಯೇ–

ವರಗಜಗಮನಂ ದ್ವಿಜವರ
ನುರುಸತ್ತ್ವಂ ಸುಂದರಂ ಚಕೋರಕನಯನಂ।
ಪರಿಪೂರ್ಣೇಂದುಮುಖಾನ್ವಿತ
ನರಸಂ ಮೇಣ್ ಮೆರೆದನತ್ತೆ ಶೂದ್ರಕನೆಂಬಂ॥ (I. ೩)

ಎಂದು ಆರಂಭವಾಗುವ ವರ್ಣನೆ–

'ವರುಷ ನೂರರ ಮೇಲೆ ದಿನ ಹತ್ತು ಬದುಕಿರ್ದು
ಶೂದ್ರಕನು ಬೆಂಕಿಯನು ಪುಗುತಂದನಂದು'

ಎಂದು ಮುಗಿಯುವುದರಿಂದ ವಿದ್ವಾಂಸರು ಇದನ್ನು ಪ್ರಕ್ಷಿಪ್ತವೆನ್ನುವುದೇ ಹೆಚ್ಚು. ಶೂದ್ರಕನೊಬ್ಬ ಕಾಲ್ಪನಿಕ ರಾಜನೇ ವಿನಾ ಐತಿಹಾಸಿಕ ವ್ಯಕ್ತಿಯೇ ಅಲ್ಲವೆಂಬುದು ಕೀತ್, ಸಿಲ್ವೇನ್ ಲೇವಿ ಮುಂತಾದವರ ಅಭಿಪ್ರಾಯ[1]. ದಂಡಿಯ 'ಕಾವ್ಯಾದರ್ಶ'ದಲ್ಲಿ ಇಲ್ಲಿಯ ಒಂದು ಪದ್ಯ (I. ೩೪) ಬರುವುದಲ್ಲದೆ 'ದಶಕುಮಾರಚರಿತೆ'ಯ ಸಾಮಾಜಿಕ ಪರಿಸ್ಥಿತಿಗೂ ನಾಟಕದಲ್ಲಿ ಚಿತ್ರಿತವಾದ ಪರಿಸ್ಥಿತಿಗೂ ಸಾಮ್ಯವಿರುವುದರಿಂದ ದಂಡಿಯೇ ಮೃಚ್ಛಕಟಿಕದ ಕರ್ತೃವೆಂಬುದು ಪಿಷೆಲ್ ಅವರ ಸಿದ್ಧಾಂತ.[2] ಈ ಸಿದ್ಧಾಂತಕ್ಕೆ ಮತ್ತೂ ಆಂತರ ಪ್ರಮಾಣಗಳಿಂದ ಪುಷ್ಟಿಯನ್ನೀಯುವ

---

1. A. B. Keith : *Sanskrit Drama*, p. 30;
2. " ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ।
ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ॥" **I. 34**
ಎಂಬ ಶ್ಲೋಕವು 'ಮೃಚ್ಛಕಟಿಕ'ದಲ್ಲಿ ಬರುವಂತೆ ದಂಡಿಯ 'ಕಾವ್ಯಾದರ್ಶ'ದಲ್ಲಿಯೂ ಬರುವುದನ್ನು ಪಿಷೆಲ್ ಅವರು ಇವುಗಳ ಏಕಕರ್ತೃಕವನ್ನು ಸಾಧಿಸಲು ಆಧಾರವಾಗಿ ಹಿಡಿಯುತ್ತಾರೆ.

ಪ್ರಯತ್ನವನ್ನು ಪ್ರೊ. ಆರ್. ಡಿ. ಕರಮುಕರ್ ಅವರು ಮಾಡಿದ್ದಾರೆ.[3] ಎಷ್ಟಾದರೂ ಕರ್ತೃ ಶೂದ್ರಕನಲ್ಲವೆಂಬುದು ಇನ್ನೂ ಸಾಧಿತವಾಗಿಲ್ಲ.

ಶೂದ್ರಕನು ಐತಿಹಾಸಿಕ ವ್ಯಕ್ತಿಯೆನ್ನುವ ಭಾರತೀಯ ವಿದ್ವಾಂಸರು ಅವನು ಯಾರೆಂಬ ಬಗ್ಗೆ ಹೆಚ್ಚಿನ ಸಂಶೋಧನೆಗಳನ್ನು ಮಾಡಿದ್ದಾರೆ; ಸ್ಕಾಂದಪುರಾಣದ ಕುಮಾರಿಕಾಖಂಡದಲ್ಲಿ ಉಲ್ಲೇಖಿತನಾಗಿರುವ ಶೂದ್ರಕನು 'ಆಂಧ್ರಭೃತ್ಯ' ರಾಜವಂಶದ ಮೂಲಪುರುಷನಾದ 'ಶಿಮುಕ' (ಕ್ರಿ. ಶ. ೨೦೦) ನೆಂದು ಎಮ್. ಆರ್. ಕಾಳೆಯವರು ಹೇಳುತ್ತಾರೆ.[4] ಇದನ್ನು ಒಪ್ಪುವವರೇ ಹೆಚ್ಚು. ಎಲ್ಲಕ್ಕೂ ಮುಂಚೆ ನಾಮವೈಷಮ್ಯವೇ ಅಡ್ಡಿಯಾಗಿ ನಿಲ್ಲುತ್ತದೆ. 'ಅವಂತಿಸುಂದರೀಕಥಾಸಾರ'ವೆಂಬ ಅಜ್ಞಾತಕರ್ತೃಕ ಗ್ರಂಥದಲ್ಲಿ ಶೂದ್ರಕನನ್ನು ಉಜ್ಜಯಿನಿಯ ಬ್ರಾಹ್ಮಣರಾಜನೆಂದಿರುವುದರಿಂದಲೂ ಆಂಧ್ರಭೃತ್ಯವಂಶದ ಸ್ವಾತಿಯನ್ನು ಸೋಲಿಸಿದನೆಂದಿರುವುದರಿಂದಲೂ ಶೂದ್ರಕನೇ ವಿಕ್ರಮಾದಿತ್ಯನೆನ್ನುವುದೂ ಉಂಟು.[5] ಚಂದ್ರಬಲಿ ಪಾಂಡೇ ಎಂಬವರು ಪ್ರಾಕೃತ ಶಾಸನಗಳಲ್ಲಿ ಬರುವ ವಾಸಿಷ್ಠೀಪುತ್ರ ಪುಲುಮಾಯಿಯೇ (ಕ್ರಿ. ಶ. ೨೦೦) ಶೂದ್ರಕನೆಂದು ಸಾಧಿಸಲು ಹಿಂದೀಭಾಷೆಯಲ್ಲಿ 'ಶೂದ್ರಕ' ಎಂಬ ಗ್ರಂಥವೊಂದನ್ನು ಈಚೆಗೆ ಬರೆದಿದ್ದಾರೆ.[6] ಅವರು ಅನೇಕ ಪ್ರಮಾಣಗಳನ್ನು ಸಂಗ್ರಹಿಸಿದ್ದರೂ ಅವು ನಿರ್ಣಾಯಕವೆನ್ನುವಂತಿಲ್ಲ. ಸ್ಟೆನ್ ಕೋನೋ ಅವರು ಶೂದ್ರಕನೆಂದರೆ ಆಭೀರ ರಾಜಪುತ್ರನಾದ ಶಿವದತ್ತ (ಕ್ರಿ. ಶ. ೩) ನೇಯೆಂದೂ, ಇವನ ಮಗನಾದ ಈಶ್ವರಸೇನನೇ ಆಂಧ್ರವಂಶವನ್ನು ನಾಶಮಾಡಿ ಚೇದಿವಂಶವನ್ನು ಸ್ಥಾಪಿಸಿದನೆಂದೂ ತಿಳಿಯುತ್ತಾರೆ. ಆದರೆ ಇಂದಿನ ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ ಡಾ. ಬಿ. ಎ. ಸಾಲೆ

---

3. *New Indian Antiquary*, Vol. II., No. 2, pp. 76-85.
4. Kale: Introduction to his Edn. of *Mṛcchakatika*, p. xviii.
5. *Proceedings of the All India Oriental Conference*, pp. 193-201.
6. ಪ್ರಕಾಶಕರು—ಮೋತಿಲಾಲ ಬನಾರಸೀದಾಸ, ಪೋಸ್ಟ್ ಬಾಕ್ಸ್ 75, ಬನಾರಸ (1953)

ತೊರೆ ಅವರು ಅನೇಕ ತಾಮ್ರಪಟಗಳ ಮತ್ತು ಶಾಸನಗಳ ಆಧಾರದ ಮೇಲೆ ಗಂಗವಂಶದ ದೊರೆಯೂ ಭೂವಿಕ್ರಮರಾಜನ ತಮ್ಮನೂ ಆದ ಮೊದಲನೆ ಶಿವಮಾರ (ಕ್ರಿ.ಶ. ೬೭೦-೭೨೫) ಮತ್ತು ಅನಂತರ ಪಟ್ಟಕ್ಕೆ ಬಂದ ಎರಡನೆಯ ಮೊಮ್ಮಗ ಶ್ರೀಪುರುಷ ಇವರಿಬ್ಬರೂ ಈ ನಾಟಕದ ಎರಡು ಅರ್ಧಗಳನ್ನು ಬರೆದರೆಂದು ಊಹಿಸುತ್ತಾರೆ.[7] ಅಜ್ಜನು ಬರೆದ ಪ್ರಥಮಾರ್ಧವೇ ಭಾಸನದೆನ್ನುವ 'ದರಿದ್ರಚಾರುದತ್ತ' ವಿರಬಹುದೆನೋ! ಅಂತೂ ಸಂಶೋಧನೆಯಿಂದ ಇನ್ನೂ ಸಮಸ್ಯೆ ಬಗೆಹರಿದಿಲ್ಲ.

ಶೂದ್ರಕನೇ ಬರೆದನೆಂದು ಹೇಳುವ ಮತ್ತೊಂದು ಕೃತಿ–ಇದು 'ಭಾಣ'ವೆಂಬ ರೂಪಕ—'ಪದ್ಮಪ್ರಾಭೃತಕ.' ಅಲ್ಲಿಯೂ ಕರ್ತೃವಿನ ವಿಷಯವಾಗಿ ಹೆಚ್ಚಿನ ಪ್ರಮಾಣಗಳು ದೊರೆಯುವುದಿಲ್ಲ. ಕ್ರಿ. ಶ. ೮ ನೆಯ ಶತಮಾನದ ವಾಮನನು ತನ್ನ 'ಕಾವ್ಯಾಲಂಕಾರಸೂತ್ರವೃತ್ತಿ' ಯಲ್ಲಿ ಮೃಚ್ಛಕಟಿಕದ ಒಂದೆರಡು ಪದ್ಯಗಳನ್ನು ಮೊಟ್ಟಮೊದಲು ಉದಾಹರಿಸಿದ್ದಾನೆ. ಇಲ್ಲಿಯ ಒಂದೆರಡು ಪದ್ಯಗಳು 'ಪಂಚತಂತ್ರ' ದಲ್ಲಿಯೂ ಉದಾಹೃತವಾಗಿರುವುದರಿಂದ ಈ ಕೃತಿ ಕ್ರಿ.ಶ. ೫ನೆಯ ಶತಮಾನಕ್ಕಿಂತ ಅರ್ವಾಚೀನವಲ್ಲವೆನಿಸುತ್ತದೆ. ಭಾಸನ 'ದರಿದ್ರಚಾರುದತ್ತ'ವು ಮೃಚ್ಛಕಟಿಕದ ಸಂಗ್ರಹವೆಂದು ತಿಳಿಯುತ್ತಿದ್ದ ವಿದ್ವಾಂಸರು ಶೂದ್ರಕನನ್ನು ಕಾಳಿದಾಸನಿಗಿಂತ ಪ್ರಾಚೀನನೆನ್ನುತ್ತಿದ್ದರು. ಆದರೆ ಶೋಧಕರ ಸಂತತ ಪರಿಶ್ರಮದಿಂದ 'ಚಾರುದತ್ತ'ದ ಪರಿಷ್ಕರಣವೇ ಮೃಚ್ಛಕಟಿಕವೆಂಬುದು ಸ್ಫುಟತರವಾಗಿದೆ. ಆದಕಾರಣ ಶೂದ್ರಕನು ಭಾಸಕಾಳಿದಾಸರಿಗಿಂತ ಬಹುಶಃ ಈಚಿನವನೇ ಆಗಿರಬೇಕು

ಒಂದು ಅಂಶ ಮಾತ್ರ ನಿಸ್ಸಂದಿಗ್ಧವಾಗಿದೆಯೆನ್ನಬಹುದು. ಅದು ಶೂದ್ರಕನ ದೇಶ. ಸಹ್ಯಪರ್ವತ ಪ್ರಾಂತವಾದ ಕರ್ನಾಟಕವು ಅವನ ವಾಸಭೂಮಿಯಲ್ಲವಾಗಿದ್ದರೆ ನಾಟಕದ ಚಂಡಾಲರು 'ಸಹ್ಯವಾಸಿನಿ' ದುರ್ಗೆಯನ್ನು ನೆನೆಯುತ್ತಿರಲಿಲ್ಲ; ನಗರರಕ್ಷಿಗಳು 'ಕರ್ಣಾಟಕಲಹ' ಮಾಡುತ್ತಿರ

7. Dr. B. A. Saletore: *Bombay University Journal*, Vol. xvi (New Series) pts. 1 & 4

ಲಿಲ್ಲ; ಜನರು ಬೆಳಗಿನ ಊಟಕ್ಕೆ ಅನ್ನದ ಗಂಜಿಯನ್ನು ಬಳಸುತ್ತಿರಲಿಲ್ಲ. ಅವನು ನಾಟಕದಲ್ಲಿ ದ್ಯೂತ, ಚೌರ್ಯ, ವ್ಯವಹಾರ, ವೇಶ್ಯಾವೃತ್ತಿ, ನ್ಯಾಯವಿಚಾರಣೆ, ಅಧಿಕಾರಿಗಳ ವರ್ತನೆ, ಖಳಸ್ವಭಾವ, ಧಾರ್ಮಿಕರ ಆಚಾರ, ಸಾತ್ವಿಕರ ಮನೋಧರ್ಮ, ಸಂಸಾರದ ಸಾವಿರ ಮುಖಗಳು— ಎಲ್ಲವನ್ನೂ ಅಷ್ಟು ವಿನೋದಪೂರ್ಣವಾಗಿ, ಸ್ವಾರಸ್ಯವಾಗಿ, ಚಿತ್ರಿಸಿರುವುದನ್ನು ಮೆಚ್ಚಿದ ಸಹೃದಯನೊಬ್ಬನು ಇದನ್ನು ಬರೆದವನಿಗೆ ನೂರುವರ್ಷ ತುಂಬಿದ ಲೋಕಾನುಭವವೇ ಇದ್ದಿರಬೇಕೆಂದುಕೊಂಡು ತನ್ನ ಆದರವನ್ನು ವ್ಯಕ್ತಪಡಿಸುವ ಪ್ರಸ್ತಾವನಾಪದ್ಯಗಳನ್ನು ಸೇರಿಸಿರಬಹುದೆಂದು ತೋರುತ್ತದೆ. ಕರ್ಣಾಕರ್ಣಿಯಾಗಿ ಬಂದಿದ್ದ ತಥ್ಯಾಂಶವೇ ಇದಾಗಿದ್ದರೂ ಇರಬಹುದು. ಇದಮಿತ್ಥಮೆನ್ನುವಂತಿಲ್ಲ.

## ೨. ಮೃಚ್ಛಕಟಿಕದ ವಿಮರ್ಶೆ

ಈ ನಾಟಕದ ವಸ್ತುಸಂಯೋಜನೆ ಅತ್ಯಂತ ಕಲಾಪೂರ್ಣವಾಗಿರುವಂತೆ ಪಾತ್ರಪರಿಪುಷ್ಟಿಯೂ ಚಿತ್ತಾಕರ್ಷಕವಾಗಿದೆ. ಶೈಲಿ ಹೃದಯಂಗಮವಾಗಿರುವಂತೆ ಜೀವನಮೀಮಾಂಸೆ ಸಾರ್ವಕಾಲಿಕವಾಗಿದೆ. ಈ ಎಲ್ಲ ಗುಣಾಂಶಗಳ ಸಮ್ಮಿಳನದಿಂದ ನಾಟಕದ ರಂಗೋಚಿತತ್ವ ಅದ್ವಿತೀಯವಾಗಿದೆ. ಕವಿಯ ಔಚಿತ್ಯದೃಷ್ಟಿ ನಾಂದಿಯಿಂದ ನಿರ್ವಹಣದವರೆಗೂ ಜಾಗೃತವಾಗಿರುವುದನ್ನಿಲ್ಲಿ ನೋಡಬಹುದು. ಎರಡು ಮೂರನೆಯ ಅಂಕಗಳಲ್ಲಿ ಬರುವ ಜೂಜೇ ಮುಂತಾದ ವರ್ಣನೆಗಳು ಆಪಾತತಃ ಅತಿವಿಸ್ತಾರವಾದಂತೆ ಭಾಸವಾದರೂ, ನಾಟಕವು ಮುಗಿಯುವ ಹೊತ್ತಿಗೆ ಅವಕ್ಕೂ ಹೊಸ ಸಾರ್ಥಕ್ಯವಿರುವುದು ಅರಿವಾಗುತ್ತದೆ. ಕಡೆಯ ವಿಕ್ಷಿಪ್ತ ಘಟನೆಗಳೆಲ್ಲವೂ ಅನಿರೀಕ್ಷಿತವಾಗಿ ಒಂದರ ಮೇಲೊಂದು ಬರುವುದರಿಂದ ಪ್ರೇಕ್ಷಕನ ಕುತೂಹಲ ಕಡೆಯುವರೆಗೂ ಕಡಿಮೆಯಾಗುವುದಿಲ್ಲ. ನಾಟಕದ ಘಟನೆಗಳಿಗೆ ಹಿನ್ನೆಲೆ ಒಂದು ಅರಮನೆಯಲ್ಲ; ಒಂದೆರಡು ಮನೆಗಳೂ ಅಲ್ಲ; ಇಡಿಯ ಉಜ್ಜಯಿನಿಯ ಪಟ್ಟಣವೇ. ಉಜ್ಜಯಿನಿಯೇ ಜೀವಂತವಾಗಿ ನಮ್ಮೊಡನೆ ಮಾತನಾಡುವಂತಿದೆ ನಾಟಕದಲ್ಲಿ. ನಾಟಕದ ಒಂದೆರಡು ದೃಶ್ಯಗಳು ಕಳೆಯುವುದರೊಳಗೇ ನಾವೂ ಉಜ್ಜಯಿನಿಯ ಪ್ರಜೆಗಳಾಗಿ ಬಿಡುತ್ತೇವೆ. ಆ

ಊರಿನ ಜನರ ಸಮೂಹದಲ್ಲಿ ನಾವೂ ಸೇರಿಹೋಗುತ್ತೇವೆ. ಅವರ ಸುಖ ದುಃಖಗಳು, ಆಸೆ ಆಕಾಂಕ್ಷೆಗಳು, ಭಯವ್ಯಸನಗಳು ನಮ್ಮದೇ ಎನಿಸುತ್ತವೆ. ಚಾರುದತ್ತ ವಸಂತಸೇನೆಯರ ಪ್ರಣಯ, ಪ್ರಣಯಸಮಸ್ಯೆಗಳು, ಶಕಾರ ಶರ್ವಿಲಕರ ಚರ್ಯೆಗಳು, ಆರ್ಯಕಪಾಲಕರ ಘರ್ಷಣೆ—ಎಲ್ಲವನ್ನೂ ನಾವು ಉದಾಸೀನರಾಗಿ ನೋಡುವುದಿಲ್ಲ. ಕವಿಯ ಅಭೀಸ್ಟದಂತೆ ಉಜ್ಜಯಿನಿಯ ಪ್ರಜೆಗಳ ಕಣ್ಣಿನಿಂದ ಉದ್ವೆಗ್ನೋ ನೋಡುತ್ತೇವೆ. ಹೀಗೆ ಪ್ರೇಕ್ಷಕರನ್ನು ಪರವಶರನ್ನಾಗಿ ಮಾಡುವ ಆವರಣ ಕಲ್ಪನೆ, ಹಲವು ಹದಿನೆಂಟು ಬಗೆಯ ಪಾತ್ರಗಳ ಸ್ವಭಾವದ ಸೂಕ್ಷ್ಮನಿರೀಕ್ಷಣೆ, ಎಲ್ಲಕ್ಕೂ ಸಾರ್ಥಕ್ಯ ಕಲ್ಪಿಸುವ ಕಥಾಸಂವಿಧಾನ ತಂತ್ರ, ಮನೆಮಾತಿನ ಮೋಹಕ ಶೈಲಿ—ಎಲ್ಲವೂ ಇಷ್ಟು ಉಚ್ಚಪ್ರಮಾಣದಲ್ಲಿ ಕೂಡಿರುವ ಮತ್ತೊಬ್ಬ ನಾಟಕಕಾರನೆಂದರೆ ವಿಶ್ವದಲ್ಲೆಲ್ಲ ಷೇಕ್ಸ್‌ಪಿಯರ್ ಒಬ್ಬನೇ ಎಂದು ಪಾಶ್ಚಾತ್ಯವಿಮರ್ಶಕರೇ ತಲೆದೂಗಿದ್ದಾರೆ. ಕಾಳಿದಾಸ ಭವಭೂತಿಗಳು ಮಹಾಕವಿಗಳೂ ಹೌದು; ಮಹಾನಾಟಕಕಾರರೂ ಹೌದು. ಆ ಪರಸ್ಪರಯೋಗದಿಂದ ಅವರ ಕೃತಿಗಳು ಗಾಂಭೀರ್ಯದಲ್ಲಿಯೂ ಹೆಚ್ಚು; ಔನ್ನತ್ಯದಲ್ಲಿಯೂ ಹೆಚ್ಚು; ಅದನ್ನು ಮೆಚ್ಚುವ ಪಂಡಿತರೂ ಹೆಚ್ಚು. ಆದರೆ ಅಕ್ಷರಸ್ಥರೇ ಅಲ್ಲದವರನ್ನು ಕೂಡ ಮಂತ್ರಮುಗ್ಧಮಾಡುವ ಶಕ್ತಿ ಮೃಚ್ಛಕಟಿಕದಲ್ಲಿ ಅವಕ್ಕಿಂತಲೂ ಹೆಚ್ಚಾಗಿದೆ. ಪ್ರೌಢರಲ್ಲದವರು ಕಾಳಿದಾಸಭವಭೂತಿಗಳ ನಾಟಕಗಳನ್ನು ಸವಿಯಲಾರರು. ಆದರೆ ಆಬಾಲವೃದ್ಧರೂ ಮೃಚ್ಛಕಟಿಕದ ರಸವನ್ನು ಸವಿಯಬಲ್ಲರು. ನಿತ್ಯಜೀವನದ ಸಹಸ್ರಮುಖಗಳನ್ನೇ ಇಂದಿಗೂ ವಾಸ್ತವಿಕವೆನಿಸುವ ರೀತಿಯಲ್ಲಿ ಚಿತ್ರಿಸಿರುವ ಬೇರೊಂದು ನಾಟಕ ಸಂಸ್ಕೃತಸಾಹಿತ್ಯದಲ್ಲಿಲ್ಲ. ಲೋಕಾನುಭವವೇ ಕಳಿತು ಮಾಗಿ ತೊಟ್ಟು ಕಳಚಿ ಬಾಯಿಗೇ ಬಂದು ಬೀಳುವಂತಿದೆ ಇಲ್ಲಿಯ ನೂರಾರು ನೀತಿವಾಕ್ಯಗಳೆಂಬ ಹಣ್ಣುಗಳ ರೂಪದಲ್ಲಿ. ನಿಜವಾಗಿಯೂ ಈ ನಾಟಕದಿಂದ ಜನರ ಮೇಲಾಗುವ ಪರಿಣಾಮ ಬಹುಕಾಲ ನಿಲ್ಲತಕ್ಕುದು; ಇದರಿಂದ ಸಿಕ್ಕುವ ಜ್ಞಾನಾಮೃತ ಅಮರವಾದುದು. ತತ್ಕಾಲದಲ್ಲಿ ದೊರೆಯುವ ಹೃದಯವಿನೋದವಂತೂ ಅನುಭವಿಸಿಯೇ ತಿಳಿಯಬೇಕಾದುದು.

ನಾಟಕಲಕ್ಷಣಕಾರರ ಪರಿಭಾಷೆಯಲ್ಲಿ ಮೃಚ್ಛಕಟಿಕ ಒಂದು

'ಪ್ರಕರಣ', 'ನಾಟಕ'ವಲ್ಲ. 'ನಾಟಕ'ದಲ್ಲಿ ವಸ್ತು ಉನ್ನತ, ನಾಯಕ ಉದಾತ್ತ, ಹಿನ್ನೆಲೆ ಗಂಭೀರ. ಪುರಾಣಪ್ರಸಿದ್ಧವಾದ ಕಥಾನ್ವತ್ತಾಂತ ವನ್ನಾರಿಸಿಕೊಂಡು ಶೃಂಗಾರ ಇಲ್ಲವೆ ವೀರರಸಗಳನ್ನು ಕವಿ ಅಲ್ಲಿ ಗಂಭೀರ ವಾಗಿ ಪ್ರತಿಪಾದಿಸುತ್ತಾನೆ. ಉದಾತ್ತಜೀವನದ ಪ್ರದರ್ಶನಕ್ಕೆ ನಾಟಕ ಮೀಸ ಲಾದ್ದರಿಂದ ಅಲ್ಲಿ ನಿತ್ಯಜೀವನಕ್ಕೆ ಪುರಸ್ಕಾರವಿಲ್ಲ; ಪ್ರವೇಶವೇ ಇಲ್ಲವೆಂದರೂ ತಡೆಯುತ್ತದೆ. ಹಾಸ್ಯ ಬಂದರೆ ಅದೂ ಶೃಂಗಾರಕ್ಕೆ ಉಚಿತವಾದ ನರ್ಮ ಹಾಸ್ಯ ಮತ್ತು ವಿದೂಷಕನ ಪಾತ್ರಕ್ಕೆ ಅದು ಸೀಮಿತ. ಎಲ್ಲ ಪಾತ್ರ ಗಳಲ್ಲೂ ಲೋಕಸಿದ್ಧವಾದ ಸಹಜಹಾಸ್ಯಕ್ಕೆ ಅಲ್ಲಿ ಎಡೆಯಿಲ್ಲ. ನಾಟಕದ ಅಂಕಗಳ ಪರಿಮಿತಿಯೂ ನಿಯಮಿತ. ಆದರೆ ಪ್ರಕರಣದಲ್ಲಿ ಕವಿಗೆ ಸರ್ವ ಸ್ವಾತಂತ್ರ್ಯ. ಕಥೆಯನ್ನು ಅವನೇ ಬೇಕಾದಂತೆ ಕಲ್ಪಿಸಿಕೊಳ್ಳಬಹುದು. ನಿತ್ಯಜೀವನದಲ್ಲಿ ಸಹಜವಾದ ಯಾವುದೇ ಪಾತ್ರವನ್ನೂ ಉಚ್ಚನೀಚಭೇಧ ವಿಲ್ಲದೆ ತರಬಹುದು. ಹತ್ತು ಅಂಕಗಳವರೆಗೂ ವಿಸ್ತರಿಸಬಹುದು. ನಾಯಕನು ಪುರಾಣಪ್ರಸಿದ್ಧನಾಗುವ ಬದಲು ಲೌಕಿಕನೇ ಆಗಿರುವುದು ಪ್ರಕರಣದ ವೈಶಿಷ್ಟ್ಯ. ಇವನ ಜೀವನವೆಲ್ಲವೂ ಆದರ್ಶಪ್ರಣಯ ಇಲ್ಲವೆ ಲೋಕೋತ್ತರ ಧ್ಯೇಯಸಾಧನೆಗಳಿಗೆ ಮೀಸಲಾಗಿರದೆ ಲೌಕಿಕ ವ್ಯವಹಾರ ಗಳಲ್ಲಿಯೇ ಮಗ್ನವಾಗಿರುತ್ತದೆ; ಲೌಕಿಕ ಸುಖ ದುಃಖಗಳಲ್ಲೇ ತೂಗುಯ್ಯಾಲೆ ಯಾಡುತ್ತಿರುತ್ತದೆ. ಪ್ರೇಕ್ಷಕರ ಅಂತಸ್ತಿಗೂ 'ನಾಟಕ'ದ ಪಾತ್ರಗಳ ಅಂತಸ್ತಿಗೂ ಇರುವ ದೊಡ್ಡ ಅಂತರ ಪ್ರಕರಣದಲ್ಲಿ ತಪ್ಪಿಹೋಗುತ್ತದೆ. ನಾಟಕಕ್ಕಿಂತಲೂ ಪ್ರಕರಣವೇ ಬಹುಜನಾವರ್ಜಕವಾಗುವುದರ ರಹಸ್ಯವೇ ಇದು. ಎಲ್ಲರ ಸಹಾನುಭೂತಿಯನ್ನೂ ಏಕವಿಧವಾಗಿ ಸೆಳೆಯಲು ಪೌರಾಣಿಕ ನಾಟಕಕ್ಕಿಂತ ಸಾಮಾಜಿಕನಾಟಕಕ್ಕಿರುವ ಶಕ್ತಿ ಹೆಚ್ಚಿನದು. ಆದರೆ ಸಾಮಾಜಿಕಸಮಸ್ಯೆ ಲಘುವಾಗಿದ್ದಷ್ಟೂ, ಸಂಕುಚಿತವಾಗಿದ್ದಷ್ಟೂ ಅದರ ಯಶಸ್ಸು ಚಂಚಲವಾಗಿರುತ್ತದೆ. 'ಮೃಚ್ಛಕಟಿಕ'ದಲ್ಲಿ ಬರುವ ಸಮಸ್ಯೆ ಮಾನವಕೋಟಿಯ ಮೂಲಸ್ವಭಾವಕ್ಕೇ ಅನ್ವಯಿಸುವುದರಿಂದ ಕೃತಿಯ ಯಶಸ್ಸಿಗೆ ಕಾಲದೇಶಗಳ ಪರಿವರ್ತನೆಯಿಂದ ಯಾವ ಕುಂದೂ ಇಲ್ಲ.

ಶೂದ್ರಕನ ವಸ್ತುಸಂವಿಧಾನಕೌಶಲವನ್ನು ಮನಗಾಣಬೇಕಾದರೆ ಅವನು ಪೂರ್ವಕೃತಿಯಾದ ಭಾಸನ 'ದರಿದ್ರಚಾರುದತ್ತ' ವನ್ನು ಹೇಗೆ

ವಿಸ್ತರಿಸಿಕೊಂಡನೆಂಬುದನ್ನು ತುಲನಾತ್ಮಕವಾಗಿ ಅವಲೋಕಿಸಬೇಕು. 'ಚಾರುದತ್ತ' ಈಗ ನಾಲ್ಕು ಅಂಕಗಳಲ್ಲಿ ಮಾತ್ರ ಉಪಲಬ್ಧ; ಇದು ಕೃತಿಯ ಅಪೂರ್ಣರೂಪವೆಂದೇ ವಿದ್ವಾಂಸರು ಭಾವಿಸುತ್ತಾರೆ. ಇರಲಿ. ಈ ನಾಲ್ಕು ಅಂಕಗಳೇ 'ಮೃಚ್ಛಕಟಿಕ'ದ ಮೊದಲ ನಾಲ್ಕಂಕಗಳ ಸಂಗ್ರಹದಂತಿದೆ. ಚಾರುದತ್ತವಸಂತಸೇನೆಯರ ಸಮಾಗಮ ಶರ್ವಿಲಕ ಮದನಿಕೆಯರ ಸಮಾಗಮದಿಂದಲೇ ಸೂಚಿತವಾಗುತ್ತದೆ. ಅಲ್ಲಿ ಆರ್ಯಕ ಪಾಲಕರ ವೃತ್ತಾಂತವಿಲ್ಲ; ಚಾರುದತ್ತವಸಂತಸೇನೆಯರಿಗೆ ಬಂದ ಘೋರ ವಿಪತ್ತುಗಳೂ, ಪರಿಹಾರಗಳೂ ಒಂದೂ ಇಲ್ಲ; ರಥವಿಪರ್ಯಯದ ಪ್ರಸ್ತಾಪವಿಲ್ಲ; ಮಣ್ಣಿನ ಕಿರುಬಂಡಿಯ ಮಾತೂ ಇಲ್ಲ. ಶಕಾರನ ಕುಬುದ್ಧಿ ಪ್ರಕಾಶಕ್ಕಾಗಲೀ ಧೂತಾದೇವಿಯ ಪತಿಭಕ್ತಿಪ್ರದರ್ಶನಕ್ಕಾಗಲೀ, ರೋಹಸೇನನ ಪಿತೃಪ್ರೇಮ ವಿಕಾಸಕ್ಕಾಗಲೀ ಅಲ್ಲಿ ಅವಕಾಶವಿಲ್ಲ. ಆಭರಣಗಳಿಂದ 'ಚಾರುದತ್ತ'ದ ಕಥೆಯ ಬೆಳವಳಿಗೆಯಾಗುವುದು ನಿಜ. ಆದರೆ ಮೃಚ್ಛಕಟಿಕದಲ್ಲಿ ಆಭರಣಗಳಿಗಿರುವ ಹತ್ತಾರು ಸೂಕ್ಷ್ಮ ಸಾರ್ಥಕ್ಯಗಳನ್ನು ಗಮನಿಸಿದರೆ ಚಾರುದತ್ತದ ಕವಿಪ್ರತಿಭೆಗೂ ಶೂದ್ರಕನ ಪ್ರತಿಭೆಗೂ ಇರುವ ಅಪಾರ ಅಂತರವು ವ್ಯಕ್ತವಾಗುತ್ತದೆ. ಹಳೆಯ ಕಥಾವಸ್ತುವನ್ನೇ ಆಧಾರವಾಗಿಟ್ಟುಕೊಂಡು ಹೊರಟರೂ, ಇದಂಪ್ರಥಮವಾದ, ಅನೇಕ ಹೊಸ ಸಂಗತಿಗಳನ್ನು ಸೇರಿಸಿ 'ಮೃಚ್ಛಕಟಿಕ'ವನ್ನು ಸ್ವಯಂಪೂರ್ಣ ಮಹಾಕೃತಿಯೆನಿಸಿರುವ ಶ್ರೇಯಸ್ಸು ಶೂದ್ರಕನಿಗೆ ಸಲ್ಲಲೇಬೇಕು. ಈ ದೃಷ್ಟಿಯಿಂದ ಅವನು ಕೃತಿಗಿಟ್ಟಿರುವ ಹೆಸರಿನ ಔಚಿತ್ಯವೂ ಪ್ರಶಂಸಾರ್ಹವಾಗಿದೆ.

'ಮೃಚ್ಛಕಟಿಕಾ' ( ಮೃತ್ + ಶಕಟಿಕಾ) ಎಂದರೆ ಮಣ್ಣಿನ ಕಿರುಬಂಡಿ. ಮಕ್ಕಳ ಆಟದ ಬಂಡಿ. (ಆರನೆಯ ಅಂಕದಲ್ಲಿ) ಚಾರುದತ್ತನ ಮಗನು ಪಕ್ಕದ ಮನೆಯ ಹುಡುಗನ ಚಿನ್ನದ ಬಂಡಿಗೆ ಆಸೆಮಾಡಿ ಅಳುತ್ತಾನೆ. ಮಣ್ಣಿನ ಬಂಡಿ ಬೇಡವೆನ್ನುತ್ತಾನೆ. ಆ ಸಂದರ್ಭದಲ್ಲಿ ವಸಂತಸೇನೆಯ ಬಾಯಿಂದ ಕವಿ ಇದರ ಗೂಢಾರ್ಥವನ್ನು ಹೇಳಿಸುತ್ತಾನೆ— 'ಓ ಭಾಗ್ಯದೇವತೆ, ನೀನು ಪದ್ಮಪತ್ರದ ಜಲಬಿಂದುಗಳಂತಿರುವ ಪುರುಷರ ಜೀವನಗಳೊಡನೆಯೇ ಆಟವಾಡುವೆ!' (ಪುಟ ೧೧೨) ಇದಕ್ಕೆ ಮುಂಚೆಯೇ ಧೂತಾದೇವಿಯ ಬಾಯಿಂದಲೂ ಈ ಮಾತು ಬಂದಿದೆ. (ಪು. ೬೪)

ಇದನ್ನು ಓದುತ್ತಿರುವಾಗಲೇ ತಟ್ಟನೆ ಷೇಕ್ಸ್‌ಪಿಯರ್ ಕವಿಯ—

As flies to wanton boys are we to gods
They kill us for their sport.

ಎಂಬ ಸಾಲುಗಳು ನಮ್ಮ ಸ್ಮೃತಿಪಥದಲ್ಲಿ ಸುಳಿಯುತ್ತವೆ. ಹಾಗೆಯೇ ವಿಧಿವಿಲಾಸದ ಕೆಳಗಿನ ವರ್ಣನೆಯಿಂದ ನಾಟಕ ಮುಗಿಯುವಾಗ ಶೂದ್ರಕನ ವಿವಕ್ಷೆಯ ಬಗ್ಗೆ ಸಂದೇಹವುಳಿಯುವುದಿಲ್ಲ—

ಕೆಲರಂ ದೂಷಿಸಿ ತುಂಬಿಸುತ್ತೆ ಕೆಲರಂ ಮೇಲ್ತಂದು ಮತ್ತನ್ಯರಂ
ಕೆಲರಂ ಬೀಳಿಸುತಂತೆ ಮತ್ತೆ ಕೆಲರಂ ತೂಗಾಡಿಸುತ್ತುಂ ವಲಂ
ಸಲೆಯನ್ಯೋನ್ಯಮೆನಿಪ್ಪ ಲೋಕಗತಿಯಂ ಲೋಕಕ್ಕಣಂ ಸೂಚಿಪಂ-
ತಿಳೆಯೊಳ್ ಕ್ರೀಡಿಪುದತ್ತೆ ಕೂಪಘಟದಾ ಯಂತ್ರೋಪಮಂ ದೈವಮೇ ೬೦

ವಿಧಿಯು 'ಕೂಪಘಟಿಕಾಯಂತ್ರ' (ಏತದ ಬಾವಿ ಯಂತ್ರ) ದಂತೆ ಮೇಲಿಂದ ಕೆಳಕ್ಕೆ, ಕೆಳಗಿಂದ ಮೇಲಕ್ಕೆ ಜನರ ಆಗುಹೋಗುಗಳೊಡನೆ ನಿರಂತರವೂ ಆಡುತ್ತಿರುವುದೇ ಈ ನಾಟಕದ ಜೀವನಮೀಮಾಂಸೆ. ಅಧಿಕ ಧನವಂತನಾಗಿದ್ದ ಚಾರುದತ್ತ ತನ್ನ ಸುಗುಣಗಳ ಪರಿಣಾಮವಾಗಿಯೇ ಸರ್ವಸ್ವವನ್ನೂ ಕಳೆದುಕೊಂಡು ಬಡವನಾಗುವುದು, ಬಡತನದ ದುಷ್ಪರಿಣಾಮಗಳೆಲ್ಲವನ್ನೂ ಅನುಭವಿಸಿ, ಪ್ರಾಣಸಂಶಯದ ಸ್ಥಿತಿಗೂ ಬಂದಿಳಿಯುವುದು, ಮತ್ತೆ ವಿಧಿವಿಲಾಸದಿಂದ ಉತ್ತಮೋತ್ತಮ ಅಭ್ಯುದಯಪರಂಪರೆಯನ್ನು ಪಡೆಯುವುದು—ಇವೇ ಈ ನಾಟಕಕಥೆಯ ಮುಖ್ಯ ಸೂತ್ರ. ಈ ಸೂತ್ರವನ್ನು ಕವಿ ಒಂದಿಲ್ಲೊಂದು ರೀತಿಯಲ್ಲಿ ಪ್ರತಿಯೊಂದು ಅಂಕದಲ್ಲಿಯೂ ನೇರವಾಗಲ್ಲದಿದ್ದರೆ ಪರ್ಯಾಯವಾಗಿಯಾದರೂ ಸೂಚಿಸಿಯೇ ಇದ್ದಾನೆ. ಮೊದಲನೆಯ ಅಂಕದ ಪ್ರಸ್ತಾವನೆಯಲ್ಲಿ ಕವಿಯ ವಿವಕ್ಷೆಯನ್ನು 'ವಿಧಿಯ ಗತಿಯು' ಎಂದು ಸೂತ್ರಧಾರನು ನೇರವಾಗಿ ತಿಳಿಸಿದರೆ, ಮುಂದೆ ವಿದೂಷಕ–ಶಕಾರರ ಸಂವಾದದಲ್ಲಿ (ಪು. ೨೫)—

ಶಕಾರ—ದುಷ್ಟವಟು, ಕೆಳಗೆ ಕುಳಿತುಕೊ, ಕುಳಿತುಕೊ.
ವಿದೂಷಕ—ನಮ್ಮನ್ನು ಆಗಲೇ ಕೆಳಗೆ ಕೂರಿಸಿದ್ದಾಗಿದೆ.
ಶಕಾರ—ಯಾರು ?
ವಿದೂಷಕ—ವಿಧಿ.

ಶಕಾರ—ಮೇಲೆ ಏಳು, ಏಳು.

ವಿದೂಷಕ—ಮುಂದೆ ಏಳುತ್ತೇವೆ.

ಶಕಾರ—ಯಾವಾಗ?

ವಿದೂಷಕ ಮತ್ತೆ ದೈವ ಅನುಕೂಲವಾದಾಗ.

ಇದು ಸ್ಫುಟತರವಾಗುತ್ತದೆ. ಹೀಗೆ ಮನುಷ್ಯನ ಏಳು ಬೀಳುಗಳಿಗೆ ಕಾರಣವಾಗಿ ನಿಂತಿರುವ ವಿಧಿ ಮನುಷ್ಯನನ್ನು ಆಟಗೆಯಂತೆ ಆಡಿಸುತ್ತಿರುವುದನ್ನು ಕವಿ ನಾಟಕದುದಕ್ಕೂ ತೋರಿಸಹೊರಟಿದ್ದಾನೆ. ಎರಡನೆಯ ಅಂಕದ ಜೂಜಾಟದ ವರ್ಣನೆಯೆಲ್ಲ ಹೀಗೆ ಸಾಂಕೇತಿಕವಾಗಿ ವಿಧಿಯ ಕ್ರೀಡೆಯ ವರ್ಣನೆಯೇ. ನಾಯಕನಾದ ಚಾರುದತ್ತನೊಬ್ಬನೇ ಅಲ್ಲ, ನಾಯಿಕೆಯಾದ ವಸಂತಸೇನೆ ಮಾತ್ರವೇ ಅಲ್ಲ;—ಇಲ್ಲಿ ಬರುವ ಗೌಣಪಾತ್ರಗಳು ಕೂಡ ತಮ್ಮ ತಮ್ಮ ಜೀವನದಲ್ಲಿ ಅನಿಶ್ಚಿತವಾದ ಏಳು ಬೀಳುಗಳನ್ನು ಕಾಣುತ್ತಿರುವವರೇ. ವಿಧಿ ಯಾವಾಗಲೂ ಸ್ವಲ್ಪ ವಿಕಟ. ಗುಣ ಸಂಪನ್ನರಿಗೆಲ್ಲ ನೂರಾರು ತೊಂದರೆಯನ್ನೊಡ್ಡುವುದರಲ್ಲೇ ವಿಧಿಗೆ ಆನಂದವೆಂಬಂತೆ ಮೊದಲು ಕಾಣುತ್ತದೆ. ಚಾರುದತ್ತನಿಗೆ ಬಡತನದ ನೂರಾರು ವ್ಯಥೆಗಳಾದರೆ ವಸಂತಸೇನೆಗೆ ಜನ್ಮತಃ ಹೀನವೃತ್ತಿಯ ಕರಕರೆ. ಶರ್ವಿಳಕನಿಗೆ ನೀಚವೃತ್ತಿಯ ವ್ಯಸನ; ಗೊಲ್ಲರ ಹಳ್ಳಿಯಲ್ಲಿ ನೆಮ್ಮದಿಯಿಂದಿದ್ದ ಆರ್ಯಕನನ್ನೂ ವಿಧಿ ತಂದು ಕಾಲ್ಬೇಡಿ ಹಾಕಿಸಿ ಸೆರೆಯಲ್ಲಿಡುತ್ತದೆ. ಅಯೋಗ್ಯ ಶಿಖಾಮಣಿಯಾದ ಶಕಾರನ ಪ್ರತಿಷ್ಠೆ ಮುಗಿಲುದ್ದವಾಗಿದೆ. ಪಾಲಕನ ಅವಿವೇಕದ ರಾಜ್ಯಭಾರದಲ್ಲಿ, ದುರ್ಮಂತ್ರಿಗಳ ದೌರ್ಜನ್ಯದಿಂದ ಜನರೆಲ್ಲ ಕಂಗಾಲಾಗಿದ್ದಾರೆ. ಗುಣಕ್ಕೂ ಧರ್ಮಕ್ಕೂ ಬೆಲೆಯಿಲ್ಲ; ದುರ್ಗುಣದುರಾಚಾರಗಳೇ ಸುಖಕ್ಕೆ ಮೂಲವೆಂಬಂತೆ ಮೊದಲು ತೋರುತ್ತದೆ. ಆದರೆ ಇದು ಕೊನೆಗೆ ನಿಲ್ಲುವ ಚಿತ್ರವಲ್ಲ. 'ಸತ್ಯಮೇವ ಜಯತೇ', 'ಯತೋ ಧರ್ಮಸ್ತತೋ ಜಯಃ' ಎಂಬ ತತ್ತ್ವಗಳು ಕಡೆಯ ಹೊತ್ತಿಗೆ ಸುಸ್ಪಷ್ಟವಾಗುತ್ತವೆ. ದುರ್ಜನರೆಲ್ಲರಿಗೂ ತಕ್ಕ ಪ್ರಾಯಶ್ಚಿತ್ತವಾಗಿ ಗುಣವನ್ನು ನಂಬಿದವರಿಗೆ ಶುಭಪರಂಪರೆಯೂ ಬರುತ್ತದೆ. ವಿಧಿ ಕುರುಡೆಂದು ಮೊದಲು ಕಂಡರೂ, ವಿಧಿಯ ಲೀಲೆಯಲ್ಲಿ ಒಂದು ಪರ್ಯಂತಿಕವಾದ ಉದ್ದೇಶವಿದೆಯೆಂಬುದು ಕಡೆಗೆ ಅರಿವಾಗುತ್ತದೆ. ಚಾರುದತ್ತನ ಹೊನ್ನು ಹೋಗಿ ಮಗನಿಗೆ ಮಣ್ಣಿನ

ಗಾಡಿ ಬಾರದಿದ್ದರೆ ವಸಂತಸೇನೆ ಅವನನ್ನು ಮೆಚ್ಚಿ ಬರುತ್ತಿರಲಿಲ್ಲ; ಆಕೆ ಆ ಮಗನ ತಾಯಿಯಾಗುತ್ತಿರಲಿಲ್ಲ; ಮಗನ ಗಾಡಿ ಮತ್ತೆ ಹೊನ್ನಾಗುತ್ತಿರಲಿಲ್ಲ. ಹೊನ್ನು ಮಣ್ಣಾಗಿ, ಮಣ್ಣು ಹೊನ್ನಾಗುವ ವಿಧಿವಿಲಾಸ ಪುರುಷನ ಸತ್ವಪರೀಕ್ಷೆಗಾಗಿ ಎಂಬುದೇ ನಾಟಕದ ಮುಖ್ಯ ಸಂದೇಶ. ಇಷ್ಟರಿಂದಲೇ 'ವಸಂತಸೇನೆ' ಅಥವಾ 'ಚಾರುದತ್ತ' ಅಥವಾ 'ಚಾರುದತ್ತ ಮತ್ತು ವಸಂತಸೇನೆ' ಎಂಬ ನಾಮಕರಣಗಳಿಗಿಂತಲೂ 'ಮಣ್ಣಿನ ಕಿರುಬಂಡಿ' ಎಂಬ ನಾಮಕರಣ ಎಷ್ಟು ಔಚಿತ್ಯ ಪೂರ್ಣವಾದುದೆಂಬುದು ವ್ಯಕ್ತವಾಗುತ್ತದೆ.

ಆದರೆ ಅದರ ಸಾರ್ಥಕ್ಯ ಮತ್ತೂ ಸೂಕ್ಷ್ಮತರವಾದುದು. ವಸಂತಸೇನೆ ಆ ಕಿರುಬಂಡಿಯಲ್ಲಿಡುವ ತನ್ನ ಹೊನ್ನು ಪ್ರೇಮಕ್ಕಾಗಿ, ವಾತ್ಸಲ್ಯಕ್ಕಾಗಿ. ಆಕೆ ಮಾಡುವ ಸರ್ವಸ್ವತ್ಯಾಗದ ಪ್ರತೀಕ ಅದು. ಪವಿತ್ರಪ್ರೇಮಕ್ಕಾಗಿ ಆಕೆ ಮುಂದೆ ಪ್ರಾಣತ್ಯಾಗಕ್ಕೂ ಹಿಂಜರಿಯುವುದಿಲ್ಲ. ಈ ಹೊನ್ನೇ ಅವಳ ಪ್ರೇಮವನ್ನು ಅರಳುವಂತೆ ಮಾಡಿದ ಮೊದಲ ಸಾಧನ. ಈ ಹೊನ್ನನ್ನು ನ್ಯಾಸವಾಗಿಡುವ ನೆವದಿಂದಲೇ ಅವಳು ಮೊದಲು ಚಾರುದತ್ತನ ಗೃಹ ಪ್ರವೇಶ ಮಾಡಿದಳು. ಮುಂದೆ ಗೃಹಿಣಿಯಾಗುವ ಕನಸನ್ನು ಕಂಡಳು. ಶಕಾರನು ಸುರಿದ ಅಷ್ಟೈಶ್ವರ್ಯವನ್ನೂ ತೃಣೀಕರಿಸಿದಳು. ಈ ಹೊನ್ನನ್ನು ಕಳ್ಳ ಕದ್ದುಕೊಂಡು ಹೋದನೆಂದೇ ಮತ್ತೆ ಚಾರುದತ್ತನು ಅವಳಿಗೆ ರತ್ನ ಹಾರವನ್ನು ಕಳುಹಿಸುವಂತಾಯಿತು. ಕಳ್ಳನು ಕದ್ದರೂ ಮತ್ತೆ ಹೊನ್ನು ವಸಂತಸೇನೆಗೇ ಸಿಕ್ಕಿದುದರಿಂದ, ಎರಡರಲ್ಲೊಂದನ್ನಾದರೂ ಅವಳು ಮತ್ತೆ ಹಿಂದಿರುಗಿಸುವ ಅಗತ್ಯ ಬಂದಿತು; ಅದಕ್ಕಿಂತ ಹೆಚ್ಚಾಗಿ ಮನಸ್ಸು ಕಾತರಿಸುತ್ತಿದ್ದ ಪ್ರಿಯಸಮಾಗಮ ಸೌಖ್ಯ ದೊರೆಯಿತು—ಚಾರುದತ್ತನ ಮನೆಯಲ್ಲಿಯೇ. ಚಾರುದತ್ತ ಹಾರವನ್ನು ಪುನಃ ಸ್ವೀಕರಿಸದ ಕಾರಣ ಮಗನಿಗೆ ಹೊನ್ನನ್ನು ಪರ್ಯಾಯವಾಗಿ ಕಿರುಬಂಡಿಯಲ್ಲಿಟ್ಟು ಕೊಡುತ್ತಾಳೆ— ವಸಂತಸೇನೆ. ಈ ಹೊನ್ನಿನ ಕಥೆ ಇಲ್ಲಿಗೇ ಮುಗಿಯುವುದಿಲ್ಲ. ಇಲ್ಲಿಂದ ಆರಂಭವಾಗುತ್ತದೆ. ಇದನ್ನು ಮತ್ತೆ ವಸಂತಸೇನೆಗೆ ಹಿಂದಿರುಗಿಸುವ ಪ್ರಯತ್ನ ಚಾರುದತ್ತನಿಂದ ನಡೆಯುತ್ತದೆ. ಅದನ್ನು ಕಂಕುಳಲ್ಲಿಟ್ಟು ಕೊಂಡ ವಿದೂಷಕನು ನೇರವಾಗಿ ನ್ಯಾಯಾಲಯಕ್ಕೆ ಧಾವಿಸಿ, ಶಕಾರನೊಡನೆ ಗುದ್ದಾಡುತ್ತಾ, ಬಹಳ ಮಾರ್ಮಿಕವಾದ ಸನ್ನಿವೇಶದಲ್ಲಿ

ಚಾರುದತ್ತನೇ ಅಪರಾಧಿಯೆಂಬ ತೀರ್ಪಿಗೆ ಸಾಧಕವಾಗುವಂತೆ ಈ ಹೊನ್ನನ್ನು ಕೆಳಗೆ ಕೆಡವುತ್ತಾನೆ. ಹೀಗೆ ಮಣ್ಣಿನ ಕಿರುಬಂಡಿಯಲ್ಲಿಟ್ಟ ಹೊನ್ನು ಮಗುವನ್ನೂ ಮಗುವಿನ ತಂದೆಯನ್ನೂ ಮೃತ್ಯು ಮುಖಕ್ಕೊಯ್ಯುವ ವರೆಗೂ ಕಥೆ ಬೆಳೆಯುತ್ತದೆ. ಬಡವನ ಕೈಯಲ್ಲಿ ಹೊನ್ನು ಮಣ್ಣಾಗುವ ಅಂಶ, ಹೊನ್ನಿನಿಂದಲೇ ಸಕಲ ಅನರ್ಥ, ಅಪಾಯ ಪರಂಪರೆಗಳೂ ಒದಗುವ ಅಂಶ—ಇದರಿಂದ ಸೂಚಿತವಾಗುವುದಿಲ್ಲವೆ? ಕೃತಿಯ ಹೆಸರು ಸುಮ್ಮನೆ 'ಮಣ್ಣಿನ ಕಿರುಬಂಡಿ' ಯಾದರೂ ಪ್ರಸಂಗಬಲದಿಂದ ಅದು ಹೊನ್ನು ತುಂಬಿದ ಮಣ್ಣಿನ ಬಂಡಿಯೆಂಬುದನ್ನು ಮರೆಯಲಾಗದು.

ಭಾಸನ ಚಾರುದತ್ತದಲ್ಲಿಲ್ಲದ, ಮತ್ತು ಕಥೆಯ ವಿಕಾಸಕ್ಕೆ ಅತ್ಯಂತ ಆಗತ್ಯವಾದ ಘಟನೆ 'ರಥವಿಪರ್ಯಯ' ಅಥವಾ ಬಂಡಿಗಳ ಬದಲಾವಣೆ. ವಿಧಿಯ ಆಟವೇ ಹೀಗೆ. ಆಕಸ್ಮಿಕವಾಗಿ ವಸಂತಸೇನೆ ಚಾರುದತ್ತನ ಬಂಡಿಯ ಬದಲು ಶಕಾರನ ಬಂಡಿಯನ್ನೇರಿ, ತಾನೂ ಸತ್ತು, ಪ್ರಾಣೇಶ್ವರನ ಮರಣಕ್ಕೂ ನಿಮಿತ್ತವಾಗುವ ಪರಿಸ್ಥಿತಿ ಬರುತ್ತದೆ, ಧೂರ್ತ ಶಕಾರನ ಕುಬುದ್ಧಿಯಿಂದಾಗಿ. ಹೊನ್ನನ್ನು ಮಣ್ಣಿನ ಬಂಡಿಯಲ್ಲಿಟ್ಟುದು ಅದನ್ನು ಹೊನ್ನಿನದನ್ನಾಗಿ ಮಾಡುವುದಕ್ಕೆಂಬುದನ್ನು ನೆನೆದರೆ ಅದರ ಉದ್ದೇಶ 'ರಥವಿಪರ್ಯಯ'ವೇ ಎಂದು ಖಚಿತವಾಗಿ ತೋರದೆ ಇದ್ದೀತೆ? ಈ ಆಟಿಗೆಯ ರಥಪರ್ಯಯ ಕ್ಷಿಪ್ರದಲ್ಲೇ ಪ್ರತ್ಯಕ್ಷ ರಥವಿಪರ್ಯಯವನ್ನೂ ಸೂಚಿಸುವುದೆಂದರೆ ಕವಿಕಲ್ಪನೆಯ ಪ್ರಭೆ ಎಷ್ಟು ಪ್ರಖರವಾದುದೆಂಬುದರ ಕಲ್ಪನೆ ಬಂದೀತು!

ನಾಟಕದ ನಾಮಸ್ವಾರಸ್ಯವನ್ನು ಇದುವರೆಗೂ ನೋಡಿದೆವು. ಪಾತ್ರ ಸ್ವಾರಸ್ಯದ ಬಗೆಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ಚಾರುದತ್ತನು ದುಡ್ಡಿನಲ್ಲಿ ಬಡವನಾದರೂ ಗುಣದಲ್ಲಿ ಬಡವನಲ್ಲದ ಶ್ರೀಮಂತ; ಅನೇಕ ಆಶ್ರಿತಪಕ್ಷಿಗಳ ವಾಸವೃಕ್ಷವೇ ಅವನು. ಅವನ ಹೃದಯ ವಿಶಾಲವಾದುದು; ಕಲಾರಸಿಕವಾದುದು. ಭಾವ ರೇಭಿಲನ ವೀಣೆಯಂತೆ, ಕಳ್ಳ ಶರ್ವಿಲಕನ ಕನ್ನದ ಕೌಶಲವನ್ನೂ ಕೊಂಡಾಡುವಂತಹುದು. ಗಂಧಕುಸುಮಗಳನ್ನು ಅವನು ಎಂದೂ ಬಿಟ್ಟವನಲ್ಲ. ವಸಂತಸೇನೆಯ ರೂಪರಾಶಿಗೆ ಪರವಶನಾದರೂ ತನ್ನ ಬಡತನದಲ್ಲಿ ಮನಸ್ಸನ್ನು ಬಿಗಿಹಿಡಿದುಕೊಂಡಿದ್ದ ಜಿತೇಂದ್ರಿಯ. ಎಷ್ಟೇ ಬಡತನ

ವಿದ್ದರೂ ದಾನಾರ್ಹಳಾದ ಪ್ರೇಯಸಿಯಿಂದ ಪ್ರತಿಗ್ರಹ ಮಾಡದ ಆತ್ಮಾಭಿಮಾನ ಅವನದು. ಅವನ ಸಂಪರ್ಕದಲ್ಲಿದ್ದವರೆಲ್ಲರೂ—ಮೈತ್ರೇಯ, ಸಂವಾಹಕ, ಇತ್ಯಾದಿ ಅವನಿಗಾಗಿ ಪ್ರಾಣತ್ಯಾಗಮಾಡಲೂ ಸಿದ್ಧರಾಗುವಂತಹ ಸರಳ ಹೃದಯಿಗಳು. ಅವನು ದೇವಪಿತೃಕಾರ್ಯಗಳಲ್ಲೂ ಆತಿಥಿಸತ್ಕಾರದಲ್ಲೂ ಎಂದೂ ಉದಾಸೀನನಾದವನಲ್ಲ. ಎಲ್ಲ ಬಗೆಯಲ್ಲೂ ಸಜ್ಜನರ 'ಆದರ್ಶ'ನೆಂದು ಕವಿ ಆತನನ್ನು ಚಿತ್ರಿಸಿದ್ದಾನೆ. ಊರಿಗೆ ಊರೇ ಅವನನ್ನು 'ಆರ್ಯ' ಚಾರುದತ್ತನೆಂದು ಗೌರವಿಸುತ್ತದೆ. ವಧ್ಯಕಾಲದಲ್ಲಿ ಸಹ ಚಂಡಾಲರು ಕೂಡ ಆ ಉಪಪದವನ್ನು ತೆಗೆಯಲು ಸಿದ್ಧರಲ್ಲ. ಅವನ ಪ್ರೇಮದ ವಿವಿಧಾವಸ್ಥೆಗಳು ಈ ನಾಟಕದಲ್ಲಿ ಮಿಕ್ಕ ಶೃಂಗಾರನಾಟಕಗಳಂತೆ ಹೆಚ್ಚು ಸ್ಥಾನವನ್ನಾಕ್ರಮಿಸುವುದಿಲ್ಲ. ನಿರಪರಾಧಿಗೆ ಮರಣದಂಡನೆಯಾದರೂ ಅವನು ಸ್ವಲ್ಪವೂ ಎದೆಗುಂದಿ ಅಧೀರನಾಗುವುದಿಲ್ಲ. ಇದು ಅವನ ಮಾಹಾತ್ಮ್ಯದ ದೊಡ್ಡ ಅಂಶ. ಚಾರುದತ್ತನ ಮಹತ್ತ್ವವಿರುವುದು ಅವನ ಪ್ರೀತಿಯ ಸಹಜತೆಯಲ್ಲಿ; ಅವನು ಎಡರುಗಳಲ್ಲಿಯೂ ತೋರುವ ಮನೋದಾರ್ಢ್ಯದಲ್ಲಿ. ಬಡತನ ಬಂತೆಂದು ಅವನು ಶೋಕಿಸುತ್ತಾನೆ; ನಿಜ. ಆದರೆ ತನಗೆ ಸುಖ ಕಡಿಮೆಯಾಯಿತೆಂದಲ್ಲ; ತನ್ನಿಂದ ಇತರರಿಗೆ ಉಪಯೋಗ ಕಡಿಮೆಯಾಯಿತಲ್ಲಾ ಎಂದು. ಗುಣಾನುರಾಗಿಗಳೆಲ್ಲರೂ ಅವನ ಮಿತ್ರರೇ. ದುರ್ಗುಣನಿವಾಸನಾದ ಶಕಾರನು ಅವನಿಗೆ ನಿಷ್ಕಾರಣವೈರಿ. ಆದರೆ ಶಕಾರನ ಮೇಲೂ ಚಾರುದತ್ತನಿಗೆ ಕೋಪವಿಲ್ಲ; ಅನಿರೀಕ್ಷಿತ ಉಪಕಾರ ಮಾಡಿ ಕಡೆಗೆ ಶತ್ರುವನ್ನು ಜಯಿಸುವ ಆದರ್ಶಪುರುಷ ಚಾರುದತ್ತ. ನಾಟಕದ ಬಹುಭಾಗ ಚಾರುದತ್ತನ ವಿಶೇಷಗುಣಗಳ ಪ್ರಕಟನೆಗಾಗಿಯೇ ಕವಿಯಿಂದ ನಿಯೋಜಿತವಾಗಿದೆ. ಅವನ ವ್ಯಕ್ತಿತ್ವ ಸರ್ವಾಂಗಸುಂದರವಾಗಿ ಆದರೆ ಮಾನವಸಹಜವಾಗಿ ನಾಟಕದಲ್ಲಿ ಮೈಗೂಡಿದೆ.

ಪ್ರಾಯಿಕವಾಗಿ ಸಂಸ್ಕೃತನಾಟಕಗಳಲ್ಲೆಲ್ಲ ಶೃಂಗಾರನಿರೂಪಣೆಯೆಂದರೆ ನಾಯಿಕೆಯ ಸಮಾಗಮಕ್ಕಾಗಿ ಅನೇಕಯತ್ನಗಳು, ವಿಘ್ನಗಳು, ವಿದೂಷಕಾದಿಗಳ ಸಹಾಯದಿಂದ ಯಶಃಪ್ರಾಪ್ತಿ—ಈ ಚೌಕಟ್ಟಿನಲ್ಲಿಯೇ ಇರುತ್ತದೆ. ಮೃಚ್ಛಕಟಿಕದಲ್ಲಿ ಮಾತ್ರ ಇದು ವಿರುದ್ಧವಾಗಿದೆ. ಇಲ್ಲಿ ನಾಯಕನು ನಿರ್ವ್ಯಾಪಾರನಾಗಿ ಸುಮ್ಮನಿರುತ್ತಾನೆ. ಮಾಡುವ ಪ್ರಯತ್ನ

ವೆಲ್ಲ ನಾಯಿಕೆ ವಸಂತಸೇನೆಯದು. ಚಾರುದತ್ತನು ಆಗಲೇ ಹೆಂಡತಿ ಮಕ್ಕಳೊಡನೆ ಸಂಸಾರ ಮಾಡಿಕೊಂಡಿರುವ ಸದ್ಗೃಹಸ್ಥನಾದರೂ, ಅತ್ಯಂತ ಬಡತನದಲ್ಲಿದ್ದರೂ, ಊರಿಗೆ ಊರೇ ಕೊಂಡಾಡುತ್ತಿರುವ ಅವನ ಗುಣ ಗಳಿಗೆ ಮನಸೋತ ಗಣಿಕೆ ವಸಂತಸೇನೆ. ಅವನ ರೂಪಸಂಪತ್ತೂ ಅವನ ಗುಣಸಂಪತ್ತಿಗೆ ಅನೂನವಾದುದು. ಮೊದಲು ಶಕಾರನ ಐಶ್ವರ್ಯಕ್ಕೆ ಮಾರುಹೋದ ಗಣಿಕೆಯ ತಾಯಿಯೇ ಕಡೆಗೆ ಚಾರುದತ್ತನನ್ನು ನೋಡಿ ದೊಡನೆ ಮಗಳ ಯೌವನ ಸಫಲವಾಯಿತೆಂದುಕೊಳ್ಳುತ್ತಾಳೆ. ಗಣಿಕೆ ಯರು 'ಮಾರ್ಗಜಾತ ಲತೆ'ಗಳಂತೆ, ಕೆರೆಬಾವಿಗಳಂತೆ, ಸರ್ವಜನರಿಗೂ ಸಮಾನ ಭೋಗ್ಯವಸ್ತುಗಳು; ಒತ್ತೆಯಿತ್ತವನನ್ನು ಮನವಿರಲಿ, ಇಲ್ಲದಿರಲಿ, ಕೂಡಬೇಕು, ಕುಲಸ್ತ್ರೀಯರ ಗೌರವಕ್ಕೆ ಅವರು ಅನರ್ಹರು, ಎಂದು ಮುಂತಾಗಿ ಪರಂಪರಾಗತವಾಗಿ ಬಂದಿದ್ದ ಅಪಪ್ರಥೆಯನ್ನು ತಪ್ಪಿಸಿ ಲೋಕ ಕ್ಕೊಂದು ಹೊಸ ಮಾರ್ಗದರ್ಶನಮಾಡಲು ಹಾತೊರೆಯುವ ಸೌಂದರ್ಯ ಲಕ್ಷ್ಮಿಯೇ ವಸಂತಸೇನೆ. ಅವಳು ನಿರ್ದಾಕ್ಷಿಣ್ಯವಾಗಿ ಶಕಾರನನ್ನು ಒದ್ದು ತಳ್ಳಿ, ಅವನ ಹೆದರಿಕೆಗಳಿಗೆ ಸಗ್ಗದೆ, ಅವನ ಸವಿಮಾತುಗಳಿಗೆ ಬಗ್ಗದೆ, ತಾನಾಗಿ ಚಾರುದತ್ತನನ್ನು ಒಂದಿಲ್ಲೊಂದು ನೆವದಿಂದ ಸಂಧಿಸಿ ಸುಖಿಸಿದ ಪ್ರಣಯಕಾತರೆ. ಕುಬೇರನ ಮನೆಯಂತಿರುವ ಅವಳ ಮನೆಯ ಐಶ್ವರ್ಯ ವನ್ನೆಲ್ಲ ವರ್ಣಿಸಿಯೇ ಕವಿಗೆ ತೃಪ್ತಿಯಿಲ್ಲ. ಅದೆಲ್ಲವನ್ನೂ ದೂರೀಕರಿಸಿ, ಕಡುಬಡವನಾದ ಚಾರುದತ್ತನ ಕೈಹಿಡಿದ ಮಡದಿಯಾಗುವುದೊಂದೇ ಅವಳ ಮನದಾಸೆ. ಜಾತಿಯಲ್ಲಿ, ವೃತ್ತಿಯಲ್ಲಿ, ಗಣಿಕೆಯಾದರೂ ಅವಳ ಮನಸ್ಸಿನ ಈ ಪ್ರೇಮನೈರ್ಮಲ್ಯ ಅವಳನ್ನು ಪೂಜ್ಯಳನ್ನಾಗಿ ಮಾಡುತ್ತದೆ. ಶಕಾರನ ವೈರದಿಂದ ಅವಳಿಗೆ ಪ್ರಾಣಾಪತ್ತೇ ಬಂದರೂ ಅದಕ್ಕವಳು ಸಂತೋಷದಿಂದ ಸಿದ್ಧಳಾಗುತ್ತಾಳೆ. ಮೊದಲು ಚಾರುದತ್ತನ ಕಾಲೊತ್ತು ವವನಾಗಿದ್ದು ಆಮೇಲೆ ಜೂಜುಗಾರನಾಗಿ ಬವಣೆಪಡುತ್ತಿದ್ದ ಸಂವಾಹಕನಿಗೆ ಅವಳು ಹೊನ್ನನ್ನಿತ್ತು ಉಪಕಾರ ಮಾಡುತ್ತಾಳೆ. ಮುಂದೆ ವೈರಾಗ್ಯದಿಂದ ಅವನು ಬೌದ್ಧಭಿಕ್ಷುವಾದರೂ ತಪ್ಪಿಸಿಕೊಂಡ ಮದ್ದಾನೆಯ ಸೊಂಡಲಿಗೆ ಸಿಕ್ಕಿ ಸಾಯುವ ಸ್ಥಿತಿಯಲ್ಲಿದ್ದಾಗ, ವಸಂತಸೇನೆಯ ಸೇವಕನು ಅವನ ಪ್ರಾಣ ವನ್ನುಳಿಸುತ್ತಾನೆ. ಪ್ರತ್ಯುಪಕಾರಕ್ಕಾಗಿ ಕಾಯುತ್ತಿದ್ದ ಇವನ ಸಮಾಧಾನಕ್ಕಾ

ಗಿಯೋ ಎಂಬಂತೆ ಇವನನ್ನೇ ಆಪತ್ಕಾಲದಲ್ಲಿ ವಸಂತಸೇನೆಯ ಸಂರಕ್ಷಕನನ್ನಾಗಿ ಕವಿ ತರುತ್ತಾನೆ. ಹೀಗೆ ಎರಡನೆಯ ಅಂಕದ ಗೌಣಪಾತ್ರಗಳಿಗೂ ಮುಂದಿನ ಕಥಾವಿಕಾಸದಲ್ಲಿ ಯೋಗ್ಯಸ್ಥಾನ ದೊರೆಯುತ್ತದೆ. ತಾನಾಗಿ ಒಲಿದು ಬಂದ ಈ ಗಣಿಕೆಗೆ ಚಾರುದತ್ತನ ಮಗನನ್ನು ಕಂಡರೆ ಹೆತ್ತ ತಾಯಿ ಧೂತಾದೇವಿಗಿಂತ ಕಡಿಮೆಯಿಲ್ಲದ ವಿಶ್ವಾಸ! ಆದರಿಂದಲೇ ತನ್ನ ಆಭರಣವನ್ನೆಲ್ಲ ಹಿಂದುಮುಂದೆ ನೋಡದೆ ಅವಳು ಕಳಚಿಕೊಡುವುದು! ಪ್ರೇಮದ ಸವಿಕಹಿಗಳನ್ನು ಬಲ್ಲ ಈಕೆ ತನ್ನ ದಾಸಿ ಮದನಿಕೆಯ ದಾಸ್ಯನಿವೃತ್ತಿಗೆ ನಿಷ್ಕ್ರಯವಿಲ್ಲದಿದ್ದರೂ ಅಡ್ಡಿಯಿಲ್ಲವೆಂದು ಮುಂದಾಗುವಳು. ಅವರನ್ನು ಗಂಡಹೆಂಡಿರನ್ನಾಗಿ ಮಾಡಿ, ತನಗೂ ಅಂತಹ ಯೋಗ ಲಭಿಸೀತೆ ಎಂದು ನಿಟ್ಟುಸಿರುಬಿಡುವಳು. ವಸಂತಸೇನೆ ಶಕುಂತಲೆಯಂತೆ ಮುಗ್ಧೆಯಲ್ಲ; ಸೀತೆಯಂತೆ ಜಗದ್ವಂದ್ಯೆಯೂ ಅಲ್ಲ; ಆದರೆ ಪ್ರೇಮಮಯಿಯಾದ ಚದುರೆ. ಹೊನ್ನಿನ ಹೊಳಪಿಗಿಂತಲೂ ಮಣ್ಣಿನ ಬೆಲೆಯನ್ನರಿತ ಬುದ್ಧಿವಂತೆ. ಅನೀತಿಯ ಆಡಂಬರಕ್ಕಿಂತಲೂ ನೀತಿಯ ಮೇಲ್ಮೆಯನ್ನು ಬಲ್ಲ ನಾರೀಮಣಿ. ಅವಳು ಕಲಾಕಲಾಪಕುಶಲೆ ಹೌದು; ಆದರೆ ಕಾಮವ್ಯಾಪಾರ ಪರವಶೆಯಲ್ಲ. ಅನುರಾಗವೇ ನಾರಿಯ ಜೀವನಕ್ಕೆ ಸಾಫಲ್ಯಕಾರಿ; ಗುಣಮೂಲವಾದುದೇ ಅನುರಾಗ; ಅನುರಾಗದ ಸಹಜ ಪರ್ಯವಸಾನವೇ ವಿವಾಹ— ಎಂಬ ತತ್ತ್ವಗಳನ್ನು ತನ್ನ ಜೀವನದಲ್ಲಿ ಎಂತಹ ಅಡ್ಡಿಗಳೊದಗಿದರೂ ಬಿಡದೆ ಸಾಧಿಸಿದ ಧೀರೆ ವಸಂತಸೇನೆ.

ಶೂದ್ರಕನ ಕಥಾಜಾಲದಲ್ಲಿ ಚಾರುದತ್ತ–ವಸಂತಸೇನೆಯರ ಪ್ರೇಮಸೂತ್ರವು ಒಂದೆಳೆಯಾದರೆ, ಶಕಾರ–ವಸಂತಸೇನೆಯರ ವ್ಯವಹಾರ ಎರಡನೆಯ ಎಳೆ; ಶಕಾರ–ಚಾರುದತ್ತರ ಸಂಘರ್ಷ ಮೂರನೆಯ ಎಳೆ. ಈ ಮೂರರಲ್ಲೂ ಶಕಾರನ ಖಳಸ್ವಭಾವದ ಪ್ರಭಾವ ಎದ್ದು ನಿಲ್ಲುವಂತಹುದು. ಆತನ ಅನುನಯವೇ ಅಂಜಿಕೆಯನ್ನೂ ಜುಗುಪ್ಸೆಯನ್ನೂ ತರುವಂಥದು. ಶಕಾರನು ಖಳ, ಧೂರ್ತ, ಅಯೋಗ್ಯ; ನೀಚ, ಕೇಡಿಗ, ಮೂರ್ಖ; ಆಡಂಬರದ ಅಂಜುಬುರುಕ; ಹಾಸ್ಯಾಸ್ಪದನಾದ ಮುಖಹೇಡಿ. ಅವನ ವೇಷ, ನಡೆ, ನುಡಿ ಎಲ್ಲವೂ ತಿರುಗುಮುರುಗೇ, ಹಾಸ್ಯಾಸ್ಪದವೇ. ರಾಜನ ಹೆಂಡತಿ ತನ್ನ ಭಗಿನಿಯಾದ್ದರಿಂದ ತಾನು ರಾಜನಿಗಿಂತ ಸ್ವಲ್ಪ ಹೆಚ್ಚಿನವನೆಂದು ತಿಳಿಯುವ ತಿಳಿಗೇಡಿ. ಇವನು ಪರದೇಶಿ, ಪರಪುಷ್ಟ; ಪರನಿಂದಕ; ಶುದ್ಧ

ಗ್ರಾಮೀಣ. ಇವನ ಭಾಷೆ ಗ್ರಾಮ್ಯ; ಭಾವನೆಯೂ ಹೀನ. ಇಂಥವನು ಹೇಸಿಕೆಗೆ ಎಲ್ಲರಿಂದಲೂ ಗುರಿಯಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಸುಸಂಸ್ಕೃತೆಯಾದ ವಸಂತಸೇನೆಯ ಕಣ್ಣಿಗೆ ಇವನು ಶೂಲವಾಗುವುದಿರಲಿ; ಇವನ ಭೃತ್ಯಮಿತ್ರರೇ ಇವನನ್ನು ಕಂಡು ಹೇಸುತ್ತಾರೆ. ಭಾಸನು ಇವನ ಪಾತ್ರದಲ್ಲಿ ವೇಷಭಾಷಾಭೂಷಣಗಳ ವೈರೂಪ್ಯವನ್ನು ಮಾತ್ರ ಪ್ರಕಟಿಸಿದ್ದನು: ಇವನ ಪುರಾಣ ಪರಿಚಯವಂತೂ ಮಕ್ಕಳನ್ನೂ ನಗಿಸುವಂತಹುದು. ಇವನ ಮಾತಿನ ವೈಖರಿ, ಒಕ್ಕಣೆ ಎಲ್ಲವೂ ಶುದ್ಧ ಅಸಂಬದ್ಧವೇ. ಆದರೆ ಶೂದ್ರಕನು ಇಷ್ಟಕ್ಕೇ ನಿಲ್ಲದೆ ಇವನ ಅಬುದ್ಧಿಯ ಜತೆಗೆ ಇವನ ಉಪಮಾತೀತ ಕುಬುದ್ಧಿಯನ್ನೂ ಮಾರ್ಮಿಕವಾಗಿ ಪ್ರದರ್ಶಿಸಿದ್ದಾನೆ. ಈ ನಾಟಕದಲ್ಲಿ ಶಕಾರನೇ ಚಾರುದತ್ತ ವಸಂತಸೇನೆಯರ ಪ್ರತಿಕೂಲದೈವದ ಪ್ರತಿಮೂರ್ತಿಯಾಗಿ ಬಿಡುತ್ತಾನೆ. ವಿಟ ಚೇಟರನ್ನು ವಂಚಿಸಿ ವಸಂತಸೇನೆಯ ಕತ್ತು ಕಿವುಚುವುದರಲ್ಲಿಯೂ, ಮುಂದೆ ನ್ಯಾಯಾಲಯದಲ್ಲಿ ವಾದಿಸುತ್ತಾ ಪ್ರಸಂಗಾವಧಾನದಿಂದ ಒಂದೊಂದು ಹೊಸ ಅಂಶವನ್ನೂ ಚಾರುದತ್ತನಿಗೆ ವಿರುದ್ಧಸಾಕ್ಷ್ಯವಾಗುವಂತೆ ನಿರ್ವಹಿಸುವುದರಲ್ಲಿಯೂ ತನ್ನ ಅತಿಬುದ್ಧಿಯನ್ನು ತೋರಿಸುತ್ತಾನೆ. ಈ ಜುಗುಪ್ಸಾವಹವಾದ ಜಂತುವಿಗೆ ಔದಾಸೀನ್ಯಕ್ಕಿಂತ ಹೆಚ್ಚಿನ ಶಿಕ್ಷೆ ಉಚಿತವೆನಿಸದೆಂಬ ಕವಿಕಲ್ಪನೆ ಶ್ಲಾಘನೀಯವಾಗಿದೆ. ಅವನ ಜತೆಯಲ್ಲಿ ಬರುವ ವಿಟನು ರಸಿಕಶಿರೋಮಣಿಯಷ್ಟೇ ಅಲ್ಲ; ನಡತೆಯಲ್ಲಿಯೂ ದೊಡ್ಡ ಧ್ಯೇಯಗಳನ್ನುಳ್ಳವನು. ಶಕಾರ-ವಿಟರ ವೈಷಮ್ಯವನ್ನು ಶೂದ್ರಕನು ಹೆಜ್ಜೆ ಹೆಜ್ಜೆಗೂ ತೋರಿಸಿ ಇಬ್ಬರ ವ್ಯಕ್ತಿತ್ವವೂ ಸ್ಫುಟವಾಗುವಂತೆ ಮಾಡಿದ್ದಾನೆ. ವಿಟನಿಂದ ವಸಂತಸೇನೆಗಾಗುವ ಉಪಕಾರ ಸಣ್ಣದಲ್ಲ. ಅವನನ್ನು ಉಜ್ಜಯಿನಿಯ ಸುಸಂಸ್ಕೃತ ನಾಗರಿಕರ ಪ್ರತಿನಿಧಿಯೆನ್ನಬಹುದು. ಅವನು ವಸಂತಸೇನೆಯ ಬಗೆಗೆ ಹಾಡುವ ಚರಮಗೀತೆ ಉಜ್ಜಯಿನಿಯ ಜನರೆಲ್ಲರ ಶೋಕವನ್ನೂ ಪ್ರತಿನಿಧಿಸುತ್ತದೆ.

ಶಕಾರನ ಪಾತ್ರದಲ್ಲಿ ಬರುವ ವಿಕಟಹಾಸ್ಯಕ್ಕೂ ವಿದೂಷಕನಾದ ಮೈತ್ರೇಯನ ಪಾತ್ರದಲ್ಲಿ ಬರುವ ಮೃದುಹಾಸ್ಯಕ್ಕೂ ಉತ್ತರ ದಕ್ಷಿಣಧ್ರುವಗಳ ಅಂತರವಿದೆ. ಶೂದ್ರಕನಂತೂ ಹಾಸ್ಯದ ವಿವಿಧ ಪ್ರಕಾರಗಳ ಪ್ರದರ್ಶನದಲ್ಲಿ ಅದ್ವಿತೀಯ. ವಸಂತಸೇನೆಯ ಮೋಹಕ ಪರಿಹಾಸವೂ ಮದನಿಕೆಯ

ಲಘುಹಾಸ್ಯವೂ, ಶರ್ವಿಲಕನ ಗಂಭೀರಹಾಸ್ಯವೂ, ವಸಂತಸೇನೆಯ ಚೇಟನ ನರ್ಮಹಾಸ್ಯವೂ, ಮೃಚ್ಛಕಟಿಕದುದ್ದಕ್ಕೂ ಬರುವ ಹಾಸ್ಯಸಮುದ್ರದ ಕೆಲವು ತೆರೆಗಳು ಮಾತ್ರ. ಈ ಎಲ್ಲ ಹಾಸ್ಯಗಳಿಗಿಂತಲೂ ಚಿರಸ್ಮರಣೀಯವಾಗಿ ಗೌರೀಶಿಖರದಂತೆ ಎದ್ದು ನಿಲ್ಲುವುದು ವಿದೂಷಕನ ಹಾಸ್ಯ. ಇತರ ನಾಟಕಗಳಲ್ಲಿರುವಂತೆ ವಿದೂಷಕನು ಇಲ್ಲಿ ಬರಿಯ ಅನ್ನಚಿಂತೆಯಿಂದಲೂ ಅಧಿಕ ಪ್ರಸಂಗದಿಂದಲೂ ವಿಕೃತವೇಷಾದಿಗಳಿಂದಲೂ ಹಾಸ್ಯಕರನಾಗುವುದಿಲ್ಲ. ಅವನ ಬುದ್ಧಿಯೇ ಷೇಕ್ಸ್‌ಪಿಯರನ ವಿದೂಷಕರ ಬುದ್ಧಿಯಂತೆ ಅಪರೀಕ್ಷಿತ ಹಾಗೂ ಅತಿವಿನೋದಕರವಾದ ಕಲ್ಪನೆಗಳಿಗೆ ನಿವಾಸಸ್ಥಾನ. ಅಂತಹ ಬಡತನದ ಭವಣೆಯಲ್ಲಿಯೂ ಮೈತ್ರೇಯನ ಕೆಳೆತನವಿದ್ದುದರಿಂದ ಚಾರುದತ್ತನ ಮನಸ್ಸಿಗೆ ಅಶಾಂತಿ ಬಾರಲಿಲ್ಲವೆಂದು ತೋರುತ್ತದೆ. ಇಲ್ಲದಿದ್ದರೆ ಅವನು ವಸಂತಸೇನೆಯ ಸಮಾಗಮವನ್ನು ಸ್ವಾಗತಿಸುವ ಮನೋಧರ್ಮವುಳಿಯುತ್ತಿರಲಿಲ್ಲ. ಮೈತ್ರೇಯನೇನೂ ವಸಂತಸೇನೆಯ ಸಮಾಗಮಕ್ಕೆ ಅನುಕೂಲಿಸುವ ಉಪಾಯಗಳನ್ನು ಮಿಕ್ಕ ನಾಟಕಗಳಲ್ಲಿರುವಂತೆ ಕೈಗೊಳ್ಳುವುದಿಲ್ಲ. ತದ್ವಿರುದ್ಧವಾಗಿ, ಸೂಳೆಯ ಸಹವಾಸ ಬೇಡವೆಂಬ ಉಪದೇಶ ಮಾಡುತ್ತಾನೆ. ಆದರೆ ಅವನ ಗೆಳೆತನ, ಅವನ ಹಾಸ್ಯವೃತ್ತಿ, ಎಂಥ ಘೋರ ದುಃಖವನ್ನಾದರೂ ಮರೆಸುವಂತಹುದು. ಆ ಹಾಸ್ಯಪ್ರಭಾತದಲ್ಲಿ ಚಿಂತಾಂಧಕಾರಕ್ಕೆ ತೆರಪಿಲ್ಲ. ಮೈತ್ರೇಯನ ಗೆಳೆತನ ಎಷ್ಟು ಆಳವಾದುವೆಂಬುದಕ್ಕೆ ನ್ಯಾಯಾಲಯದಲ್ಲಿಯೂ, ವಧ್ಯಸ್ಥಾನದಲ್ಲಿಯೂ ಬೇಕಾದಷ್ಟು ನಿದರ್ಶನಗಳು ದೊರೆಯುತ್ತವೆ. ಅವನು ಹೊನ್ನಿಗಾಗಿ ಚಾರುದತ್ತನನ್ನಾಶ್ರಯಿಸಿದವನಲ್ಲ. ಬಡತನದಲ್ಲಿಯೂ ಅವನಿಗಾಗಿ ಪ್ರಾಣತ್ಯಾಗ ಮಾಡಲು ಸದಾ ಸಿದ್ಧವಿರುವ ನಿಷ್ಕಲ್ಮಷ ಹೃದಯಿ. ಮೃಚ್ಛಕಟಿಕದ ಆಕರ್ಷಣೆಗೆ ಮೈತ್ರೇಯನ ವ್ಯಕ್ತಿತ್ವ ಬಹಳ ಮಟ್ಟಿಗೆ ಕಾರಣ. ಅವನಿಲ್ಲದೆ ಈ ನಾಟಕದ ಸೊಗಸು ಉಳಿಯಲಾರದು.

ಮುಖ್ಯಪಾತ್ರಗಳ ಪರಿಪುಷ್ಟಿಯಲ್ಲಿ ಮಾತ್ರವಲ್ಲ, ಗೌಣಪಾತ್ರಗಳ ಸ್ಪಷ್ಟವ್ಯಕ್ತಿಚಿತ್ರವನ್ನು ಯಥೋಚಿತ ಘಟನೆಗಳ ಮೂಲಕ ರೇಖಿಸುವುದರಲ್ಲಿಯೂ ಶೂದ್ರಕನು ವಿಶೇಷವಾಗಿ ಯಶಸ್ವಿಯಾಗಿದ್ದಾನೆ. ನಾಟಕದಲ್ಲಿ ಬರುವ ಚೇಟರು ಮೂರು ಮಂದಿ. ಶಕಾರನ ಚೇಟ ಸ್ಥಾವರಕ; ಚಾರು

ದತ್ತನ ಚೇಟ ವರ್ಧಮಾನಕ; ಮತ್ತು ವಸಂತಸೇನೆಯ ಚೇಟ ಕುಂಭೀಲಕ. ಮೂವರ ಸ್ವಭಾವದಲ್ಲಿಯೂ ಪ್ರಸ್ಫುಟವಾದ ಅಂತರಗಳಿವೆ. ಶಕಾರನ ಚೇಟನು ಪುಣ್ಯಪಾಪಭೀರುವಾದರೂ ಪ್ರಭುವಿನ ಕ್ರೋಧಕ್ಕೆ ಅಂಜುವವನು; ಬುದ್ಧಿಯಲ್ಲಿ ಸಾಮಾನ್ಯ ದರ್ಜೆಯವನು. ಚಾರುದತ್ತನ ಚೇಟನು ಸ್ವಲ್ಪ ಮಂದಗಾಮಿ; ಯಾವ ಕೆಲಸವನ್ನೂ ಬಹು ನಿಧಾನವಾಗಿ ಮಾಡುವವನು; ಮರೆವೂ ಹೆಚ್ಚು. ವಸಂತಸೇನೆಯ ಚೇಟ ಮಾತ್ರ ತೀಕ್ಷ್ಣಬುದ್ಧಿಯವನು; ಮೈತ್ರೇಯನಿಗೂ ಒಗಟೆ ಹೇಳುವವನಂತೆ ದಿಗ್ಭ್ರಮೆಗೊಳಿಸಬಲ್ಲವನು. ಹಾಗೆಯೇ ನಾಟಕದಲ್ಲಿ ಬರುವ ಚೇಟಿಯರೂ ಇಬ್ಬರು-ರದನಿಕೆ ಮತ್ತು ಮದನಿಕೆ. ರದನಿಕೆ ಎಷ್ಟು ಸರಳಸ್ವಭಾವದ, ಗೃಹಕಾರ್ಯನಿರತಳಾದ ಹೆಂಗಸೋ ಮದನಿಕೆ ಅಷ್ಟೇ ಚಾತುರ್ಯ ಸಂಪನ್ನೆಯಾದ ಪ್ರೇಮಕಾತರೆಯಾದ ಯುವತಿ. ಧೂತಾದೇವಿ ಆದರ್ಶ ಗೃಹಿಣಿಯಾದರೆ ವಸಂತಸೇನೆಯ ತಾಯಿ ಒಳ್ಳೆಯ ವ್ಯವಹಾರ ಜ್ಞಾನಸಂಪನ್ನಳೂ ಲೋಕಾನುಭವಪೂರ್ಣಳೂ ಆದ ಮುದುಕಿ. ನಗರರಕ್ಷಿಗಳಿಬ್ಬರಲ್ಲಿ ಚಂದನಕನು ಆರ್ಯಕಪಕ್ಷಪಾತಿ; ವೀರಕನು ಪಾಲಕನ ಭಕ್ತ. ಇಬ್ಬರೂ ತಂತಮ್ಮ ಅಧಿಕಾರನಿರ್ವಹಣೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸುವವರೇ ಆದರೂ ಸಮಯ ಬಂದರೆ ಪಾದಪ್ರಯೋಗಕ್ಕೂ ಹಿಂಜರಿಯುವುದಿಲ್ಲ.

ಒಟ್ಟು ನಾಟಕದ ಕಥಾಭಾಗದಲ್ಲಿ ಚಾರುದತ್ತ-ವಸಂತಸೇನೆ-ಶಕಾರರ ಪ್ರಣಯ-ತ್ರಿಕೋಣವು ಮುಖ್ಯವಸ್ತುವಾದರೆ, ಶರ್ವಿಲಕ ಮದನಿಕೆಯರ ಪ್ರಣಯವೃತ್ತಾಂತವೂ, ಆರ್ಯಕ-ಪಾಲಕರ ರಾಜಕೀಯ ವಿಪ್ಲವವೂ ಗೌಣವಸ್ತುಗಳು. ಷೇಕ್ಸ್ಪಿಯರನ King Lear ನಲ್ಲಿ ವೃದ್ಧರಾಜನ ಮತ್ತು ಅವನ ಕೃತಘ್ನ ಪುತ್ರಿಯರ ಮುಖ್ಯ ಕಥಾಭಾಗಕ್ಕೆ ಪರ್ಯಾಯವಾಗಿ ಪುಷ್ಟಿಯನ್ನು ಗ್ಲಾಸ್ಟರ್ ಮತ್ತು ಅವನ ಕೃತಘ್ನ ಪುತ್ರನ ಗೌಣವೃತ್ತಾಂತ ಬರುವಂತೆ, ಇಲ್ಲಿಯೂ ಮುಖ್ಯಕಥಾಸೂತ್ರವಾದ ಪ್ರೇಮಪಾಶಪ್ರಪಂಚವೇ ಮತ್ತೊಂದು ರೀತಿಯಿಂದ ಮದನಿಕಾ-ಶರ್ವಿಲಕರ ವೃತ್ತಾಂತದಲ್ಲಿ ಸಮರ್ಥಿತವಾಗುತ್ತದೆ. ಮುಖ್ಯ ಕಥೆಯಲ್ಲಿ ನಾಯಿಕೆ ನಾಯಕನ ಸಮಾಗಮಕ್ಕಾಗಿ ಸರ್ವವಿಧವಾದ ತ್ಯಾಗಗಳಿಗೂ ಸಿದ್ಧವಾಗುವಂತೆ, ಗೌಣಕಥೆಯಲ್ಲಿ ನಾಯಕನೇ ನಾಯಿಕೆಯ ಸಮಾಗಮಕ್ಕಾಗಿ

§

ಚೌರ್ಯವೃತ್ತಿಯೇ ಮುಂತಾದ ಹೇಯಕೃತ್ಯಗಳನ್ನೂ ಮಾಡಿ ಮಾನ ತ್ಯಾಗಕ್ಕೂ ಸಿದ್ಧನಾಗುತ್ತಾನೆ. ಆದರೆ ಚಾರುದತ್ತ–ವಸಂತಸೇನೆಯರ ಪ್ರಣಯವು ದುರಂತತೆಯ ಪರ್ಯವಸಾನವನ್ನು ತಪ್ಪಿಸಿಕೊಂಡು ಶುಭಾಂತ ವಾಗಬೇಕಾದರೆ ವಿಧಿಯ ಆಯುಧವಾಗಿ ಕೆಲಸಮಾಡುವ ಮುಖ್ಯಪಾತ್ರವೂ ಶರ್ವಿಲಕನದೇ. ಶರ್ವಿಲಕನು ಸೆರೆಯಿಂದ ತನ್ನನ್ನು ಬಿಡಿಸಿದ ಮೇಲೆ ಆರ್ಯಕನು ಚಾರುದತ್ತನ ರಥದಲ್ಲಿ ಆಶ್ರಯಪಡೆದು, ಚಾರುದತ್ತನಿಂದ ಉಪಕೃತನಾಗಿದ್ದುದರಿಂದಲೇ ಮುಂದೆ ಅವನಿಗೇ ದೊರೆತನ ಬಂದಾಗ ಚಾರುದತ್ತನ ಭಾಗ್ಯರವಿ ಮತ್ತೆ ಮೂಡುವುದು ಸಾಧ್ಯವಾಗುತ್ತದೆ. ಹೀಗೆ ಆರ್ಯಕನಿಗೂ ಶರ್ವಿಲಕನಿಗೂ ಚಾರುದತ್ತನಿಗೂ ಗಂಟು ಹಾಕಿರುವುದ ರಿಂದ ನಾಟಕದ ಕಾರ್ಯೈಕ್ಯವು ತುಂಬಾ ಮನನೀಯವಾಗಿದೆ.

ರಸದ ದೃಷ್ಟಿಯಿಂದಲೂ ಮೊದಲು ಶೃಂಗಾರಾಭಾಸ, ಆಮೇಲೆ ಶೃಂಗಾರಗಳು ಹಾಸ್ಯದ ಮಗ್ಗುಲಲ್ಲಿಯೇ ಪುಷ್ಟಿಯನ್ನು ಪಡೆಯುತ್ತಾ ಕರುಣರಸದ ಶಿಖರವನ್ನು ಮುಟ್ಟಿ ಕ್ರಮೇಣ ವೀರಾದ್ಭುತಾದಿ ರಸಗಳಲ್ಲಿ ಪರ್ಯವಸಾನವನ್ನು ಪಡೆಯುತ್ತವೆ. ಹೀಗೆ 'ನಾಟಕ'ಕ್ಕಿಂತ ವಿಲಕ್ಷಣವಾಗಿ ನಾನಾರಸಗಳ ಸಮಾವೇಶವನ್ನು ಈ ಸುದೀರ್ಘ ಪ್ರಕರಣದಲ್ಲಿ ಗುರುತಿಸ ಬಹುದು.

ಕಡೆಯದಾಗಿ, ಶೂದ್ರಕನ ಶೈಲಿಯ ಬಗೆಗೆ ಒಂದು ಮಾತು. ಅದು ಆಡುಮಾತಿನ ಸಹಜಸಾಮರ್ಥ್ಯವನ್ನೂ ಅಪ್ರತಿಹತ ವೇಗವನ್ನೂ ಪಡೆ ದಿರುವ ಅತ್ಯಂತ ನಾಟಕೀಯವಾದ ಶೈಲಿ. ಶೂದ್ರಕನ ಅನೇಕ ವಾಕ್ಯ ಗಳು ಒಂದೆರಡೇ ಪದಗಳಿಂದಾಗಿರುವುದನ್ನು ನೋಡಬಹುದು. ಸಂಭಾ ಷಣೆಗಳಲ್ಲಿ ಕೃತ್ರಿಮ ಚಮತ್ಕಾರಕ್ಕಾಗಲಿ, ಸಲ್ಲದ ಸಮಾಸಗಳಿಗಾಲಿ ಕವಿ ಎಲ್ಲಿಯೂ ಮಾರುಹೋಗಿಲ್ಲ. ಗಾದೆ ಮಾತುಗಳಂತೂ ಅವನ ಕೈತುದಿ ಯಲ್ಲೇ ನೂರಾರಿರುತ್ತವೆ. ವರ್ಣನೆಯಲ್ಲಿಯೂ ಶೂದ್ರಕನ ಉಪಮಾ, ರೂಪಕ, ಉತ್ಪ್ರೇಕ್ಷೆ, ಮುಂತಾದ ಅಲಂಕಾರಗಳಲ್ಲಿ ತನ್ನದೇ ಆದ ವೈಶಿಷ್ಟ್ಯವಿದೆ. ಕವಿ ಸಮಯಗಳ ಕೃತ್ರಿಮಭಾರ ಎಲ್ಲಿಯೂ ಕಾಣಬರು ವುದಿಲ್ಲ. ಯಾವುದನ್ನು ವರ್ಣಿಸುವಾಗಲೂ ಕವಿಪ್ರತಿಭೆಯ ನವೋನ್ಮೇಷ ತೋರುವಂತೆ ಒಂದು ಅನಿರೀಕ್ಷಿತವೂ ವಿನೂತನವೂ, ಅತಏವ ಬಹು

ಚಮತ್ಕಾರಕಾರಿಯೂ ಆದ ಸುಂದರಚಿತ್ರವೊಂದನ್ನು ನಮ್ಮ ಕಣ್ಣು ಮುಂದೆ ತಂದು ನಿಲ್ಲಿಸುವುದು ಶೂದ್ರಕನ ಅಸಾಧಾರಣ ಗುಣ. ನಾಂದೀ ಪದ್ಯಗಳಲ್ಲೇ ಈ ಗುಣ ಗಮನವನ್ನು ಸೆಳೆಯುತ್ತದೆ. ಇದು ಮುಂದೆ ದುರ್ದಿನ, ಚಂದ್ರೋದಯ, ನ್ಯಾಯಾಲಯ, ದ್ಯೂತ, ಚೌರ್ಯ, ಮುಂತಾದುವುಗಳ ವರ್ಣನೆಯಲ್ಲಿ ಪ್ರತಿಪದ್ಯದಲ್ಲೂ ನಮ್ಮ ಲಕ್ಷ್ಯಕ್ಕೆ ಬರುತ್ತದೆ. ಉದಾಹರಣೆಗಳನ್ನು ಉಲ್ಲೇಖಿಸುವ ಅಗತ್ಯವಿಲ್ಲ. ನೀತಿಶ್ಲೋಕಗಳನ್ನು ಚಿರಸ್ಮರಣೀಯವಾಗಿ ಬರೆಯುವುದರಲ್ಲಂತೂ ಶೂದ್ರಕನು ಅದ್ವಿತೀಯನೇ ಸರಿ. ದೀರ್ಘಸಮಾಸಗಳನ್ನು ಬರೆಯುವ ಯೋಗ್ಯತೆಯೇ ತನಗಿಲ್ಲವೆಂದು ವಿಮರ್ಶಕರೆಲ್ಲಿಯಾದರೂ ಹೇಳಿಯಾರು ಎಂಬ ಭಯದಿಂದಲೋ ಎನ್ನುವಂತೆ ವಸಂತಸೇನೆಯ ಮನೆಯ ಎಂಟೆಂತಸ್ತುಗಳ ವರ್ಣನೆಯನ್ನು ದೀರ್ಘಸಮಾಸಗಳಿಂದಲೇ ಶೂದ್ರಕನು ಮಾಡಿದ್ದಾನೆ. ಇಂದಿನ ಅಭಿರುಚಿಗೆ ಇದೇ ನೀರಸವಾಗಿ ತೋರುತ್ತದೆ. ಅಂತೂ ಈ ನಾಟಕದ ವಿಮರ್ಶೆಯನ್ನು ಶೂದ್ರಕನ ಮಾತುಗಳಿಂದಲೇ ಮುಗಿಸಬಹುದಾಗಿದೆ. ಕೆಳಗಿನ ಪದ್ಯದಲ್ಲಿ ಬರುವ ಒಂದೊಂದು ಮಾತೂ ಅರ್ಥಗರ್ಭಿತವಾದುವು.

ಚಾರುದತ್ತನೆಂಬ ವಿಪ್ರ ವಣಿಜ ತರುಣ ಬಡವನು
 ಆ ಅವಂತಿಪುರದೊಳು ;
ಅವನ ಗುಣಕೆ ಸೋತ ಗಣಿಕೆಯೇ ವಸಂತಸೇನೆಯು
 ಮೇಣ್ ವಸಂತಲಕ್ಷ್ಮಿಯು ;
ಅವರ ಪ್ರೇಮಚರಿತೆಯಂತೆ ನೀತಿಮಾರ್ಗದರ್ಶನ
 ನ್ಯಾಯದೋಷವರ್ಣನ ;
ಖಳರ ಮತಿಯು ವಿಧಿಯ ಗತಿಯು ಸಕಲವನ್ನು ಶೂದ್ರಕ
 ನೃಪನೆ ಗೈದ ಭದ್ರಕ. (I. z)

ಮೃಚ್ಛಕಟಿಕದಲ್ಲಿ ಪ್ರತಿಬಿಂಬಿತವಾಗಿರುವ ಜನಜೀವನವನ್ನು ಕುರಿತು ಎರಡು ಮಾತು ಹೇಳಿ ಈ ವಿಮರ್ಶೆಯನ್ನು ಮುಗಿಸಬಹುದು. ಪ್ರಾಚೀನ ಭಾರತದ ನಗರಸಂಸ್ಕೃತಿಯ ಗುಣದೋಷಗಳೆರಡೂ ಕೃತಿಯಲ್ಲಿ ಸ್ವಚ್ಛವಾಗಿ ಪ್ರತಿಫಲಿಸಿವೆ. ಒಟ್ಟಿನ ಮೇಲೆ ನಾಟ್ಯ, ಸಂಗೀತ, ಚಿತ್ರ, ಸಾಹಿತ್ಯ, ಮುಂತಾದ ಲಲಿತ ಕಲೆಗಳೆಲ್ಲವನ್ನೂ ಪರಿಪೋಷಿಸುತ್ತ, ಆಸ್ವಾದಿಸುತ್ತ,

ನಾಗರಿಕರಸಿಕರ ನಿತ್ಯಜೀವನ ಸಾಗಿದ್ದುದು ಎದ್ದು ನಿಲ್ಲುತ್ತದೆ. ವೇಶ್ಯೆಯರ ಮಹಾಭವನಗಳು ಎಲ್ಲ ಕಲೆಗಳಿಗೂ ನೆಲೆವೀಡಾಗಿರುತ್ತಿದ್ದುವು. ಸೌಂದರ್ಯ ದೃಷ್ಟಿ ನಾಗರಿಕಜೀವನದಲ್ಲಿ ಆರ್ಥಿಕದೃಷ್ಟಿಗಿಂತ ಹೆಚ್ಚು ಪುರಸ್ಕೃತವಾಗಿದ್ದಿತು. ವಿಟನಂತಹ ಕಲೋಪಾಸಕರಿಂಲಿ, ಚಾರುದತ್ತನಂತಹ ಕುಲಪುತ್ರರೂ, ಶರ್ವಿಲಕನಂತಹ ಸಾಹಸಿಗಳೂ ಈ ದೃಷ್ಟಿಯನ್ನುಳ್ಳವರು. ಅಸಂಸ್ಕೃತಿಯ ಮೂರ್ತಿಯಾದ ಶಕಾರನು ವಸಂತಸೇನೆಯನ್ನು ಬಯಸುವುದಾದರೂ ತಾನೂ ಸುಸಂಸ್ಕೃತನೆನಿಸಿಕೊಳ್ಳಬೇಕೆಂದೇ. ನಾಗರಿಕಜೀವನದಲ್ಲಿ ಕಲಾಕೇಂದ್ರಗಳಿಗೆ ಪ್ರಾಶಸ್ತ್ಯವಿದ್ದಂತೆ, ಪುಷ್ಪೋದ್ಯಾನ, ಜಲಕ್ರೀಡೆ ಮುಂತಾದ ವಿಹಾರಕೇಂದ್ರಗಳಿಗೂ ಸ್ಥಾನವಿದ್ದಿತು. ಜಾತಿಭೇದಗಳಿದ್ದರೂ ವಿಲಾಸಜೀವನದಲ್ಲಿ ಎಲ್ಲರಿಗೂ ಸಾಮ್ಯವಿದ್ದಿತು. ಜನ್ಮತಃ ಬ್ರಾಹ್ಮಣರಾಗಿದ್ದವರೂ ಚಾರುದತ್ತನಂತೆ ವರ್ತಕವೃತ್ತಿಯನ್ನೋ, ಶರ್ವಿಲಕನಂತೆ ಚೌರ್ಯವೃತ್ತಿಯನ್ನೋ ಅನುಸರಿಸುವುದು ಅಸಂಭವವಾಗಿರಲಿಲ್ಲ. ಆರ್ಥಿಕವಾಗಿ ಗಣಿಕೆಯರ ಸ್ಥಾನ ಬಹಳ ದೊಡ್ಡದಾಗಿದ್ದರೂ ಸಾಮಾಜಿಕವಾಗಿ ಅವರಿಗಿದ್ದ ಸ್ಥಾನ ಬಹಳ ಕಡಿಮೆಯದು. ಕುಲವಧುವಿನ ಪದವಿ ಹೊನ್ನಿಗಿಂತ ಹೆಚ್ಚೆಂದು ಅವರು ಭಾವಿಸುತ್ತಿದ್ದರು. ಜೂಜು ನಾಗರಿಕರ ದೊಡ್ಡ ವಿನೋದವಾಗಿದ್ದಿತು. ಅದರಿಂದ ರಾಜನ ಭಂಡಾರಕ್ಕೂ ವರಮಾನವಿದ್ದುದರಿಂದ ಅದನ್ನು ನೋಡಿಕೊಳ್ಳುವ ಅಧಿಕಾರಿಗಳೂ ಇರುತ್ತಿದ್ದರು. ನಗರದ ಶಾಂತಿಯನ್ನು ಕಾಪಾಡಲು ರಕ್ಷಾಧಿಕಾರಿಗಳೂ, ನ್ಯಾಯಾಲಯಗಳೂ ಇರುತ್ತಿದ್ದುವು. ನ್ಯಾಯದಾನದ ಪದ್ಧತಿ ಬಹುಮಟ್ಟಿಗೆ ಇಂದಿನಂತೆಯೇ ಸುವ್ಯವಸ್ಥಿತವೂ ಕ್ರಮಬದ್ಧವೂ ಆಗಿದ್ದಿತು. ಸೆಟ್ಟಿಕರಣಿಕರ ಸಹಾಯದಿಂದ ಸಾಕ್ಷಿಗಳ ವಿಚಾರಣೆಯನ್ನು ನ್ಯಾಯಾಧೀಶನು ಮಾಡುತ್ತಿದ್ದನು. ನ್ಯಾಯಾಧೀಶನ ತೀರ್ಪನ್ನು ಬದಲಾಯಿಸುವ ಕಡೆಯ ಅಧಿಕಾರವೂ ರಾಜನಿಗಿರುತ್ತಿದ್ದಿತು. ಜನರು ಸೊಗಸಾದ ಆಸನಗಳಿಂದ ಕೂಡಿದ ಎತ್ತಿನ ಬಂಡಿಗಳನ್ನು ಉಪಯೋಗಿಸುತ್ತಿದ್ದರು. ಮದುವೆ ಮೆರವಣಿಗೆಗೂ, ಹೆಂಗಸರನ್ನು ಕರೆದು ಹೋಗುವಾಗಲೂ ಬೇರೆ ಬೇರೆ ಬಗೆಯ ಬಂಡಿಗಳಿರುತ್ತಿದ್ದುವು. ಕುಲಪುತ್ರರಿಂದ ಹಿಡಿದು ಚಂಡಾಲರವರೆಗಿನ ಹಲವಾರು ಜಾತಿಗಳವರೂ ತಮ್ಮ ತಮ್ಮ ಉದ್ಯೋಗಗಳಲ್ಲಿ ನ್ಯಾಯಕ್ಕೂ ಧರ್ಮಕ್ಕೂ ಮಹತ್ತ್ವವನ್ನೀಯುತ್ತಿ

ದ್ದರು. ಪುಣ್ಯಪಾಪಗಳಲ್ಲಿ ನಂಬಿಕೆ ಅಚಲವಾಗಿತ್ತು. ಅನ್ಯಾಯ ಅಧರ್ಮ ಗಳನ್ನು ಜನರು ಸಹಿಸುತ್ತಿರಲಿಲ್ಲ. ದೈವಭಕ್ತಿಯಿದ್ದಿತು. ರಾಜನು ಅಯೋಗ್ಯನೆಂದು ಕಂಡಾಗ ಅವನನ್ನು ತಳ್ಳಿ ಮತ್ತೊಬ್ಬನನ್ನು ತರುವು ದಕ್ಕೂ ಅವರು ಹಿಂಜರಿಯುತ್ತಿರಲಿಲ್ಲ. ದೇಶದಲ್ಲಿ ಬೌದ್ಧಧರ್ಮವು ಪ್ರಚಾರ ಗೊಂಡಿತ್ತು. ಭಾರತದ ನಾಗರಿಕಜೀವನ ಒಟ್ಟನಲ್ಲಿ ಸುಖಶಾಂತಿಸಂಪನ್ನ ವಾಗಿಯೂ, ಕಲಾವಿಲಾಸಮಯವಾಗಿಯೂ ಧರ್ಮಸದಾಚಾರನಿರತವಾ ಗಿಯೂ ಇದ್ದಿತು. ಜೂಜು, ಕೊಲೆ, ಕಳ್ಳತನಗಳು, ವೇಶ್ಯಾವೃತ್ತಿ, ಇವು ಎದ್ದುಕಾಣುತ್ತಿದ್ದ ದೋಷಗಳು. ಜನರ ಮೂಢನಂಬಿಕೆಗಳನ್ನು ಸ್ವಾರ್ಥ ಕ್ಕಾಗಿ ಉಪಯೋಗಿಸುವ ಕುಬುದ್ಧಿಗಳೂ ಇರುತ್ತಿದ್ದರು. ಊರಿನ ರಸ್ತೆ ಗಳು, ಉದ್ಯಾನಗಳು, ಅಂತಸ್ತಿನ ಸೌಧಗಳು, ಎಲ್ಲವೂ ಜನರ ಸೌಂದರ್ಯ ದೃಷ್ಟಿಯನ್ನು ತೋರಿಸುತ್ತಿದ್ದವು. ಮನೆಯೊಳಗಿನ ಊಟ, ಉಡುಗೆ, ಆಹಾರ ನಡವಳಿಕೆಗಳು ಮಾತ್ರ ಇಂದಿನ ಪ್ರತಿರೂಪಗಳಾಗಿಯೇ ಇದ್ದು ವೆನ್ನುವುದು ಗಮನಾರ್ಹ. ಸ್ತ್ರೀಧನವನ್ನು ಗಂಡಸರು ಮುಟ್ಟುತ್ತಿರಲಿಲ್ಲ. ಕೊಲೆಯೇ ಮುಂತಾದ ಅಪರಾಧಗಳಿಗೆ ಉಗ್ರದಂಡನೆಯಿದ್ದಂತೆ, ರಾಜ ಕೀಯ ಬಂದಿಗಳನ್ನು ಬೇಡಿಹಾಕಿ ಸೆರೆಮನೆಗಳಲ್ಲಿಡುತ್ತಿದ್ದರು. ಹುಂಜದ ಕಾಳಗ, ಟಗರು ಕಾಳಗ, ಆನೆಯ ಸವಾರಿ, ಮುಂತಾದುವು ನಾಗರಿಕರ ಕೆಲವು ವಿನೋದಗಳಾಗಿದ್ದುವು. ರಾಜಾಜ್ಞೆಯನ್ನು ಊರುದ್ದಕ್ಕೂ ಡಂಗುರ ಸಾರುತ್ತಿದ್ದರು. ದಾಸ್ಯವೃತ್ತಿ ಪ್ರಚಾರದಲ್ಲಿತ್ತು ; ಹಣಕೊಟ್ಟು ಬಿಡಿಸಿ ಕೊಳ್ಳುವ ರೂಢಿಯೂ ಇದ್ದಿತು. ವೈದಿಕಯಾಗಗಳು ಇನ್ನೂ ಬಳಕೆಯಲ್ಲಿ ದ್ದುವು. ಹೀಗೆ ಮೃಚ್ಛಕಟಿಕದಲ್ಲಿ ಪ್ರಾಚೀನ ಭಾರತದ ನಾಗರಿಕ ನಿತ್ಯ ಜೀವನದ ಸತ್ಯಸ್ವರೂಪವೇ ಬಹುಮಟ್ಟಿಗೆ ಪ್ರತಿಬಿಂಬಿತವಾಗಿದೆಯೆನ್ನಲಡ್ಡಿ ಯಿಲ್ಲ. 'ಅವಂತಿಸುಂದರೀಕಥೆಯಲ್ಲಿ' ಹೇಳಿರುವಂತೆ ಶೂದ್ರಕನು ಖಡ್ಗ ಧಾರೆಯಿಂದ ಭೂಮಂಡಲವನ್ನು ಮತ್ತೆ ಮತ್ತೆ ಗೆದ್ದ ಮಹಾತ್ಮನಷ್ಟೇ ಅಲ್ಲ; ತನ್ನ ಚರಿತಾರ್ಥ ರೂಪವಾದ ಕಾವ್ಯಧಾರೆಯಿಂದಲೂ ಜಗತ್ತನ್ನು ಮತ್ತೆ ಆಕ್ರಮಿಸಿದ ಕವಿರಾಜ—

> ಶೂದ್ರಕೇಣಾಸಕೃಜ್ಜಿತ್ವಾ ಸ್ವಚ್ಛಯಾ ಖಡ್ಗಧಾರಯಾ ।
> ಜಗದ್ ಭೂಯೋಽಪ್ಯವಷ್ಟಬ್ಧಂ ವಾಚಾ ಸ್ವಚರಿತಾರ್ಥಯಾ ॥

# ಪಾತ್ರವರ್ಗ

## (ಪುರುಷರು)

ಸೂತ್ರಧಾರ
ಚಾರುದತ್ತ—ನಾಯಕ
ಮೈತ್ರೇಯ (**ವಿದೂಷಕ**)—ಚಾರುದತ್ತನ ಗೆಳೆಯ
ರೋಹಸೇನ—ಚಾರುದತ್ತನ ಸಣ್ಣ ಮಗ
ವರ್ಧಮಾನಕ—ಚಾರುದತ್ತನ ಚೇಟ
ಸಂಸ್ಥಾನಕ (**ಶಕಾರ**)—ಪಾಲಕರಾಜನ ಭಾವಮೈದುನ, ಖಳನಾಯಕ
ವಿಟ—ಶಕಾರನ ಸಂಗಡಿಗ
ಸ್ಥಾವರಕ—ಶಕಾರನ ಚೇಟ
ಶರ್ವಿಲಕ—ಬ್ರಾಹ್ಮಣ ಚೋರ, ಮದನಿಕೆಯ ಪ್ರಣಯಿ ಮತ್ತು ರಾಜಕೀಯ ವಿಪ್ಲವದಲ್ಲಿ ಪ್ರಧಾನ ಪಾತ್ರಧಾರಿ
ಆರ್ಯಕ—ಗೋಪಾಲದಾರಕ; ಪಾಲಕನ ವಧೆಗೈದು ಪಟ್ಟಕ್ಕೆ ಬರುವನು
ಸಂವಾಹಕ—ಮೊದಲು ಚಾರುದತ್ತನ ಊಳಿಗದವನು, ಅನಂತರ ಜೂಜುಗಾರ, ಅನಂತರ ಬೌದ್ಧ ಭಿಕ್ಷು
ಮಾಥುರ—ಜೂಜಿನ ಅಧಿಕಾರಿ
ದರ್ದುರಕ—ಜೂಜುಗಾರ, ರಾಜಕೀಯದಲ್ಲಿ ಆರ್ಯಕನ ಪಕ್ಷಕ್ಕೆ ಸೇರಿದವನು
ದ್ಯೂತಕರ—ಮತ್ತೊಬ್ಬ ಜೂಜುಗಾರ
ವೀರಕ ಮತ್ತು ಚಂದನಕ—ನಗರದ ರಕ್ಷಾಧಿಕಾರಿಗಳು
ಸೆಟ್ಟಿ ಮತ್ತು ಕರಣಿಕ—ನ್ಯಾಯಾಲಯದ ಅಧಿಕಾರಿಗಳು
ನ್ಯಾಯಾಧೀಶ
ಶೋಧನಕ—ನ್ಯಾಯಾಲಯದ ಆಳು
ಕುಂಭೀಲಕ—ವಸಂತಸೇನೆಯ ಚೇಟ
ಕರ್ಣಪೂರಕ—ವಸಂತಸೇನೆಯ ಆಳು
ಆಹೀಂತ ಮತ್ತು ಗೋಹ—ಇಬ್ಬರು ಚಂಡಾಲರು
ಬಂಧುಲ—ವಸಂತಸೇನೆಯ ಮನೆಯಾಳು

## (ಸ್ತ್ರೀಯರು)

ವಸಂತಸೇನೆ—ನಾಯಿಕೆ

ಮದನಿಕೆ—ವಸಂತಸೇನೆಯ ದಾಸಿ

ಚೇಟಿ— ,,

ಮುದುಕಿ— ,, ತಾಯಿ

ಧೂತಾದೇವಿ—ಚಾರುದತ್ತನ ಪತ್ನಿ

ರದನಿಕೆ— ,, ದಾಸಿ

ನಟಿ—ಸೂತ್ರಧಾರನ ಪತ್ನಿ.

## (ರಂಗಭೂಮಿಯ ಮೇಲೆ ಬಾರದವರು)

ಪಾಲಕ—ಉಜ್ಜಯಿನಿಯ ದೊರೆ.

ಚೂರ್ಣವೃದ್ಧ—ಚಾರುದತ್ತನ ಮಿತ್ರ.

ರೇಭಿಲ ,, ,, ಮತ್ತು ಸಂಗೀತಗಾರ.

ಕಾವಲುಗಾರರು, ಜನರ ಗುಂಪು, ಇತ್ಯಾದಿ.

---

# ವಿಷಯಸೂಚಿಕೆ

# ಕನ್ನಡ ಮೃಚ್ಛಕಟಿಕ

## (ಮಣ್ಣಿನ ಕಿರುಬಂಡಿ)

---

## ಒಂದನೆಯ ಅಂಕ

(ನಾಂದೀ ಶ್ಲೋಕಗಳು)

ಯೋಗಮುದ್ರೆಯೊಳುರಗನೀರೆಳೆ ಬಿಗಿಯೆ ಮೊಳಕಾಲೆರಡನು
ವೇಗದನಿಲನಿರೋಧವಳಿಸಿರೆ ಕರಣಗಣದಂತರಿವನು ;
ಕರಣವಿಲ್ಲದೆ ತನ್ನ ತನ್ನೊಳೆ ತತ್ತ್ವದೃಷ್ಟಿಯಿನೀಕ್ಷಿಪ
ಹರನ ಯೋಗಸಮಾಧಿಮುಕುಲಿತ ನಯನ ರಕ್ಷಿಸಲೆಮ್ಮನು. ೧

ಮತ್ತು

ಪೊರೆಯಲ್ಕೆಮ್ಮಂ ಕಾರ್ಮುಗಿ
ಲಿರವಂ ದೊರೆಕೊಳ್ವ ನೀಲಕಂಠನ ಕಂಠಂ
ಗಿರಿಜೆಯ ಭುಜಲತೆಯದರೊಳ್
ಕರಮೆಸೆಗುಂ ಕಾಂತಿಯಿಂದೆ ಮಿಂಚಿನ ಕುಡಿವೋಲ್ ೨

(ನಾಂದಿಯಾದ ಮೇಲೆ)

ಸೂತ್ರಧಾರ—ನೋಡಲು ನೆರೆದವರ ಕುತೂಹಲಕ್ಕೆ ಅಡ್ಡಿಯಾಗುವಂತೆ ನಾಂದಿಯನ್ನು ಇನ್ನು ಬೆಳೆಸುವುದಿಲ್ಲ. ಇದೋ ಮಹಾಜನರಲ್ಲಿ ನಮಸ್ಕಾರಪೂರ್ವಕವಾದ ನನ್ನ ವಿಜ್ಞಾಪನೆ—ನಾವಿಂದು ಮೃಚ್ಛಕಟಿಕವೆಂಬ 'ಪ್ರಕರಣ'ವನ್ನು ಆಡಲು ಹೊರಟಿದ್ದೇವೆ. ಇದರ ಕವಿಯಾರೆಂಬುದನ್ನು ಕೇಳಿ—

ವರಗಜಗಮನಂ ದ್ವಿಜವರ
ನುರುಸತ್ತ್ವಂ ಸುಂದರಂ ಚಕೋರಕನಯನಂ
ಪರಿಪೂರ್ಣೇಂದುಮುಖಾನ್ವಿತ
ನರಸಂ ಮೇಣ್ ಮೆರೆದನಲ್ತೆ ಶೂದ್ರಕನೆಂಬಂ ೩

ಆತನೇ ಅಲ್ಲವೆ—

ಋಕ್ಸಾಮವೇದಗಳು, ಗಣಿತರತಿಶಾಸ್ತ್ರಗಳು,
ಗಜಶಿಕ್ಷೆ ಮುಂತಾದ ವಿದ್ಯೆಗಳ ತಿಳಿದು;
ಶಂಕರನ ಕೃಪೆಯಿಂದ ತಿಮಿರವಳಿದಿರಲಂದು
ಕಣ್ಣೆರಡು ಬಂದುವೋ ಪೊಸತೆನಲು ಪಡೆದು;
ಮಗನರಸನಾದುದನು ಕಣ್ಣಿಂದಲೇ ಕಂಡು
ಬಹುವಿಭವದಿಂದಶ್ವಮೇಧವನು ಗೈದು
ವರುಷ ನೂರರ ಮೇಲೆ ದಿನ ಹತ್ತು ಬದುಕಿರ್ದು
ಶೂದ್ರಕನು ಬೆಂಕಿಯನು ಪುಗುತಂದನಂದು. ೪

ವೃತ್ತ

ಅರಸಂ ಶೂದ್ರಕನಾ ಸಂ
ಗರರಸಿಕಂ ನಿಷ್ಪ್ರಮಾದನಧಿಕಂ ವೇದೋ
ತ್ಕರವಿದರೊಳ್ ವಿಹಿತತಪಂ
ಪರವಾರಣಬಾಹುಯುದ್ಧಲುಬ್ಧಂ ವೀರಂ ೫

ಆತನ ಈ ಕೃತಿಯಲ್ಲಿ—

ಚಾರುದತ್ತನೆಂಬ ವಿಪ್ರ-ವಣಿಜ ತರುಣ ಬಡವನು
ಆ ಅವಂತಿ ಪುರದೊಳು ;
ಅವನ ಗುಣಕೆ ಸೋತ ಗಣಿಕೆಯೇ ವಸಂತಸೇನೆಯು
ಮೇಣ್ ವಸಂತಲಕ್ಷ್ಮಿಯು. ೬
ಅವರ ಪ್ರೇಮಚರಿತೆಯಂತೆ ನೀತಿಮಾರ್ಗದರ್ಶನ
ನ್ಯಾಯದೋಷವರ್ಣನ ;
ಖಳರ ಮತಿಯು ವಿಧಿಯ ಗತಿಯು ಸಕಲವನ್ನು ಶೂದ್ರಕ
ನೃಪನೆ ಗೈದ ಭದ್ರಕ. ೭

(ನಡೆದು ನೋಡಿ) ಇದೇನು ! ನಮ್ಮ ಸಂಗೀತಶಾಲೆ ಶೂನ್ಯವಾಗಿರುವುದಲ್ಲಾ ! ನಟರೆಲ್ಲಾ ಎಲ್ಲಿ ಹೋಗಿದ್ದಾರು ? (ಯೋಚಿಸಿ) ಓ, ತಿಳಿಯಿತು—

ಶೂನ್ಯಮಪುತ್ರನ ಮನೆ
ಶೂನ್ಯಂ ಸನ್ಮಿತ್ರನಿಲ್ಲದಾತನ ಕಾಲಂ

ಶೂನ್ಯಂ ದೆಸೆ ಮೂರ್ಖಂಗೆನೆ
ಶೂನ್ಯಂ ಗಡ ಸಕಲಮುತ್ತೆ ಬಡವಂಗೆಂದುಂ ೮

ನನ್ನ ಸಂಗೀತ ಇಷ್ಟೇ ಸಾಕು. ತುಂಬಾ ಹಾಡಿ ಹಾಡಿ ನನ್ನ ಕಣ್ಣುಗುಡ್ಡೆಗಳು ಮರಳುತ್ತಾ ಇವೆ, ಬೇಸಗೆಯ ಉರಿಬಿಸಿಲಲ್ಲಿ ಬೆಂದ ತಾವರೆ ಬೀಜದ ಹಾಗೆ. ಹಸಿವಿನಿಂದ ಕಣ್ಣುಗಳು ಕುಕ್ಕುತ್ತಿವೆ. ಆದ್ದರಿಂದ ಗೃಹಿಣಿಯನ್ನು ಕರೆದು ಕೇಳಿಯಾದರೂ ನೋಡುತ್ತೇನೆ—ಬೆಳಗಿನ ಊಟಕ್ಕೆ ಏನಾದರೂ ಉಂಟೋ ಎಂದು. ನಾಟಕದ ನಿಯಮಕ್ಕೂ ಸನ್ನಿವೇಶಕ್ಕೂ ಅನುಸಾರವಾಗಿ ನಾನಿನ್ನು ಪ್ರಾಕೃತವನ್ನೇ ಆಡುತ್ತೇನೆ—ಅಯ್ಯೋ! ಅಯ್ಯೋ! ತುಂಬಾ ಹಾಡಿ ಹಾಡಿ, ಬೆಂದುಬಾಡಿದ ತಾವರೆ ದಂಟಿನಂತೆ ನನ್ನ ಮೈಯೆಲ್ಲಾ ಹಸಿವಿನಿಂದ ಹಣ್ಣಾಗಿದೆ. ಮನೆಗೀಗ ಹೋಗಿ ಹೆಂಡತಿಯೇನಾದರೂ ತಿನ್ನಲು ಸಿದ್ಧಮಾಡಿದ್ದಾಳೊ ಎಂದು ನೋಡುತ್ತೇನೆ. (ನಡೆದಾಡಿ, ನೋಡಿ) ಇದೇ ಹೌದು ನಮ್ಮ ಮನೆ. ಸರಿ, ಒಳಕ್ಕೆ ಹೋಗುವುದೇ. (ಒಳಕ್ಕೆ ಹೋಗಿ, ನೋಡಿ) ಇದೇನಾಶ್ಚರ್ಯ! ನಮ್ಮ ಮನೆಯಲ್ಲಿ ಎಂದೂ ಇಲ್ಲದಂತಹ ವಿಶೇಷವಾದ ಏರ್ಪಾಡು ನಡೆಯುತ್ತಿದೆ. ಅಕ್ಕಿ ತೊಳೆದ ನೀರಿನ ಪ್ರವಾಹದ ಬಿಳುಪೂ, ಕಬ್ಬಿಣದ ಕಾವಲಿಯನ್ನು ತಿಕ್ಕಿ ತೊಳೆದಾಗ ಮಸಿಯ ಕಪ್ಪೂ ಕೂಡಿಕೊಂಡು, ನೆಲವೇ ಸಿಂಗರಿಸಿಕೊಂಡು ಹೊರಟ ಯುವತಿಯಂತೆ ಸುಂದರವಾಗಿದೆ. ಅಡಿಗೆಯ ಪರಿಮಳದಿಂದ ಉದ್ದೀಪಿತವಾದಂತೆ ನನ್ನ ಹಸಿವು ಏರುತ್ತಿದೆ. ಏನಾದರೂ ಪೂರ್ವಿಕರು ಕೂಡಿಟ್ಟ ನಿಧಿಯೇ ಸಿಕ್ಕಿಬಿಟ್ಟಿದ್ದರೂ ಇರಬಹುದೆ? ಅಯ್ಯೋ, ಇರಲಾರದು; ಹಸಿವಿನ ಹೊಡೆತದಲ್ಲಿ ಸಿಕ್ಕಿಬಿದ್ದ ನನಗೆ ಪ್ರಪಂಚವೇ ಅನ್ನಮಯವಾಗಿ ಕಾಣುತ್ತಿದೆ. ಅಷ್ಟೆ. ನಮ್ಮ ಮನೆಯಲ್ಲಿ ಬೆಳಗಿನ ಊಟವೂ ಇಲ್ಲ. ಹಸಿವಿನಿಂದ ಪ್ರಾಣವೇ ಹೋಗುತ್ತಿದೆ. ಇಲ್ಲೋ ಎಲ್ಲಾ ಹೊಸದಾದ ಸಿದ್ಧತೆಗಳೇ ಕಾಣಿಸುತ್ತವೆ—ಒಬ್ಬಳು ಗಂಧ ತೇಯುತ್ತಿದ್ದಾಳೆ, ಇನ್ನೊಬ್ಬಳು ಹೂಗಳನ್ನು ಕಟ್ಟುತ್ತಿದ್ದಾಳೆ. (ಯೋಚಿಸಿ) ಇದೇನಿರಬಹುದು? ಇರಲಿ. ಗೃಹಿಣಿಯನ್ನೇ ಕರೆದು ಇತ್ಯರ್ಥ ಮಾಡುತ್ತೇನೆ. (ನೇಪಥ್ಯದ ಕಡೆ ತಿರುಗಿ) ಆರ್ಯೆ, ಇತ್ತ ಬರಬೇಕು.

(ಪ್ರವೇಶ)

ನಟಿ—ಆರ್ಯ, ಇದೋ ಬಂದೆ.

ಸೂತ್ರಧಾರ—ಆರ್ಯೆ, ನಿನಗೆ ಸ್ವಾಗತ.

ನಟಿ—ನನ್ನಿಂದೇನಾಗಬೇಕೆಂದು ಆರ್ಯನು ಅಪ್ಪಣೆ ಕೊಡಿಸಬೇಕು.

ಸೂತ್ರಧಾರ—ಆರ್ಯೆ ('ತುಂಬಾ ಹಾಡಿ ಹಾಡಿ....ಹಣ್ಣಾಗಿದೆ' ಎಂದು ಹೇಳಿ ಅನಂತರ) ನಮ್ಮಮನೆಯಲ್ಲಿ ತಿನ್ನಲು ಏನಾದರೂ ಉಂಟೋ ಇಲ್ಲವೋ, ಇಷ್ಟೇ ವಿಷಯ.

ನಟಿ—ಸಕಲವೂ ಉಂಟು.

ಸೂತ್ರಧಾರ—ಏನೇನಿದೆ ?

ನಟಿ—ಬೆಲ್ಲದ ಅನ್ನ, ತುಪ್ಪ, ಮೊಸರು, ಅಕ್ಕಿ, ಆರ್ಯನಿಗೆ ತಿನ್ನಲು ಯೋಗ್ಯವಾದ ರಸಾಯನ, ಸಕಲವೂ ಉಂಟು; ಹೀಗೆ ದೇವತೆಗಳು ಅನುಗ್ರಹಿಸಲಿ.

ಸೂತ್ರಧಾರ—ಆರ್ಯೆ, ನಮ್ಮ ಮನೆಯಲ್ಲಿ ಸಕಲವೂ ಉಂಟೋ ಅಥವಾ ನೀನು ಹಾಸ್ಯ ಮಾಡುತ್ತಿರುವಿಯೋ ?

ನಟಿ— (ಸ್ವಗತ) ಸ್ವಲ್ಪ ಹಾಸ್ಯ ಮಾಡೋಣ. (ಪ್ರಕಾಶ) ಆರ್ಯ, ಉಂಟು, ಅಂಗಡಿಯಲ್ಲಿ.

ಸೂತ್ರಧಾರ—(ಕೋಪದಿಂದ) ಆ, ಅನಾರ್ಯೆ, ಹೀಗೆಯೇ ನಿನ್ನ ಆಶೆಯೂ ಭಂಗವಾಗಲಿ. ಹಾಳಾಗುವೆ. ಸುಮ್ಮನೆ ನನ್ನನ್ನು ನೀರೆತ್ತುವ ಗಳುವಿನಂತೆ ಎತ್ತರವಾಗಿ ಮೇಲೆತ್ತಿ ಕೆಳಗೆ ಬೀಳಿಸಿರುವೆ.

ನಟಿ—ಆರ್ಯನು ಮನ್ನಿಸಬೇಕು. ನಾನು ಹಾಸ್ಯಮಾಡಿದೆ, ಅಷ್ಟೆ.

ಸೂತ್ರಧಾರ—ಹಾಗಾದರೆ ಇದೇನು ಇಲ್ಲಿ ನಡೆದಿರುವ ಹೊಸ ಸಿದ್ಧತೆ? ಒಬ್ಬಳು ಗಂಧ ತೇಯುತ್ತಾಳೆ. ಇನ್ನೊಬ್ಬಳು ಹೂ ಕಟ್ಟುತ್ತಾಳೆ. ನೆಲವೆಲ್ಲಾ ಬಣ್ಣದ ರಂಗವಲ್ಲಿಯಿಂದಲೂ ಪೂಜೆಮಾಡಿದ ಹೂಗಳಿಂದಲೂ ಹೊಳೆಯುತ್ತಿದೆ.

ನಟಿ—ಈ ಹೊತ್ತು ಉಪವಾಸವ್ರತವನ್ನು ಆಚರಿಸುತ್ತಿದ್ದೇನೆ.

ಸೂತ್ರಧಾರ—ಆ ವ್ರತದ ಹೆಸರೇನು ?

ನಟಿ—'ಅಭಿರೂಪಪತಿ' ಯೆಂಬುದೇ ಆ ವ್ರತ.

ಸೂತ್ರಧಾರ—ಇಹಲೋಕದಲ್ಲಿ ಸಿಕ್ಕಬೇಕೆಂದೋ ಅಥವಾ ಪರಲೋಕದಲ್ಲಿ ಸಿಕ್ಕಬೇಕೆಂದೋ ?

ನಟಿ—ಆರ್ಯ, ಪರಲೋಕದಲ್ಲಿ ಸಿಕ್ಕಬೇಕೆಂದು.

ಸೂತ್ರಧಾರ—ಮಹಾಜನರೇ, ನೀವೇ ನೋಡಿ. ನನ್ನ ಗಂಜಿಯನ್ನು ಖರ್ಚು ಮಾಡಿ ಇವಳು ಪರಲೋಕದ ಗಂಡನನ್ನು ಹುಡುಕುತ್ತಿದ್ದಾಳೆ.

ನಟಿ—ಆರ್ಯ, ಶಾಂತನಾಗು. ನೀನೇ ಜನ್ಮಾಂತರದಲ್ಲೂ ಗಂಡನಾಗ ಬೇಕೆಂದು ನನ್ನ ವ್ರತ.

ಸೂತ್ರಧಾರ—ಈ ವ್ರತವನ್ನು ನಿನಗೆ ಹೇಳಿದವರಾರು?

ನಟಿ—ಆರ್ಯನ ಪ್ರಿಯಮಿತ್ರನಾದ ಚೂರ್ಣವೃದ್ಧನಿಲ್ಲವೇ, ಅವನೇ.

ಸೂತ್ರಧಾರ—(ಕೋಪದಿಂದ) ಆ, ತೊತ್ತಿನ ಮಗನೆ, ಚೂರ್ಣವೃದ್ಧ, ನವ ವಧುವಿನ ಸುಗಂಧಮಯ ಕೇಶಪಾಶವನ್ನು ಕತ್ತರಿಸುವಂತೆ ನಿನ್ನನ್ನೂ ಆ ಕುಪಿತನಾದ ಪಾಲಕರಾಜನು ಕತ್ತರಿಸುವುದನ್ನು ನಾನು ಎಂದು ನೋಡಿಯೇನು!

ನಟಿ—ಪ್ರಸನ್ನನಾಗು. ಆರ್ಯನೇ ಪರಲೋಕದಲ್ಲೂ ಪತಿಯಾಗಬೇಕೆಂದು ನಾನು ಈ ವ್ರತವನ್ನು ಆಚರಿಸುತ್ತಿದ್ದೇನೆ. (ಕಾಲಿಗೆ ಬೀಳುವಳು).

ಸೂತ್ರಧಾರ—ಆರ್ಯೆ, ಎದ್ದೇಳು. ಈ ವ್ರತಕ್ಕಾಗಿ ಏನಾಗಬೇಕೋ ಹೇಳು.

ನಟಿ—ನಮ್ಮಂತಹವರಿಗೆ ಒಪ್ಪುವ ಬ್ರಾಹ್ಮಣನನ್ನು ಊಟಕ್ಕೆ ಹೇಳಬೇಕು.

ಸೂತ್ರಧಾರ—ಆಗಲಿ. ಆರ್ಯೆ, ನೀನು ಹೋಗು. ನಾನೂ ಹೋಗಿ ನಮಗೆ ಒಪ್ಪುವ ಬ್ರಾಹ್ಮಣನನ್ನು ಊಟಕ್ಕೆ ಹೇಳಿ ಬರುತ್ತೇನೆ.

ನಟಿ—ಆರ್ಯನ ಅಪ್ಪಣೆ. (ನಿಷ್ಕ್ರಮ)

ಸೂತ್ರಧಾರ—(ನಡೆಯುತ್ತ) ಆಶ್ಚರ್ಯ. ಸಮೃದ್ಧಿ ತುಂಬಿರುವ ಈ ಉಜ್ಜಯಿನೀ ಪಟ್ಟಣದಲ್ಲಿ ನಾನು ಬ್ರಾಹ್ಮಣನೊಬ್ಬನನ್ನು ಹುಡುಕಲು ಪ್ರಯಾಸಪಡಬೇಕಾಗಿದೆಯೆ! (ನೋಡಿ) ಇದೋ ಚಾರುದತ್ತನ ಗೆಳೆಯ ಮೈತ್ರೇಯನು ಇತ್ತ ಕಡೆಯೇ ಬರುತ್ತಿದ್ದಾನೆ. ಇರಲಿ, ಕೇಳಿ ನೋಡುತ್ತೇನೆ. ಆರ್ಯ, ಮೈತ್ರೇಯ, ಇವತ್ತು ನಮ್ಮ ಮನೆಯಲ್ಲಿ ನೀನು ಊಟಕ್ಕೆ ಒಪ್ಪಿಕೊಳ್ಳಬೇಕು.

(ನೇಪಥ್ಯದಲ್ಲಿ)

ಓ, ನೀನು ಬೇರೊಬ್ಬ ಬ್ರಾಹ್ಮಣನಿಗೆ ಹೇಳಿಕೊಳ್ಳಪ್ಪಾ. ನನಗಿವತ್ತು ಬೇರೆ ಕಡೆ ಹೋಗುವುದಿದೆ.

ಸೂತ್ರಧಾರ—ಆರ್ಯ, ಮೃಷ್ಟಾನ್ನ ಭೋಜನ; ಪ್ರತಿಸ್ಪರ್ಧಿಯೂ ಇಲ್ಲ. ನಿನಗೆ ದಕ್ಷಿಣೆಯೂ ಇರುತ್ತದೆ.

(ಮತ್ತೆ ನೇಪಥ್ಯದಲ್ಲಿ)

ಮೊದಲೇ ನಿರಾಕರಿಸಿಯಾದ ಮೇಲೂ ಮತ್ತೆ ಮತ್ತೆ ಬರಲೇಬೇಕೆಂದು ನಿರ್ಬಂಧಿಸುತ್ತಿರುವ ನಿನ್ನ ಈ ಕೆಲಸವೇನು.!

ಸೂತ್ರಧಾರ—ಈತನು ನಿರಾಕರಿಸಿದನು. ಇರಲಿ, ಇನ್ನೊಬ್ಬ ಬ್ರಾಹ್ಮಣನನ್ನು ಆಮಂತ್ರಿಸುತ್ತೇನೆ.

(ನಿಷ್ಕ್ರಮ)

## ಇದು-ಪ್ರಸ್ತಾವನೆ

---

(ಕೈಯಲ್ಲಿ ಒಂದು ಉತ್ತರೀಯವನ್ನು ಹಿಡಿದು ಪ್ರವೇಶ)

ಮೈತ್ರೇಯ—('ನೀನು ಬೇರೊಬ್ಬ ಬ್ರಾಹ್ಮಣನಿಗೆ....' ಎಂದು ಮತ್ತೆ ಹೇಳಿದ ಮೇಲೆ) ಅಯ್ಯೋ, ನಿಜವಾಗಿ ಈ ಮೈತ್ರೇಯನೂ ಈಗ ಕಂಡವರ ಮನೆ ಆಮಂತ್ರಣಕ್ಕೆ ಹಂಬಲಿಸುವ ಸ್ಥಿತಿಯೇ ಆಗಿದೆ. ಹಾ ದೈವವೆ, ನೀನೆಷ್ಟು ಪರೀಕ್ಷೆಮಾಡುತ್ತಿರುವೆ! ಆಹಾ, ಪೂಜ್ಯ ಚಾರುದತ್ತನ ಸಂಪತ್ತು ಹೇರಳವಾಗಿದ್ದ ಅಂದು ನಾನು ಹಗಲೂ ರಾತ್ರಿಯೂ ವಿಶೇಷ ಶ್ರಮದಿಂದ ತಯಾರಿಸಿದ, ಸುವಾಸನೆಯೆಸಗುತ್ತಿದ್ದ, ಸಿಹಿಕಡುಬುಗಳನ್ನಷ್ಟೇ ತಿನ್ನುತ್ತಿದ್ದೆನಲ್ಲ! ಪಡಸಾಲೆಯಲ್ಲಿ ನೂರಾರು ತಿಂಡಿಗಳ ನಡುವೆ ಹಲವಾರು ಬಣ್ಣಗಳ ಮಧ್ಯೆ ಕುಳಿತ ಚಿತ್ರಕಾರನಂತೆ ಕುಳಿತುಕೊಂಡು ಒಂದೊಂದನ್ನೂ ಬೆರಳು ತುದಿಯಿಂದ ಮುಟ್ಟಿ ಮುಟ್ಟಿ ಬಿಟ್ಟುಬಿಡುತ್ತಿದ್ದೆನಲ್ಲ! ಬೀದಿಯ ಬಸವನಂತೆ ಯಾವಾಗಲೂ ಮೆಲುಕುಹಾಕುತ್ತಲೇ ಇರುತ್ತಿದ್ದೆನಲ್ಲ! ಅದೇ ನಾನು ಈಗ ಆತನಿಗೆ ಬಡತನ ಬಂದ ಕಾರಣ, ಎಲ್ಲೆಲ್ಲೋ ಅಲೆಯುತ್ತ ಸಂಜೆ ಮಲಗುವುದಕ್ಕೆ ಮಾತ್ರ ಇಲ್ಲಿ ಬರುತ್ತಿದ್ದೇನೆ— ಮನೆಯ ಪಾರಿವಾಳದ ಹಾಗೆ. ಜಾಜಿ ಹೂವಿನ ಪರಿಮಳ ಕಟ್ಟಿರುವ ಈ ಉತ್ತರೀಯವನ್ನು ಚಾರುದತ್ತನ ಪ್ರಿಯಮಿತ್ರನಾದ ಚೂರ್ಣ

ವೃದ್ಧನು ಕಳುಹಿಸಿಕೊಟ್ಟಿದ್ದಾನೆ—ಆತನ ದೇವತಾರ್ಚನೆ ಮುಗಿದ ನಂತರ ತಲಪಿಸಬೇಕೆಂಬುದಾಗಿ. ಆದ್ದರಿಂದ ಆರ್ಯಚಾರುದತ್ತನನ್ನು ಹೋಗಿ ಕಾಣುತ್ತೇನೆ! (ನಡೆದು ನೋಡಿ) ಇದೋ ದೇವತಾರ್ಚನೆ ಮುಗಿಸಿಕೊಂಡು ಗೃಹದೇವತೆಗಳಿಗೆ ಬಲಿಪ್ರದಾನ ಮಾಡಲೆಂದು ಆರ್ಯಚಾರುದತ್ತನು ಇತ್ತ ಕಡೆಯೇ ಬರುತ್ತಿರುವನು.

(ಚಾರುದತ್ತನ ಪ್ರವೇಶ, ರದನಿಕೆಯೊಡನೆ)

ಚಾರುದತ್ತ— (ಮೇಲೆ ನೋಡಿ, ದುಃಖದಿಂದ ನಿಟ್ಟುಸಿರುಬಿಡುತ್ತ)

ಯಾವ ಹೊಸ್ತಿಲ ಮೇಲೆ ಬಲಿಯನು ಹಂಸಸಾರಸಗಣಗಳು
ಹಿಂದೆ ಸಂತಸದಿಂದೆ ಬಂದಾರೋಗಿಸಿರ್ದುವೊ ಮನೆಯೊಳು ;
ಅಲ್ಲಿಯೆಲ್ಲೆಡೆ ಹುಲ್ಲ ಹೊದರುಗಳೀಗ ಬೆಳೆದಾವರಿಸಿರೆ
ಕಾಳ ಬಲಿಯಿದು ಬೀಳ್ವುದಕ್ಕಟ ಹೀನ ಹುಳುಗಳ ಬಾಯೊಳು. ೯

(ಎನ್ನುತ್ತ ಮೆಲ್ಲನೆಮೆಲ್ಲನೆ ನಡೆದು ಕುಳಿತುಕೊಳ್ಳುವನು)

ವಿದೂಷಕ—ಇದೋ ಆರ್ಯ ಚಾರುದತ್ತ. ಈಗ ಹೋಗಿ ಕಾಣುತ್ತೇನೆ. (ಸಮೀಪಿಸಿ) ನಿನಗೆ ಮಂಗಳವಾಗಲಿ. ಭಾಗ್ಯವಂತನಾಗು.

ಚಾರುದತ್ತ—ಸರ್ವಕಾಲದಲ್ಲಿಯೂ ಸ್ನೇಹಿತನಾದ ಮೈತ್ರೇಯನೇ ಬಂದಿರುವನು. ಗೆಳೆಯ, ನಿನಗೆ ಸ್ವಾಗತ. ಕುಳಿತುಕೋ.

ವಿದೂಷಕ—ನಿನ್ನ ಅಪ್ಪಣೆ. (ಕುಳಿತು) ಗೆಳೆಯ, ಇದೋ ಜಾಜಿಹೂವಿನ ಪರಿಮಳ ಕಟ್ಟಿರುವ ಈ ಉತ್ತರೀಯವನ್ನು ನಿನ್ನ ಪ್ರಿಯಮಿತ್ರನಾದ ಚೂರ್ಣವೃದ್ಧ ನನ್ನ ಕೈಯಲ್ಲಿ ಕಳುಹಿಸಿದ್ದಾನೆ—ದೇವತಾರ್ಚನೆಯಾದ ಮೇಲೆ ನಿನಗೆ ಕೊಡಬೇಕೆಂದು. (ಕೊಡುವನು)

ಚಾರುದತ್ತ—(ತೆಗೆದುಕೊಂಡು ಯೋಚಿಸುತ್ತ ನಿಲ್ಲುವನು)

ವಿದೂಷಕ—ಇದೇನಪ್ಪಾ ಇಷ್ಟು ಯೋಚನೆ!

ಚಾರುದತ್ತ—ಗೆಳೆಯ—

ದುಃಖದನಂತರ ಸುಖ ಶೋಭಿಸುವುದು
ಕಾರ್ಗತ್ತಲೆಯೊಳು ದೀಪದೊಲು ;
ಸುಖ ಮುಗಿದೈತರೆ ಬಡತನ ಪುರುಷಗೆ
ಜೀವನ್ಮರಣವೆ ಲೋಕದೊಳು. ೧೦

ವಿದೂಷಕ—ಗೆಳೆಯ, ಮರಣ, ಬಡತನ, ಇವೆರಡರಲ್ಲಿ ನಿನಗೆ ಯಾವುದು ಇಷ್ಟ?

ಚಾರುದತ್ತ—ಗೆಳೆಯ—

ದಾರಿದ್ರ್ಯ ಮರಣವೆಂಬೆರಡರೊಳು ಲೇಸೆನಗೆ
ಮರಣವೇ ದಾರಿದ್ರ್ಯವಹುದು ಹೊಲ್ಲ;
ಏಕೆಂದೊಡಾ ಮರಣದಿಂದಲ್ಪ ನೋವೆಂಬೆ
ದಾರಿದ್ರ್ಯದುಃಖಕೋ ಕಡೆಯೆ ಇಲ್ಲ. ೧೧

ವಿದೂಷಕ—ಮಿತ್ರ, ಸಂತಾಪ ಸಾಕು. ಪ್ರಿಯ ಜನರಲ್ಲಿ ಸಂಪತ್ತನ್ನೆಲ್ಲ ಹಂಚಿಕೊಟ್ಟು ನಿನಗೆ ಬಂದಿರುವ ಕ್ಷೀಣದೆಸೆಯಾದರೂ ದೇವತೆಗಳಲ್ಲಿ ಅಮೃತವನ್ನು ಹಂಚಿ ಶೋಭಿಸುವ ಪಾಡ್ಯದ ಚಂದ್ರನ ಕ್ಷಯದಂತೆಯೇ ಅತ್ಯಂತ ರಮಣೀಯವಾಗಿದೆ.

ಚಾರುದತ್ತ—ಮಿತ್ರ, ನನಗೆ ದುಡ್ಡು ಹೋಯಿತಲ್ಲಾ ಎಂದು ಕೊರಗಿಲ್ಲ. ಆದರೆ—

ನನ್ನೆದೆಯು ಕೊರೆಯುವುದು ನಮ್ಮ ಮನೆ ಬರಿದೆಂದು
ಅತಿಥಿಗಳು ತೊರೆದಿಹರು ಬರುವುದನ್ನು;
ಮದಕಾಲ ಮುಗಿದೊಡನೆ ದುಂಬಿಗಳು ತೊರೆವಂತೆ
ಮದಲೇಖೆ ಬತ್ತಿರುವ ಗಜವೆಡೆಯನು. ೧೨

ವಿದೂಷಕ—ಗೆಳೆಯ, ಹಾಳಾದ ದುಡ್ಡೆಂಬ ಬೊಡ್ಡೀಮಕ್ಕಳು ದನ ಕಾಯುವ ಹುಡುಗರಂತೆಯೇ. ಅವರು ಹೇಗೆ ಕಣಜ ಕಚ್ಚದ ಜಾಗಗಳಲ್ಲೇ ಅಲೆಯುತ್ತಾರೋ ಹಾಗೇ ಮನುಷ್ಯರು ತಿನ್ನದ ಜಾಗಗಳಲ್ಲೇ ದುಡ್ಡೂ ಅಲೆಯುತ್ತದೆ.

ಚಾರುದತ್ತ—ಮಿತ್ರ,

ಸತ್ಯವಿದು ಹಣ ಹೋಯಿತೆಂದೆನಗೆ ಕೊರಗಿಲ್ಲ
ಭಾಗ್ಯಗತಿಯಲಿ ಹಣವು ಬಹುದು ಹೋಗುವುದು;
ಆದರೆನ್ನನು ಸುಡುವುದಿದು ಬಡವನೆಂದೆನ್ನ
ಕೆಳೆತನವನೂ ಜನವು ಸಡಿಲಿಸುತ್ತಿಹುದು. ೧೩.

ಮತ್ತು

ದಾರಿದ್ರ್ಯದಿಂ ಲಜ್ಜೆ, ಲಜ್ಜೆಯಿಂ ಕಳೆಯಳಿವು,
ಕಳೆಯಳಿಯಲವಮಾನ ಬಿಡದೆ ಬಹುದು ;
ಅವಮಾನದಿಂ ಖೇದ, ಖೇದದಿಂ ಕಡುಶೋಕ,
ಕಡುಶೋಕವಾವರಿಸೆ ಮತಿ ಪೋಪುದು ;
ಮತಿ ಪೋಗಲದೆ ನಾಶವೀ ತೆರದೆ ಬಡತನವು
ಆಪತ್ತುಗಳಿಗೆಲ್ಲ ಬೀಡಪ್ಪುದು. ೧೪

ವಿದೂಷಕ—ಗೆಳೆಯ, ಅದೇ ಹಾಳು ದುಡ್ಡನ್ನು ನೆನೆಯುತ್ತಾ ಸಂತಾಪ ಮಾಡಬೇಡ.

ಚಾರುದತ್ತ—ಮಿತ್ರ, ದಾರಿದ್ರ್ಯವೆಂದರೆ ಮನುಷ್ಯನಿಗೆ—

ಬೀಡು ಚಿಂತೆಯ, ರಿಪುನಿಕಾರವು, ವೈರದ ಪ್ರಸಾರಣ
ಅದೆ ಜುಗುಪ್ಸೆಯು ಮಿತ್ರರಲ್ಲಿಯು, ಸ್ವಜನವೈರದ ಕಾರಣ ;
ವನಕೆ ಪೋಗುವ ಮತಿಯ ತರುವುದು, ಸತಿಯನಾದರ ತಟ್ಟನೆ
ಎದೆಯೊಳಡಗಿದ ಶೋಕದಗ್ನಿಯು ಸುಡುವುದುರಿಸದು ನೆಟ್ಟನೆ. ೧೫

ಇರಲಿ. ನಾನು ಗೃಹದೇವತೆಗಳಿಗೆ ಬಲಿಯನ್ನು ನಿವೇದಿಸಿದ್ದಾಯಿತು. ನೀನೂ ಊರಿನ ಕಟ್ಟೆಗೆ ಹೋಗಿ ಮಾತೃದೇವತೆಗಳಿಗೆ ಬಲಿಯನ್ನು ಸಮರ್ಪಿಸಿ ಬಾ.

ವಿದೂಷಕ—ನಾನು ಹೋಗುವುದಿಲ್ಲ.

ಚಾರುದತ್ತ—ಏಕೆ ?

ವಿದೂಷಕ—ಏಕೆಂದರೆ, ಇಷ್ಟೆಲ್ಲಾ ಪೂಜೆಮಾಡಿಸಿಕೊಂಡರೂ ದೇವತೆಗಳು ನಿನಗೆ ಅನುಗ್ರಹ ಮಾಡಿಲ್ಲವೆಂದ ಮೇಲೆ ಇನ್ನೂ ಪೂಜೆಮಾಡುವುದರದಲ್ಲಿ ಅರ್ಥವೇನು ?

ಚಾರುದತ್ತ—ಮಿತ್ರ, ಹಾಗಲ್ಲ. ಗೃಹಸ್ಥನು ಮಾಡಬೇಕಾದ ನಿತ್ಯವಿಧಿ ಇದು—

ತಪದಿಂದೆ ಮನದಿಂದೆ ವಾಕ್ಕಿಂದೆ ಬಲಿಯಿಂದೆ
ಪೂಜಿಸಲ್ಕೊಲಿಯುವರು ದೇವತೆಗಳು ;
ಶಮವುಳ್ಳ ಗೃಹಪತಿಗೆಯೆಂಬುದೇ ವಿಧಿಯೆನಲು
ಫಲವೇನು ಸುಮ್ಮನೇ ತರ್ಕಗಳೊಳು. ೧೬

ಆದ್ದರಿಂದ ಹೋಗು. ಮಾತೃದೇವತೆಗಳಿಗೆ ಬಲಿಯನ್ನೊಪ್ಪಿಸು ಹೋಗು.

ವಿದೂಷಕ—ಅಯ್ಯಾ, ನಾನು ಹೋಗುವುದಿಲ್ಲ. ಮತ್ತೆ ಯಾರನ್ನಾದರೂ ಕಳುಹಿಸು. ಈ ಬಡಬ್ರಾಹ್ಮಣನಿಗೆ ಹೋದಲ್ಲೆಲ್ಲ ತಿರುಗುಮುರುಗೇ ಆಗುತ್ತದೆ—ಕನ್ನಡಿಯಲ್ಲಿ ಕಾಣುವ ನೆರಳಿನಲ್ಲಿ ಎಡಕ್ಕೆ ಬಲವೂ, ಬಲಕ್ಕೆ ಎಡವೂ ಆಗುವಂತೆ. ಅದೂ ಅಲ್ಲದೆ ಈ ಮುಚ್ಚಂಜೆ ಹೊತ್ತಿನಲ್ಲಿ ರಾಜಮಾರ್ಗದಲ್ಲೆಲ್ಲ ಸೂಳೆಯರು, ವಿಟರು, ಚೇಟರು, ಮತ್ತು ರಾಜನ ಕಡೆಯ ಜನರೇ ಸುಳಿಯುತ್ತಿರುತ್ತಾರೆ, ನಾನೇನಾದರೂ ಅವರೆದುರಿಗೆ ಹೋದರೆ ಕಪ್ಪೆಗೆ ಹೊಂಚುತ್ತಿರುವ ಕಾಲಸರ್ಪನ ಮುಂದೆ ಇಲಿ ಹೋದಂತೆಯೇ ಸಾಯುವ ಅವಸ್ಥೆಯೊದಗುತ್ತದೆ. ನೀನು ತಾನೆ ಇಲ್ಲಿ ಕುಳಿತು ಮಾಡುವುದೇನು?

ಚಾರುದತ್ತ—ಆಗಲಿ. ಸ್ವಲ್ಪ ನಿಲ್ಲು. ನಾನು ಪೂಜೆಯನ್ನು ಮುಗಿಸುವೆನು.

(ನೇಪಥ್ಯದಲ್ಲಿ)

ನಿಲ್ಲು! ವಸಂತಸೇನೆ, ನಿಲ್ಲು!

(ವಿಟ, ಶಕಾರ, ಚೇಟರು ಬೆನ್ನಟ್ಟುತ್ತಿರುವ ವಸಂತಸೇನೆಯ ಪ್ರವೇಶ)

ವಿಟ—ವಸಂತಸೇನೆ, ನಿಲ್ಲು, ನಿಲ್ಲು.

ಅಂಜಿಕೆಯಿನಿಂತೇಕೆ ಸೌಕುಮಾರ್ಯವನುಳಿದು
ನಾಟ್ಯಪಟು ಮೆಲ್ಲಡಿಯನಿಡುತಿರುವೆ ಬೇಗ?
ಉದ್ವೇಗದಿಂದದಿರ್ವ ಕುಡಿನೋಟಗಳ ಬೀರಿ
ಬೇಡರಟ್ಟಲು ಬೆದರ್ದ ಹರಿಣಿಯಂತೀಗ? ೧೭

ಶಕಾರ—ನಿಲ್ಲು, ವಸಂತಸೇನೆ, ನಿಲ್ಲು.

ಏತಕೆ ಪೋಗುವೆ, ಓಡುವೆಯೆಡವುತೆ
ಗೈಯುವೆಯಿಂತು ಪಲಾಯನವ?
ನೀನೊಲಿ ಚೆನ್ನೆಯೆ, ನಿಂತರೆ ಸಾಯೆ
ನನ್ನೆದೆ ಕಾಮದೆ ಬೇಯುತಿದೆ;
ಕೆಂಡದ ರಾಶಿಯೊಳಡಗಿನ ತುಂಡದು
ಬೇಯುವ ತೆರದೊಳು ಭರದಿಂದೆ. ೧೮

ಚೇಟ—ಆರ್ಯೆ, ನಿಲ್ಲು, ನಿಲ್ಲು.

ಬೆದರುತಲೋಡುವೆಯೆನ್ನೆಡೆಯಿಂದೆ
ಗರಿ ಮೂಡಿದ ಪೆಣ್ ನವಿಲಂತೆ;
ನನ್ನೀ ಒಡೆಯನು ಸುತ್ತುತಲಿರುವನು
ಕಾಡೊಳು ಕೋಳಿಯ ಮರಿಯಂತೆ. ೧೯

ವಿಟ—ವಸಂತಸೇನೆ, ನಿಲ್ಲು, ನಿಲ್ಲು.

ಎಳೆಬಾಳೆಯವೋಲ್ ನಡುಗುತೆ, ಕೆಂಪಿನ
ಸೀರೆಯ ಸೆರಗದು ಗಾಳಿಯೊಳು
ಹಾರಲ್ಕೋಡುವೆಯೇಕಿಂತು?
ಕೆಂದಾವರೆಗಳ ದಳಗಳು ಸುರಿವುವು
ಮಣಶಿಲೆ ಗುಹೆಯೊಳಗುಳಿಯಿಂದ
ಕೆತ್ತಲು ಸಿಡಿಯುವ ಶಿಲೆಯಂದ. ೨೦

ಶಕಾರ—ನಿಲ್ಲು, ವಸಂತಸೇನೆ, ನಿಲ್ಲು.

ಕೆರಳಿಸಿ ಕಾಮನ ಮದನನ ಮಾರನ,
ತೊಲಗಿಸಿ ರಾತ್ರಿಯ ಶಯನದೊಳು
ನನ್ನಾ ನಿತ್ಯದ ನಿದ್ರೆಯನು;
ಭಯದಿಂದಂಜುತಲೆಡಹುತೆ ಬೀಳುತೆ
ಬಂದಿಹೆಯೆನ್ನಯ ಕೆಲಕಿರಲು
ಕುಂತಿ ದಶಾಸ್ಯನ ಕೆಲಕೆನಲು. ೨೧

ವಿಟ—ವಸಂತಸೇನೆ, ಏಕೆ ಓಡುವೆ—

ನಿನ್ನಡಿಗಳಿಂದೆನ್ನ ಮೀರಿಸುತ್ತಡಿಗಳನು
ಗರುಡಭಯದಿಂ ಪರಿವ ನಾಗಿಸಿಯ ತೆರದೆ;
ಪಹಿಲದಿಂ ಪೊರಮಟ್ಟು ಗಾಳಿಯನೆ ಕಟ್ಟಿದಪೆ
ನಿನ್ನ ಕಟ್ಟುವ ಮತಿಯ ಬಿಟ್ಟಿರುವೆ ಮುಗುದೆ! ೨೨

ಶಕಾರ—ಭಾವ, ಭಾವ.

ಇವಳೇ ನಾಣ್ಯದ ಚೋರೆ ಕಾಮುಕನೆ ಕೋಲ್ ಮತ್ಸ್ಯಾಶಿನಿ ನರ್ತಕೀ
ಇವಳೇ ಮೂಗಿಲಿ ವಂಶನಾಶಿಯವಶಳ್ ಕಾಮಕ್ಕೆ ಮಂಜೂಷೆಯುಂ

ಇವಳೀ ವೇಶ್ಯೆ ಸುವೇಶಗೇಹಿನಿ ಮಹಾವೇಶಾಂಗನಾ ಮುಖ್ಯೆಯುಂ
ಇವೆ ನೋಡಲ್ ದಶನಾಮುಮಾಲೆಯೆನಲುಂ ತಾನೇಕೆ ಮೇಣ್
ಕಾಮಿಸಳ್. ೨೩

ವಿಟ—

ಚೆನ್ನೆಯೋಡುವೆಯೇಕೆ ಭಯದೊಳು। ನಿನ್ನ ಚಂಚಲ ಕರ್ಣಕುಂಡಲ
ಕೆನ್ನೆಯನೆ ಗೀರಿಡುತ ನೋಯಿಸಲೀಗ ವೇಗದೊಳು
ಎನ್ನ ಪರಿ ವಿಟರುಗುರಿನಿಂ ಸಂ। ಪನ್ನ ವೀಣೆಯ ಮಿಡಿವ ಮಾಳ್ಕೆಯಿ
ನುನ್ನತಾಂಬುದ ಮೊಳಗಲಳುಕುವ ನೀರ ಹಕ್ಕಿಯೊಲು ೨೪

ಶಕಾರ— ಝಣ ಝಣವೆನ್ನುವ ಭೂಷಣಶಬ್ದದೆ
ಓಡುವೆಯೆಲ್ಲಿಗೆ ಭರದಿಂದೆ
ರಾಮನಿಗಂಜಿದ ಕೃಷ್ಣೆಯೆನೆ?
ಇದೆ ಕೊಳ್ ಸೆಳೆವೆನು ತಟ್ಟನೆ ನಿನ್ನನು
ಹನುಮನೆಯೆನಿಸೆ ಸುಭದ್ರೆಯನು
ವಿಶ್ವಾವಸುವಿನ ತಂಗಿಯನು. ೨೫

ಚೇಟ— ರಾಜವಲ್ಲಭನೆನಲು ರಮಿಸು ನೀನಿವನನ್ನು
ಮೀನುಮಾಂಸಗಳನ್ನು ತಿನುವೆಯಂತೆ ;
ಮೀನು ಮಾಂಸಗಳೆರಡು ದೊರೆತೊಡನೆ ಕುನ್ನಿ ಸಹ
ಸತ್ತ ಹೆಣಪಾಸೆಯನು ಬಿಡುವುದಲ್ತೆ ! ೨೬

ವಿಟ—ವಸಂತಸೇನೆ, ಹೀಗೇಕೆ—

ನಡುವಿನೊಳಗುಡುಗೆಜ್ಜೆ ಮುತ್ತುಗಳು ಹೊಳೆಯುತಿರೆ
ಥಳಥಳಿಸಿ ಹೊಳೆಯುತಿಹ ತಾರೆಗಳೊಲು ;
ಶಶಿವದನ ಮಣಶಿಲೆಯ ಹುಡಿಯಂತೆ ಕೆಂಪೇರೆ
ಪರಿಯುತಿಹೆ ನೀನೂರ ದೇವತೆಯೊಲು. ೨೭

ಶಕಾರ— ನಾವೇ ನಿನ್ನನು ಬೆನ್ನಟ್ಟಿರಲು
ನರಿಯನು ಕಾಡೊಳು ನಾಯ್ಗಳೊಲು ;
ತ್ವರೆಯಿಂದೋಡುವೆ ಬೇಗದೆ ವಹಿಲದೆ
ನನ್ನೆದೆತೊಟ್ಟೇ ಕಳಚುವೊಲು. ೨೮

ವಸಂತಸೇನೆ—ಪಲ್ಲವಕ, ಪಲ್ಲವಕ! ಪರಭೃತಿಕೇ, ಪರಭೃತಿಕೇ!

ಶಕಾರ—(ಭಯದಿಂದ) ಭಾವ, ಭಾವ, ಮನುಷ್ಯರು! ಮನುಷ್ಯರು!

ವಿಟ—ಹೆದರಬೇಡ, ಹೆದರಬೇಡ.

ವಸಂತಸೇನೆ—ಮಾಧವಿಕೆ, ಮಾಧವಿಕೇ!

ವಿಟ—(ನಗುತ್ತ) ಮೂರ್ಖ, ಅವಳು ಸಖಿಯರನ್ನು ಕೂಗುತ್ತಿದ್ದಾಳೆ, ಅಷ್ಟೆ.

ಶಕಾರ—ಭಾವ, ಭಾವ, ಹೆಣ್ಣನ್ನು ಹುಡುಕುತ್ತಿದ್ದಾಳಲ್ಲವೆ?

ವಿಟ—ಹೌದು.

ಶಕಾರ—ಹೆಂಗಸರು ನೂರು ಜನವಿದ್ದರೂ ಹೊಡೆದುಹಾಕುತ್ತೇನೆ. ನಾನು ಶೂರ!

ವಸಂತಸೇನೆ—(ಯಾರೂ ಇಲ್ಲದ್ದನ್ನು ಕಂಡು) ಅಯ್ಯೋ, ಏನು ಮಾಡಲಿ? ಸಖಿಯರು ತಪ್ಪಿಸಿಕೊಂಡರಲ್ಲಾ! ಈಗ ನನ್ನನ್ನು ನಾನೇ ರಕ್ಷಿಸಿಕೊಳ್ಳಬೇಕಾಗಿದೆ.

ವಿಟ—ಅಯ್ಯಾ, ಹುಡುಕು, ಹುಡುಕು.

ಶಕಾರ—ವಸಂತಸೇನೆ, ಕೂಗು, ಕೂಗು. ಪರಭೃತಿಕೆಯನ್ನಾದರೂ ಕೂಗು, ಪಲ್ಲವಕನನ್ನಾದರೂ ಕೂಗು; ವಸಂತಮಾಸವನ್ನೇ ಬೇಕಾದರೂ ಕೂಗು. ನಾನು ಅನುಸರಿಸುತ್ತಿರುವ ನಿನ್ನನ್ನು ಯಾರು ರಕ್ಷಿಸಬಲ್ಲರು?—

ಜಮದಗ್ನಿಯ ಮಗ ಭೀಮನು ಬರುವನೊ
ಕುಂತೀಸುತನಾ ರಾವಣನೋ;
ಕೈಯೊಳೆ ಕೂದಲ ಹಿಡಿದಿದೊ ಗೈವೆನು
ದುಶ್ಶಾಸನನನುಕರಣವನು. ೨೯

ಇದೋ ನೋಡು, ಚೆನ್ನಾಗಿ ನೋಡು—

ಕತ್ತಿ ಹರಿತವು, ತಲೆಯಿದಭಿಮುಖ, ತಲೆಯನೇ ಬೇರ್ಪಡಿಸುವೆ,
ಇಲ್ಲವಾದೊಡೆ ಕೊಲ್ಲುವೆ;
ಮತ್ತೆ ಸಾಕಿನ್ನೀ ಪಲಾಯನ ನಿನ್ನದೇಕೆನೆ ಮನುಜನು
ಸಾಯಲಿರ್ಪನು ಬದುಕನು. ೩೦

ವಸಂತಸೇನೆ—ಆರ್ಯ, ನಾನು ಅಬಲೆಯಲ್ಲವೆ?

ವಿಟ—ಅದರಿಂದಲೇ ಉಳಿಸಲಾಗಿದೆ.

ಶಕಾರ—ಅದರಿಂದಲೇ ಕೊಂದಿಲ್ಲ.

ವಸಂತಸೇನೆ—(ಸ್ವಗತ) ಅಹಾ, ಇವನ ಅನುನಯವೂ ಭಯವನ್ನೇ ಹುಟ್ಟಿಸುತ್ತದೆ. ಇರಲಿ ಹೀಗೆ ಮಾಡುತ್ತೇನೆ. (ಪ್ರಕಾಶ) ಆರ್ಯ, ಏನಾದರೂ ಬಡವೆಗಳನ್ನು ನನ್ನಿಂದ ಕಸಿದುಕೊಳ್ಳಬೇಕೆಂಬುದು ಉದ್ದೇಶವೇ?

ವಿಟ—ಅಯ್ಯೋ, ಆ ಪಾಪ ಬೇಡ. ವಸಂತಸೇನೆ, ಉದ್ಯಾನಲತೆಯ ಪುಷ್ಪವನ್ನು ಕೊಯ್ಯುವುದು ಉಚಿತವಲ್ಲ. ಆದ್ದರಿಂದ ನಮಗೆ ಆಭರಣ ಬೇಡ.

ವಸಂತಸೇನೆ—ಹಾಗಾದರೆ ಈಗ ಮತ್ತೇನು ನಿಮ್ಮ ಅಪೇಕ್ಷೆ?

ಶಕಾರ—ನಾನು, ದೇವಾಂಶ ಪುರುಷ, ಪ್ರತ್ಯಕ್ಷ ವಾಸುದೇವ, ನಿನ್ನಿಂದ ರಮಿಸಲ್ಪಡಬೇಕು.

ವಸಂತಸೇನೆ—(ಕೋಪದಿಂದ) ಸಾಕು, ಸಾಕು. ತೊಲಗು ಆಚೆ. ಹೀನವಾಗಿ ಹರಟುತ್ತಿರುವೆ.

ಶಕಾರ—(ಕೈ ಚಪ್ಪಾಳೆ ಹಾಕಿ ನಗುತ್ತ) ಭಾವ, ಭಾವ, ಇಲ್ಲಿ ನೋಡು. ಈ ಸೂಳೆ ಹೆಣ್ಣು ಒಳಗಿಂದೊಳಗೇ ತುಂಬಾ ಮೋಹವನ್ನು ತೋರಿಸುತ್ತಿದ್ದಾಳೆ. ಅಹಹಾ, ನನಗೆ ಹೇಳುತ್ತಾಳೆ—'ಬಾಪ್ಪ, ನಿನಗೆ ಸಾಕಾಗಿದೆ, ಆಯಾಸವಾಗಿದೆ' ಎಂದು. ನಾನು ಬೇರೆ ಊರಿಗಾಗಲಿ, ಪಟ್ಟಣಕ್ಕಾಗಲಿ ಹೋಗಿದ್ದೂ ಇಲ್ಲ. ಆರ್ಯೆ, ಈ ಭಾವನ ತಲೆಯಾಣೆ, ನನ್ನ ಕಾಲಿನಾಣೆ, ನಿನ್ನ ಬೆನ್ನ ಹಿಂದೆ ಓಡುತ್ತಾ ಬಂದೇ ನನಗೆ ಸಾಕಾಗಿದೆ, ಆಯಾಸವಾಗಿದೆ.

ವಿಟ—(ಸ್ವಗತ) 'ಸಾಕು' ಎಂದವಳೆಂದರೆ, 'ನಿನಗೆ ಸಾಕಾಗಿದೆ' ಎಂದು ಅರ್ಥಮಾಡಿಕೊಳ್ಳುತ್ತಿದ್ದಾನೆ ಈ ಮೂರ್ಖ. (ಪ್ರಕಾಶ) ವಸಂತಸೇನೆ, ನೀನು ಹೇಳುತ್ತಿರುವುದು ವೇಶ್ಯಾವೃತ್ತಿಗೇ ವಿರುದ್ಧವಾಗಿದೆ. ನೋಡು—

ತರುಣಜನಸಹಾಯದಿಂದೆ ವೇಶವಾಸವುಳಿವುದು
ಪಂಕಿಸಲ್ಕೆ ನೀನು ಗಣಿಕೆ ಮಾರ್ಗಜಾತಲತೆಯೊಲು ;

ಹಣಕೆ ಪಣವೆನಿಪ್ಪ ತನುವ ತಳೆದೆ ನೀನುಯೆನ್ನಲು
ಇಷ್ಟನಿರಲಿ ಇಲ್ಲದಿರಲಿ ರಮಿಸು ಒಂದೆ ಪರಿಯೊಳು. ೩೧

ಮತ್ತು

ಒಂದೇ ಭಾವಿಯೊಳಲ್ತೆ ವಿಪ್ರವರನುಂ ಮೇಣ್ ನೀಚನುಂ ಮೀಯುವರ್
ಒಂದೇ ಪೂವಿನ ಬಳ್ಳಿಯನ್ನಡರುಗುಂ ಮೇಣ್ ಬರ್ಹಿಯುಂ ಕಾಗೆಯುಂ
ಒಂದೇ ಬೈತ್ರದೆ ದಾಂಟುವರ್ ದ್ವಿಜರವ್ರೋಲನ್ಯರ್ ಗಡಾ ಮಾನಿಸರ್
ನೀಂ ದಲ್ ಸೂಳೆಯೆ ಬಾವಿಸೌಲತೆಗಳೊಲ್ ಬಂದೆಲ್ಲರಂ ಸೇವಿಸೌ ೩೨

ವಸಂತಸೇನೆ—ಅನುರಾಗಕ್ಕೆ ಗುಣ ಕಾರಣವೇ ಹೊರತು ಬಲಾತ್ಕಾರವಲ್ಲ.

ಶಕಾರ—ಭಾವ, ಈ ತೊತ್ತು ಕಾಮದೇವಾಯತನೋದ್ಯಾನದಲ್ಲಿ ಆ ಚಾರುದತ್ತನನ್ನು ಕಂಡ ಹೊತ್ತಿನಿಂದಲೂ ಅವನಲ್ಲಿ ಅನುರಕ್ತಳಾಗಿ ನನ್ನನ್ನು ಕಾಮಿಸುತ್ತಿಲ್ಲ. ಇಲ್ಲೇ ಎಡಕ್ಕೆ ಅವನ ಮನೆಯಿದೆ. ನಮ್ಮಿಬ್ಬರಿಂದಲೂ ಇವಳು ಕೈತಪ್ಪಿಸಿಕೊಳ್ಳದಂತೆ ನೀನೇ ಮಾಡಬೇಕು.

ವಿಟ—(ಸ್ವಗತ) ಯಾವುದೊಂದನ್ನು ಮುಚ್ಚಬೇಕೋ ಅದನ್ನೇ ಮೂರ್ಖನು ಬಿಚ್ಚಿ ಹೇಳುತ್ತಿದ್ದಾನೆ. ಏನು, ವಸಂತಸೇನೆ ಆರ್ಯ ಚಾರುದತ್ತನಲ್ಲಿ ಅನುರಕ್ತಳಾಗಿರುವಳೆ? ರತ್ನಕ್ಕೆ ರತ್ನದ್ದೇ ಜೋಡಿಯೆಂಬ ಗಾದೆಯಂತೆ ಒಳ್ಳೆಯದೇ ಆಯಿತು. ಆದ್ದರಿಂದ ಹೋಗಲಿ. ಈ ಮೂರ್ಖನ ಸಹವಾಸವೇಕೆ? (ಪ್ರಕಾಶ) ಏ, ಕಾಣೇಲೀಮಾತ, (ಮದುವೆಯಾಗದ ಹೆಣ್ಣಿನ ಮಗ) ಆ ಸೆಟ್ಟಿಯ ಮನೆ ಇರುವುದು ಎಡಕ್ಕಲ್ಲವೆ?

ಶಕಾರ—ಹೌದು, ಎಡಕ್ಕೇ ಅವನ ಮನೆ.

ವಸಂತಸೇನೆ—(ಸ್ವಗತ) ಆಶ್ಚರ್ಯ. ನಿಜವಾಗಿಯೂ ಎಡಕ್ಕೇ ಅವನ ಮನೆ. ಈ ನೀಚನು ತೊಂದರೆ ಕೊಟ್ಟರೂ ಇದನ್ನು ತಿಳಿಸಿ ಪ್ರಿಯ ಸಮಾಗಮದ ಉಪಕಾರವನ್ನೇ ಮಾಡಿದಂತಾಯಿತು.

ಶಕಾರ—ಭಾವ, ದಟ್ಟವಾದ ಈ ಕತ್ತಲೆಯಲ್ಲಿ ವಸಂತಸೇನೆ ಕಳೆದೇ ಹೋದಳು—ಉದ್ದಿನ ರಾಶಿಯಲ್ಲಿ ಅಡಗಿಹೋದ ಮಸಿ ಗುಳಿಗೆಯಂತೆ.

ವಿಟ—ಅಬ್ಬಾ! ಕತ್ತಲೆ ಬಹಳ ದಟ್ಟವಾಗಿದೆ. ನೋಡು—

ಅರಳಿರೆಯುಂ ಕಣ್ ನೋಡಲ್
ನೆರೆಯದು ಕಾರ್ಗತ್ತಲಿಂತು ಮುತ್ತಿರ್ಪುದರಿಂ

ತೆರೆದಿರೆಯುಂ ನಿಡುಗಣ್ಣಿದು
ಭರದಿಂದಂ ಮುಚ್ಚಿಕೊಂಡ ತೆರದಿಂದಿರ್ಕುಂ ೩೩

ಮತ್ತು

ಬಳಿವುದೊ ಕತ್ತಲೆ ಮೈಕೈ
ಗಳನೇಂ ಬಾನ್ ಸುರಿಸುತಿರ್ಪುದೋ ಕಾಡಿಗೆಯಂ
ಖಳಸೇವೆಯ ತೆರದಿಂದಂ
ಫಳಿಲನೆ ತಾಂ ವಿಫಲಮಾಯ್ತು ದೃಷ್ಟಿಯಿದೆನ್ನಾ ೩೪

ಶಕಾರ—ಭಾವ, ವಸಂತಸೇನೆಯನ್ನು ಹುಡುಕುತ್ತಿದ್ದೇನೆ.

ವಿಟ—ಕಾಣೇಲಿಮಾತ, ಏನಾದರೂ ಗುರುತು ಸಿಕ್ಕಿದೆಯೇ?

ಶಕಾರ—ಭಾವ, ಯಾವ ಬಗೆಯ ಗುರುತು?

ವಿಟ—ಒಡವೆಯ ಸದ್ದು ಇಲ್ಲವೆ ಹೂಗಂಧಗಳ ಪರಿಮಳ.

ಶಕಾ—ಹೂಗಂಧಗಳ ಪರಿಮಳ ಕೇಳಿಸುತ್ತಿದೆ. ಮೂಗು ಕತ್ತಲೆಯಿಂದ ತುಂಬಿಕೊಂಡಿರುವುದರಿಂದ ಒಡವೆಯ ಸದ್ದು ಸರಿಯಾಗಿ ಕಣ್ಣಿಗೆ ಕಾಣಿಸುವುದಿಲ್ಲ.

ವಿಟ—(ಜನಾಂತಿಕ) ವಸಂತಸೇನೆ,

ಸಂಜೆಗತ್ತಲು ಮುತ್ತಿ ಮರೆಸಿಹುದೀಗ ನಿನ್ನನು ಎಂದರೂ
ಮುಗಿಲ ಗರ್ಭದೊಳಡಗಿ ಕಾಣದ ಮಿಂಚಿನಂತೆಯೆ ಭರದೊಳು
ನಿನ್ನ ದೇಹದ ಮಾಲ್ಯ ಸೂಸುವ ಕಂಪು ಝಣಝಣವೆನ್ನುವ
ನಿನ್ನ ಭೂಷಣ ಶಬ್ದವೆರಡೂ ಸೂಚಿಸುತ್ತಿವೆ ನಿನ್ನನು. ೩೫

ಕೇಳಿಸಿತೇ ವಸಂತಸೇನೆ?

ವಸಂತಸೇನೆ—(ಸ್ವಗತ) ಕೇಳಿಸಿಯೂ ಇದೆ; ಅಭಿಪ್ರಾಯವೂ ಆಗಿದೆ. (ಕಾಲಂದಿಗೆಗಳನ್ನು ಕಳಚಿ ಮಾಲ್ಯಗಳನ್ನೂ ತೆಗೆದು ಕೈಯಿಂದ ತಡವರಿಸಿ ಕೊಂಡು ನಡೆಯುತ್ತ) ಗೋಡೆಯನ್ನು ಹಿಡಿದೇ ಬರುತ್ತಿರುವ ನನಗೆ ಸಿಕ್ಕಿರುವ ಇದು ಮಗ್ಗುಲ ಬಾಗಿಲೇ ಆಗಿರಬೇಕು. ಆದರೆ ಕೈಗೆ ಮರದ ಸ್ಪರ್ಶವಾಗುತ್ತಿರುವುದರಿಂದ ಬಾಗಿಲು ಮುಚ್ಚಿದೆಯೆಂದಾಯಿತು.

ಚಾರುದತ್ತ—ಮಿತ್ರ, ನನ್ನ ಜಪ ಮುಗಿಯಿತು. ಈಗ ನೀನುಹೋಗಿ

ಮಾತೃದೇವತೆಗಳಿಗೆ ಎಡೆಯನ್ನೊಪ್ಪಿಸಿ ಬಾ.

ವಿದೂಷಕ—ಅಯ್ಯಾ, ನಾನು ಹೋಗುವುದಿಲ್ಲ.

ಚಾರುದತ್ತ—ಅಯ್ಯೋ, ಕಷ್ಟ—

ಬಡತನಪಡಸಿದ ಮನುಜನ ಮಾತನು
ನಡೆಸರು ಯಾರೂ ಬಾಂಧವರು ;
ನೆಚ್ಚಿನ ಗೆಳೆಯರು ಮೊಗದಿರುಹುವರು
ಗಡಣಿಸಿ ಕವಿವುವು ಕುತ್ತಗಳು.
ಉಡುಗುವುವೈಸಲೆ ಸತ್ತ್ವವು ಶೀಲದ
ಜೊನ್ನವು ತಾ ಕಳೆಗುಂದುವುದು.
ಯಾರೋ ಮಾಡಿದ ಪಾಪವನಿವನೇ
ಗೈದವನೆಂಬುದು ಜನ ಬಂದು. ೩೬

ಮತ್ತು

ಈತನ ಕೆಳೆಯನ್ನಾರೂ ಮಾಡರು
ಆದರದಿಂದಲಿ ನುಡಿಯಿಸರು ;
ಬಂದರೆ ಧನಿಕರ ಮನೆಯುತ್ಸವಕಿವ-
ನೆಲ್ಲರು ತೋರ್ಪರನಾದರವ ;
ಪಿರಿಯರ ಕೆಲದಿಂ ಬಹುದೂರದಲಿ
ಮರೆಯೊಳಗಲೆವನು ನಾಚುತಲಿ ;
ಬಡತನವೆಂಬುದೆ ಬುವಿಯೊಳು ನಿರುತವು
ಆರನೆಯೆನಿಸುವ ಪಾತಕವು. ೩೭

ಮತ್ತು

ಬಡತನವೆ ನಿನಗಾಗಿ ಶೋಕಿಸುವೆನಿಂತು
ಗೆಳೆಯನಂತೆನ್ನೊಡರೊಳೀವರೆಗೆ ನಿಂತು ;
ಮಂದಭಾಗ್ಯನು ನಾನು ಮಡಿಯೆ ನೀನಂದು
ಪೋಪೆಯೆಲ್ಲಿಗೆ ಬಳಿಕ ಕಾಣೆನೆಂದು. ೩೮

ವಿದೂಷಕ—(ನಿರ್ವಿಣ್ಣನಾಗಿ) ಮಿತ್ರ, ನಾನು ಹೋಗಲೇಬೇಕಾದರೆ ಈ ರದನಿಕೆಯೂ ಜತೆಗೆ ಬರಲಿ.

ಚಾರುದತ್ತ—ರದನಿಕೆ, ಮೈತ್ರೇಯನ ಜತೆಗೆ ನೀನೂ ಹೋಗು.

ರದನಿಕೆ—ಆರ್ಯನ ಅಪ್ಪಣೆ.

ವಿದೂಷಕ—ರದನಿಕೆ, ಈ ಪೂಜಾದ್ರವ್ಯವನ್ನೂ ದೀಪವನ್ನೂ ಹಿಡಿ. ನಾನು ಪಕ್ಕದ ಬಾಗಿಲನ್ನು ತೆಗೆಯುತ್ತೇನೆ. (ತೆಗೆಯುವನು)

ವಸಂತಸೇನೆ—ನನ್ನ ಅನುಗ್ರಹಕ್ಕಾಗಿಯೇನೋ ಎಂಬಂತೆ ಪಕ್ಕದ ಬಾಗಿಲು ತೆರೆಯಿತು. (ನೋಡಿ) ಒಳಕ್ಕೆ ಹೋಗಿಯೇ ಬಿಡುತ್ತೇನೆ. ಅಯ್ಯೋ! ಅಯ್ಯೋ! ದೀಪ ಬೇರೆ ಉಂಟಲ್ಲಾ! (ಸೆರಗಂಚಿನಿಂದ ಅದನ್ನು ಆರಿಸಿ ಒಳಕ್ಕೆ ಹೋಗುವಳು.)

ಚಾರುದತ್ತ—ಮೈತ್ರೇಯ, ಇದೇನಪ್ಪಾ.

ವಿದೂಷಕ—ಪಕ್ಕದ ಬಾಗಿಲನ್ನು ತೆಗೆದುದೇ ತಡ, ಗಾಳಿಯೆಲ್ಲ ರಾಶಿಯಾಗಿ ಬಂದು ದೀಪವನ್ನಾರಿಸಿಬಿಟ್ಟಿದೆ. ರದನಿಕೆ, ನೀನು ಪಕ್ಕದ ಬಾಗಿಲಿನಿಂದಲೇ ಮೆಲ್ಲಗೆ ಹೋಗು. ನಾನು ಒಳ ಅಂಗಳಕ್ಕೆ ಹೋಗಿ ದೀಪವನ್ನು ಹೊತ್ತಿಸಿಕೊಂಡು ಬರುತ್ತೇನೆ. (ಹೋಗುವನು)

ಶಕಾರ—ಭಾವ, ವಸಂತಸೇನೆಯನ್ನು ಹುಡುಕುತ್ತಿದ್ದೇನೆ.

ವಿಟ—ಹುಡುಕುತ್ತಾ ಇರು, ಹುಡುಕುತ್ತಾ ಇರು.

ಶಕಾರ—(ಹುಡುಕುತ್ತ) ಭಾವ, ಓ, ಸಿಕ್ಕಿದಳು, ಸಿಕ್ಕಿದಳು.

ವಿಟ—ಮೂರ್ಖ, ನನ್ನನ್ನೇ ಹಿಡಿದಿರುವೆಯಲ್ಲಾ!

ಶಕಾರ—ಭಾವ, ನೀನು ಈ ಕಡೆ ಓಡಾಡದೆ ನಿಂತುಕೊ. (ಮತ್ತೆ ಹುಡುಕಿ ಚೇಟನನ್ನು ಹಿಡಿದು) ಭಾವ, ಸಿಕ್ಕಿದಳು, ಸಿಕ್ಕಿದಳು.

ಚೇಟ—ಪ್ರಭು, ನಾನು ನಿಮ್ಮ ಚೇಟ.

ಶಕಾರ—ಇರಲಿ. ಅತ್ತ ಭಾವ, ಇತ್ತ ಚೇಟ. ಭಾವ-ಚೇಟ. ಚೇಟ-ಭಾವ. ನೀವಿಬ್ಬರೂ ಒತ್ತಟ್ಟಿಗೆ ನಿಲ್ಲಿರಿ. (ಮತ್ತೆ ಹುಡುಕಿ ರದನಿಕೆಯ ಕೂದಲನ್ನು ಹಿಡಿದು) ಭಾವ, ಭಾವ, ಈಗ ನಿಜವಾಗಿಯೂ ವಸಂತಸೇನೆಯನ್ನೇ ಹಿಡಿದುಬಿಟ್ಟಿದ್ದೇನೆ.

ಕತ್ತಲೊಳೋಡುತ್ತಿರಲೀಕೆಯನು
ಮಾಲ್ಯದ ಗಂಧವೆ ಸೂಚಿಸಿತು;

ಚಾಣಕ್ಯನೆ ಪಾಂಚಾಲೆಯ ಮುಡಿಯನು
ಪಿಡಿವೊಲು ಪೆಣ್ಣನು ಪಿಡಿದಿಹೆನು. ೪೯

ವಿಟ— ಹರೆಯದ ಮದವೊಳಗಾತನ ಕಾಮಿಸಿ
ಬಂದುದು ನಿನಗೀ ಧರ್ಷಣವು;
ಪೂವಿಂ ಸಿಂಗರಿಸಲ್ಕೆಡೆಯಾದೀ
ಮುಡಿಗೈತಂದುದು ಕರ್ಷಣವು. ೫೦

ಶಕಾರ— ಇದೊ ಚೆನ್ನೆ ಸಿಕ್ಕಿರುವೆ ತಲೆಯಲ್ಲಿ, ಕೂದಲಲಿ
ಕೇಶದಲಿ, ಕುರುಳಿನಲಿ, ಕೂಗು ಕೂಗು;
ಹುಯ್ಯಲಿಡು ಬೊಬ್ಬೆಯಿಡು ಗಟ್ಟಿದನಿಯಲಿ ಶಿವಗೆ
ಶಂಭು ಶಂಕರರಿಂಗೆ ಮೇಣೀಶಗೆ. ೫೧

ರದನಿಕೆ—(ಭಯದಿಂದ) ಪೂಜ್ಯರಾದ ತಾವು ಏನು ಮಾಡಬೇಕೆಂದಿರುವಿರಿ?

ವಿಟ—ಕಾಣೇಲೀಮಾತ, ಈ ದನಿಯೇಕೋ ಬೇರೆಯಾಗಿರುವಂತಿದೆಯಲ್ಲ!

ಶಕಾರ—ಭಾವ, ಮೊಸರಿನ ಕೆನೆ ಬೇಕಾದಾಗ ಹೆಣ್ಣು ಬೆಕ್ಕಿನ ದನಿ ಬದಲಾಯಿಸುವಂತೆಯೇ ಈ ತೊತ್ತಿನ ಮಗಳೂ ದನಿ ಬದಲಾಯಿಸಿದ್ದಾಳೆ.

ವಿಟ—ಏನು, ದನಿ ಬದಲಾಯಿಸಿರುವಳೆ? ವಿಚಿತ್ರವೇ ಸರಿ. ಅಥವಾ ಯಾವ ವಿಚಿತ್ರವೂ ಇಲ್ಲ; ಏಕೆಂದರೆ—

ರಂಗದೊಳಭಿನಯಗೈಯು
ತ್ತಂಗಗಳಿಂ ಸಕಲ ಕಲೆಗಳಂ ಕಲ್ತಿರುವಳ್
ಮೋಸದ ಕಲೆಯೊಳ್ ಪರಿಣತ
ಳೀ ಸುದತಿಯೆನಲ್ಕೆ ದನಿಯ ಬೇರೆನಿಸಿರ್ಪಳ್ ೫೨

(ಪ್ರವೇಶ)

ವಿದೂಷಕ—ಆಶ್ಚರ್ಯವೇ ಸರಿ. ಈ ಸಂಜೆಯ ಗಾಳಿಗೆ ದೀಪ ಫುರ ಫುರ ಎನ್ನುತ್ತಿದೆ ಯಾಗಪಶುವಾಗಿ ಬರುತ್ತಿರುವ ಆಡಿನ ಎದೆಯಂತೆ.
(ರದನಿಕೆಯನ್ನು ಸಮೀಪಿಸಿ, ಅವಳ ಸ್ಥಿತಿಯನ್ನು ನೋಡಿ)

ಶಕಾರ—ಭಾವ, ಮನುಷ್ಯ! ಮನುಷ್ಯ!

ವಿದೂಷಕ—ಇದು ನ್ಯಾಯವೋ? ಇದು ಸರಿಯೋ? ಆರ್ಯ ಚಾರುದತ್ತನು

ಬಡವನಾದನೆಂದು ಈಗ ಪರಪುರುಷರೆಲ್ಲ ಹೀಗೆ ಮನೆಗೆ ನುಗ್ಗ ಬಹುದೋ?

ರದನಿಕೆ—ಅಯ್ಯಾ, ನನ್ನ ಅವಮಾನವನ್ನು ನೋಡು.

ವಿದೂಷಕ—ಏನು ನಿನಗೆ ಅವಮಾನವೋ? ನಮಗೋ?

ರದನಿಕೆ—ನಿಜವಾಗಿಯೂ ನಿಮಗೇ ಅವಮಾನ.

ವಿದೂಷಕ—ಇದೇನು? ಬಲಾತ್ಕಾರ ನಡೆದಿದೆಯೋ?

ರದನಿಕೆ—ಮತ್ತೇನು?

ವಿದೂಷಕ—ದಿಟವೆ?

ರದನಿಕೆ—ದಿಟ.

ವಿದೂಷಕ—(ಕೋಪದಿಂದ ದೊಣ್ಣೆಯನ್ನೆತ್ತಿ) ಬೇಡ, ನೋಡಿ. ಸ್ವಗೃಹದಲ್ಲಿ ಕುನ್ನಿ ಕೂಡ ಬಹಳ ಜೋರಾಗಿರುತ್ತದೆ; ಬ್ರಾಹ್ಮಣನಾದ ನಾನೇನೂ ಕಡಿಮೆಯಿಲ್ಲ. ಈ ದೊಣ್ಣೆಯೂ ನಮ್ಮ ಅದೃಷ್ಟದಂತೆ ಡೊಂಕಾಗಿದೆ. ಒಣಗಿ ಬೆಂಡಾದ ಬೊಂಬಿನ ತಲೆಯನ್ನೊಡೆಯುವಂತೆ ಇದರಿಂದ ಹೊಡೆದು ನಿನ್ನ ತಲೆಯನ್ನೂ ಪುಡಿಪುಡಿ ಮಾಡಿಬಿಡುತ್ತೇನೆ.

ವಿಟ—ಮಹಾಬ್ರಾಹ್ಮಣ, ಕ್ಷಮಿಸು, ಕ್ಷಮಿಸು.

ವಿದೂಷಕ—(ವಿಟನನ್ನು ಕಂಡು) ಇವನದೇನೂ ಇಲ್ಲಿ ತಪ್ಪಿಲ್ಲ. (ಶಕಾರನನ್ನು ಕಂಡು) ಇವನೇ ತಪ್ಪಿತಸ್ಥ. ಎಲ ಎಲಾ, ರಾಜನಳಿಯ, ಸಂಸ್ಥಾನಕ, ದುರ್ಜನ, ದುರ್ಮನುಷ್ಯ, ಇದು ಸರಿಯೇನೋ? ಪೂಜ್ಯನಾದ ಚಾರುದತ್ತನು ದರಿದ್ರನಾದ ಮಾತ್ರಕ್ಕೆ ಅವನ ಗುಣಗಳಿಂದ ಉಜ್ಜಯಿನೀ ಪಟ್ಟಣವೇ ಅಲಂಕೃತವಾಗಿಲ್ಲವೆ? ಅವನ ಮನೆಗೇ ನುಗ್ಗಿ ಹೀಗೆ ಪರಿಜನರನ್ನು ಹಿಂಸೆ ಮಾಡಬಹುದೆ?

ಬಡವನೆಂದು ಬೇಡ ಭಂಗ
ಯಮನಿಗಿಲ್ಲ ಬಡವನು;
ಗುಣವಿಹೀನ ಧನಿಕನವನೆ
ದಿಟನೆ ದಟ್ಟದರಿದ್ರನು. ೪೩

ವಿಟ—(ನಾಚಿಕೆಯಿಂದ) ಮಹಾಬ್ರಾಹ್ಮಣ, ಕ್ಷಮಿಸು. ಯಾರೋ ಎಂದುಕೊಂಡು ಹೀಗೆ ಮಾಡಲಾಯಿತು, ದರ್ಪದಿಂದಲ್ಲ. ನೋಡು—

ಕಾಮಿನಿಯೊರ್ವಳನರಸುತ್ತಿರುವೆವು

ವಿದೂಷಕ—ಇವಳನ್ನೇಯೋ?

ವಿಟ—ಅಲ್ಲ, ಅಲ್ಲ,—

ಜವ್ವನವವಳದು ಎಮ್ಮ ವಶ;
ಕಳೆದಳು ಎಲ್ಲಿಯೊ ಅವಳೇ ಎನ್ನುತೆ
ಬಂದುದು ಇಂತೀ ಗುಣನಾಶ. ೪೪

ಸರ್ವಥಾ ನಮ್ಮನ್ನು ಕ್ಷಮಿಸಬೇಕು. ಇದೋ ಅಡ್ಡಬೀಳುತ್ತೇನೆ.

(ಕತ್ತಿಯನ್ನು ಕೆಳಗಿಟ್ಟು ಕೈಮುಗಿದುಕೊಂಡು ಕಾಲಿಗೆ ಬೀಳುವನು.)

ವಿದೂಷಕ—ಸತ್ಪುರುಷನೆ, ಎದ್ದೇಳು, ಎದ್ದೇಳು. ತಿಳಿಯದೆ ನಾನು ನಿನ್ನನ್ನು ಬೈದೆ. ಈಗ ತಿಳಿದ ಮೇಲೆ ನಿನ್ನನ್ನೇ ಬೇಡಿಕೊಳ್ಳುತ್ತೇನೆ.

ವಿಟ—ಇಲ್ಲಿ ನಾನು ನಿನ್ನನ್ನು ಬೇಡುವುದೇ ಉಳಿದಿದೆ. ಒಂದು ಮಾತನ್ನು ನಡೆಸುವೆನೆಂದು ವಚನವಿತ್ತರೆ ನಾನು ಏಳುತ್ತೇನೆ.

ವಿದೂಷಕ—ಆಗಲಿ, ಹೇಳು.

ವಿಟ—ಈ ಸುದ್ದಿಯನ್ನು ಆರ್ಯ ಚಾರುದತ್ತನಿಗೆ ನೀನು ಹೇಳಬಾರದು.

ವಿದೂಷಕ—ಆಗಲಿ, ಹೇಳುವುದಿಲ್ಲ.

ವಿಟ— ವಿಪ್ರನೆ ಶಿರದೊಳಗಾಂತೆನು ನಿನ್ನಯ
ಕರುಣೆಯು ಸೂಸುವ ವಚನವನು ;
ನಿನ್ನಯ ಗುಣದಾ ಶಸ್ತ್ರವೆ ಜಯಸಿತು
ಶಸ್ತ್ರವ ಪಿಡಿದೆಮ್ಮೆಲ್ಲರನು. ೪೫

ಶಕಾರ—(ಅಸೂಯೆಯಿಂದ) ಇದೇನಿದು? ಭಾವನು ಈ ದುಷ್ಟವಟುವಿಗೆ ಕೈಮುಗಿದು ಕಾಲಿಗೆ ಬೀಳುತ್ತಿರುವುದೇಕೆ?

ವಿಟ—ನನಗೆ ಭಯವಾಗಿರುವುದರಿಂದ.

ಶಕಾರ—ಭಯ ಏತರದು?

ವಿಟ—ಚಾರುದತ್ತನ ಗುಣಗಳದು.

ಶಕಾರ—ಯಾರ ಮನೆಯಲ್ಲಿ ಕಾಲಿಟ್ಟರೆ ತಿನ್ನುವುದಕ್ಕೂ ಇಲ್ಲವೋ ಅವನ ಗುಣಗಳೆಂಥವು?

ವಿಟ—ಹಾಗೆನ್ನಬೇಡ—

ನಮ್ಮಂಥರಿಂಗವನು ಕೃಪೆದೋರಿ ಬಡವಾದ,
ಗರ್ವದಿಂದಾರನೂ ಕಡೆಗಣಿಸಲಿಲ್ಲ;
ನೀರು ತುಂಬಿದ ಕೆರೆಯು ಬೇಸಗೆಯೊಳಿಂತಂತೆ
ಜನರ ಬಯಕೆಯ ತಣಿಸಿ ಬತ್ತಿರುವನಲ್ಲ! ೪೬

ಶಕಾರ—(ರೋಷದಿಂದ) ಆ ತೊತ್ತಿನ ಮಗ ಯಾರು?

ಶ್ವೇತಕೇತುವೊ ಧೀರ ಪಾಂಡುಸುತರೊಳು ವೀರ?
ಇಂದ್ರ ರಾಧೆಗೆ ಇತ್ತ ರಾವಣನೊ ಅವನು?
ರಾಮನಿಗೆ ಕುಂತಿಯೊಳು ಹುಟ್ಟಿದಶ್ವತ್ಥಾಮ-
ನಹನೊ? ತಾನೆ ಜಟಾಯು ಧರ್ಮಜನ ಸುತನು? ೪೭

ವಿಟ—ಮೂರ್ಖ, ಅವನು ಆರ್ಯ ಚಾರುದತ್ತ—

ದೀನರ್ಗಂ ಕಲ್ಪವೃಕ್ಷಂ ಸ್ವಗುಣಫಲನತಂ ಸಜ್ಜನರ್ಗಾಶಯಂ ತಾಂ
ಆದರ್ಶಂ ಶಿಕ್ಷಿತರ್ಗಂ ಸುಚರಿನಿಕಷಂ ಶೀಲವೇಲಾಸಮುದ್ರಂ
ಪುಣ್ಯಾತ್ಮಂ ಬೈವನಲ್ಲಂ ಪುರುಷಗುಣಗಣಕ್ಕಾಕರಂ ಭೂರಿಸತ್ತ್ವಂ
ಶ್ಲಾಘ್ಯಂ ಬಾಳಾತಗೊರ್ವಂಗಧಿಕಗುಣಗಳಿಂ ಶ್ವಾಸಜೀವರ್ ಗಡಾನ್ಯರ್

ಆದ್ದರಿಂದ ನಾವು ಇಲ್ಲಿಂದ ಹೊರಟು ಹೋಗೋಣ.

ಶಕಾರ—ವಸಂತಸೇನೆಯನ್ನು ಹಿಡಿದುಕೊಳ್ಳದೆಯೇ ಹೋಗುವುದೆ?

ವಿಟ—ವಸಂತಸೇನೆ ಕಳೆದುಹೋದಳು.

ಶಕಾರ—ಹಾಗೆಂದರೇನು?

ವಿಟ—

ಕುರುಡನ ಕಣ್ಣಿನಂತೆ, ರುಜೆಯಾವರಿಸಿರ್ಪನ ಪುಷ್ಟಿಯಂತೆಯೇ
ವರಮತಿಯಂತೆ ಮೂರ್ಖನ, ಮಹಾಲಸಿಯಾದನ ಸಿದ್ಧಿಯಂತೆಯೇ;
ಸ್ಮರಣವೆ ಕುಂದಿದಾ ವ್ಯಸನಶೀಲನ ಸೂನ್ನತವಿದ್ಯೆಯಂತೆಯೇ
ತೊರೆಯುತೆ ನಿನ್ನನಿಂದು ರತಿವೋಲ್ ಕಳೆದಿರ್ಪಳು ವೈರಿವರ್ಗಮೊಳ್ ೪೯

ಶಕಾರ—ವಸಂತಸೇನೆಯನ್ನು ಹಿಡಿದುಕೊಳ್ಳದೆ ನಾನು ಹೋಗುವುದೇ ಇಲ್ಲ.

ವಿಟ—ಇದನ್ನು ನೀನು ಕೇಳಿಲ್ಲವೋ—

ಹಿಡಿವುದು ಗೂಟದೊಳಾನೆಯ
ಹಿಡಿವುದು ಕಡಿವಾಣದಿಂದೆ ಕುದುರೆಯನಿಳೆಯೊಳ್

ಹಿಡಿವುದು ಹೆಣ್ಣನು ಹೃದಯವೆ
ನಡೆ ನಡೆಯಿದು ನಿನ್ನೊಳಿಲ್ಲವಾಗಿರಲೀಗಳ್

ಶಕಾರ—ನೀನು ಹೋಗುವುದಾದರೆ ಹೋಗು. ನಾನು ಹೋಗುವುದಿಲ್ಲ.

ವಿಟ—ಹಾಗೆಯೇ ಆಗಲಿ, ನಾನು ಹೋಗುತ್ತೇನೆ (ನಿಷ್ಕ್ರಮ)

ಶಕಾರ—ಭಾವನು ಅಭಾವವನ್ನೈದಿದನು! (ವಿದೂಷಕನನ್ನು ಕುರಿತು) ಎಲೋ ಕಾಗೆಕಾಲಿನ ತಲೆಶಿರದವನೆ, ದುಷ್ಟವಟು, ಕೆಳಗೆ ಕುಳಿತುಕೊ, ಕುಳಿತುಕೊ.

ವಿದೂಷಕ—ನಮ್ಮನ್ನು ಆಗಲೇ ಕೆಳಗೆ ಕೂರಿಸಿದ್ದಾಗಿದೆ.

ಶಕಾರ—ಯಾರು?

ವಿದೂಷಕ—ವಿಧಿ.

ಶಕಾರ—ಮೇಲೆ ಏಳು, ಏಳು.

ವಿದೂಷಕ—ಮುಂದೆ ಏಳುತ್ತೇವೆ.

ಶಕಾರ—ಯಾವಾಗ?

ವಿದೂಷಕ—ಮತ್ತೆ ದೈವ ಅನುಕೂಲವಾದಾಗ.

ಶಕಾರ—ಎಲೋ, ಅಳು, ಅಳು.

ವಿದೂಷಕ—ಆಗಲೇ ನಮ್ಮನ್ನು ಅಳಿಸಿದ್ದಾಗಿದೆ.

ಶಕಾರ—ಯಾರು?

ವಿದೂಷಕ—ದುರ್ಗತಿ.

ಶಕಾರ—ಎಲೋ, ನಗು, ನಗು.

ವಿದೂಷಕ—ಮುಂದೆ ನಗುವುದೂ ಆದೀತು.

ಶಕಾರ—ಯಾವಾಗ?

ವಿದೂಷಕ—ಆರ್ಯ ಚಾರುದತ್ತನಿಗೆ ಮತ್ತೆ ಸಂಪತ್ತು ಬಂದಾಗ.

ಶಕಾರ—ಎಲ ಎಲಾ, ದುಷ್ಟವಟು, ಆ ದರಿದ್ರ ಚಾರುದತ್ತನಿಗೆ ನಾನು ಹೇಳಿದೆನೆಂದು ಹೀಗೆ ಹೇಳು—"ಹೊಸ ನಾಟಕವನ್ನು ಪ್ರದರ್ಶಿಸಲು ಹೊರಟ ಪಾತ್ರಧಾರಿಣಿಯಂತೆ ಚಿನ್ನ, ಬಂಗಾರ, ಹೇರಿಕೊಂಡಿರುವ ಸೂಳೆಯ ಮಗಳು ಈ ವಸಂತಸೇನೆ ಕಾಮದೇವಾಯತನೋದ್ಯಾನದಿಂದಲೂ ನಿನ್ನನ್ನು ಕಾಮಿಸಿ ನಾನೆಷ್ಟು ಬಲಾತ್ಕಾರದಿಂದ ಒಲಿಸಿ

ದರೂ ಒಪ್ಪದೆ ನಿನ್ನ ಮನೆಯನ್ನು ಹೊಕ್ಕಿದ್ದಾಳೆ. ಅವಳನ್ನು ನೀನೇ ಕೈಯಾರೆ ಹೊರಡಿಸಿ ನನಗೆ ಒಪ್ಪಿಸಿಕೊಟ್ಟರೆ ನ್ಯಾಯಾಲಯದ ವ್ಯವಹಾರವಿಲ್ಲದೆ ನೀನು ಒಪ್ಪಿಸಿದಂತಾಗುವುದರಿಂದ ನನಗೆ ನಿನ್ನಲ್ಲಿ ಏಕರೀತಿ ಪ್ರೀತಿಯುಳಿಯುತ್ತದೆ. ಇಲ್ಲವೆ ನೀನೇನಾದರೂ ಒಪ್ಪಿಸದಿದ್ದರೆ ನಮ್ಮ ವೈರ ಆಮರಣಾಂತವಾಗಿ ನಿಲ್ಲುವುದೇ ಸರಿ. ಅಲ್ಲದೆ ಇದನ್ನೂ ಯೋಚಿಸು—

ತೊಟ್ಟಿಗೆ ಸೆಗಣಿಯ ಮೆತ್ತಿದ ಕುಂಬಳ
  ಬಿಸಿಲೊಳಗೊಣಗಿದ ಶಾಕಗಳು;
ಹುರಿದಿಹ ಮಾಂಸವು ಚಳಿರಾತ್ರಿಯಲಿ
  ಬೇಯಿಸಿದನ್ನದ ಅಡಿಗೆಗಳು
ಎಷ್ಟೇ ಸಮಯವು ಉರುಳಿದರೂ ಅವು
  ಹಳಸವು ರುಚಿಯನು ಬದಲಿಸವು." ೫೧

ಚೆನ್ನಾಗಿ ಹೇಳು; ವಂಚಿಸಿ ಹೇಳು; ನಾನು ನನ್ನರಮನೆಯ ಮಾಳಿಗೆಯ ಮೇಲೆ ಕಟ್ಟಿರುವ ಪಾರಿವಾಳಗಳ ಗೂಡಿನಲ್ಲಿ ಕುಳಿತರೆ ಕೇಳಿಸುವಂತೆ ಗಟ್ಟಿಯಾಗಿ ಹೇಳು. ತಪ್ಪುತಪ್ಪಾಗಿ ಹೇಳಿದರೆ ಬಾಗಿಲ ಸಂದಿಯಲ್ಲಿ ಸಿಕ್ಕಿಕೊಂಡ ಬೇಲದ ಕಾಯಂತೆ ನಿನ್ನ ತಲೆಯನ್ನು ಪುಡಿಪುಡಿ ಮಾಡಿಬಿಡುತ್ತೇನೆ.

ವಿದೂಷಕ—ಆಗಲಿ, ಹೇಳುತ್ತೇನೆ.

ಶಕಾರ—(ಚೇಟನಿಗೆ ಮಾತ್ರ ಕೇಳಿಸುವಂತೆ) ಚೇಟ, ನಿಜವಾಗಿಯೂ ಭಾವ ಹೊರಟೇ ಹೋದನೆ?

ಚೇಟ—ಹೌದು.

ಶಕಾರ—ನಾವೂ ಬೇಗ ಹೊರಟುಹೋಗೋಣ.

ಚೇಟ—ಒಡೆಯನು ಕತ್ತಿಯನ್ನು ತೆಗೆದುಕೊಳ್ಳಬೇಕು.

ಶಕಾರ—ನಿನ್ನ ಕೈಯಲ್ಲೇ ಇರಲಿ ಬಿಡು.

ಚೇಟ—ಇಲ್ಲ, ಇದು ಒಡೆಯನ ಕತ್ತಿ. ಒಡೆಯನೇ ಇದನ್ನು ಹಿಡಿಯಬೇಕು.

ಶಕಾರ—(ತಿರುಗುವ:ದುಗಾಗಿ ಹಿಡಿದುಕೊಂಡು)—

ಬಿಚ್ಚುಗತ್ತಿಯ ಹೊತ್ತು ಹೆಗಲೊಳ। ಗಚ್ಚ ಚೆಮ್ಮೂಲಂಗಿ ಬಣ್ಣದ,
ಮುಚ್ಚುತೊಯ್ಯನೆ ಮತ್ತೆ ಕತ್ತಿಯನೆನ್ನ ಒರೆಯೊಳಗೆ
ಚೆಚ್ಚರವೆ ಮನೆಯೆಡೆಗೆ ಸಾಗುವೆ। ನೆಚ್ಚರದ ಹೆಣ್ಣಂಡು ನಾಯ್ಗಳು
ಮಚ್ಚರಿಸೆ ಬೊಗಳುತ್ತೆ ಅಟ್ಟಲು ನಡೆವ ನರಿಯಂತೆ ೫೨

(ವಿಟ, ಶಕಾರರ ನಿಷ್ಕ್ರಮ)

ವಿದೂಷಕ—ರದನಿಕೆ, ನಿನ್ನ ಈ ಅಪಮಾನವನ್ನು ಪೂಜ್ಯ ಚಾರುದತ್ತನಿಗೆ ತಿಳಿಸಬೇಡ ಕಂಡೆಯಾ! ದುರ್ಗತಿಯಿಂದ ಆಗಲೇ ನೋಯುತ್ತಿರುವ ಆತನಿಗೆ ಇದನ್ನು ಕೇಳಿ ಇಮ್ಮಡಿ ನೋವಾಗುವುದು.

ರದನಿಕಾ—ನನ್ನ ಹೆಸರೇ 'ರದನಿಕೆ'ಯಲ್ಲವೇ; ಇದೋ ಬಾಯಿಮುಚ್ಚಿ ಕೊಂಡೇ ಇರುತ್ತೇನೆ.

ವಿದೂಷಕ—ಹಾಗೆಯೇ ಇರಬೇಕು.

ಚಾರುದತ್ತ—(ವಸಂತಸೇನೆಯನ್ನು ಕುರಿತು) ರದನಿಕೆ, ಗಾಳಿಗೆ ಆಸೆಪಡುತ್ತ ಹೊರಗೆ ಬಂದ ಈ ರೋಹಸೇನನಿಗೆ ಈಗ ಸಂಜೆಯ ಚಳಿ ಯಿಂದ ನೋವಾಗುತ್ತಿದೆ. ಇವನನ್ನು ಒಳಕ್ಕೆ ಕರೆದುಕೊಂಡು ಹೋಗು. ಈ ಉತ್ತರೀಯವನ್ನು ಆತನಿಗೆ ಹೊದಿಸು. (ಉತ್ತರೀಯ ವನ್ನು ಕೊಡುವನು.)

ವಸಂತಸೇನೆ—(ಸ್ವಗತ) ಓ, ನನ್ನನ್ನು ಆಳೆಂದು ಭ್ರಮಿಸಿದ್ದಾನೆ. (ಉತ್ತ ರೀಯವನ್ನು ತೆಗೆದುಕೊಂಡು ಮೂಸಿನೋಡಿ ಆನಂದದಿಂದ) ಆಶ್ಚರ್ಯ, ಉತ್ತರೀಯಕ್ಕೆ ಜಾಜಿಯ ಪರಿಮಳ ಕಟ್ಟಿದೆ! ಈತನ ಯೌವನ ಔದಾಸೀನ್ಯಕ್ಕೆಡೆಗೊಟ್ಟಿಲ್ಲ. (ಕಾಣದಂತೆ ತಾನೇ ಉತ್ತರೀಯವನ್ನು ಹೊದೆದು ಕೊಳ್ಳುವಳು.)

ಚಾರುದತ್ತ—ಓ ರದನಿಕೆ, ರೋಹಸೇನನನ್ನು ಒಳಗೆ ಕರೆದುಕೊಂಡು ಹೋಗು.

ವಸಂತಸೇನೆ—(ಸ್ವಗತ) ನಿನ್ನ ಮನೆಯೊಳಕ್ಕೆ ಪ್ರವೇಶವಿಲ್ಲದ ಅದೃಷ್ಟಹೀನೆ ನಾನು.

ಚಾರುದತ್ತ—ರದನಿಕೆ, ಮಾತಿಗೆ ಉತ್ತರವನ್ನೂ ಕೊಡಲಾರೆಯಾ? ಅಯ್ಯೋ ಕಷ್ಟ—

ವಿಧಿಯಿಂ ದುರ್ದೆಸೆ ಮನುಜಂ
ಗೊದಗಲ್ ಸಂಪದ್ವಿನಾಶಮದರಾ ಬೆನ್ನೊಳ್
ಹೃದಯದ ಮಿತ್ರರಮಿತ್ರರ್
ಪದೆಪಿಂದನುರಕ್ತರಪ್ಪರಲ್ತೆ ವಿರಕ್ತರ್ ೫೩

(ರದನಿಕೆ ವಿದೂಷಕರ ಪ್ರವೇಶ)

ವಿದೂಷಕ—ಇದೋ ನೋಡು, ರದನಿಕೆ.

ಚಾರುದತ್ತ—ಇವಳೇ ಹೌದು ರದನಿಕೆ. ಈ ಮತ್ತೊಬ್ಬಳಾರು?

ಕಲುಷಂಗೊಳಿಸಿದೆನಿವಳಂ
ತಿಳಿಯದೆ ಮೇಣೆನ್ನ ವಸ್ತ್ರಮಂ ಸೋಂಕಿಸುತುಂ

ವಸಂತಸೇನೆ—(ಸ್ವಗತ) ಇಲ್ಲ, ಸಿಂಗರಿಸಿರುವೆ.

ಚಾರುದತ್ತ—ಪೊಳೆವಳ್ ಬೆಳ್ಮುಗಿಲಿಂದಂ
ಕಳೆಗುಂದಿದ ಚಂದ್ರಲೇಖೆಯೆಂಬಂತೀಗಳ್ ೫೪

ಅಥವಾ, ಪರಸ್ತ್ರೀದರ್ಶನವೇ ಯುಕ್ತವಲ್ಲ.

ವಿದೂಷಕ—ಗೆಳೆಯ, ಪರಸ್ತ್ರೀದರ್ಶನದ ಶಂಕೆಯನ್ನು ಬಿಡು. ಇವಳು ವಸಂತಸೇನೆ. ಕಾಮದೇವಾಯತನೋದ್ಯಾನದಿಂದಲೂ ಒಂದೇ ಸಮನೆ ನಿನ್ನಲ್ಲಿ ಅನುರಕ್ತಳಾಗಿದ್ದಾಳೆ.

ಚಾರುದತ್ತ—ಏನು, ಇವಳೇ ವಸಂತಸೇನೆಯೆ? (ಸ್ವಗತ)—

ಸಿರಿಯುದು ತೊಲಗಿರಲೀಕೆಯ
ದರುಶನದಿಂ ಪುಟ್ಟುತಿರ್ಪ ಕಾಮಂ ಸಲೆ ಕಾ
ಪುರುಷನ ರೋಷಾವೇಶದ
ತೆರದಿಂ ನಿಜದೇಹದಲ್ಲೆ ಲಯವಂ ಪಡೆಗುಂ ೫೫

ವಿದೂಷಕ—ಗೆಳೆಯ, ರಾಜನಳಿಯನು ಹೀಗೆ ಹೇಳುತ್ತಾನೆ—

ಚಾರುದತ್ತ—ಏನೆಂದು?

ವಿದೂಷಕ—'ಹೊಸನಾಟಕವನ್ನು ಪ್ರದರ್ಶಿಸಲು ಹೊರಟ ಪಾತ್ರಧಾರಿಣಿಯಂತೆ ಚಿನ್ನ, ಬಂಗಾರ ಹೇರಿಕೊಂಡಿರುವ ಸೂಳೆಯ ಮಗಳು ಈ ವಸಂತಸೇನೆ ಕಾಮದೇವಾಯತನೋದ್ಯಾನದಿಂದಲೂ ನಿನ್ನನ್ನು ಕಾಮಿಸಿ ನಾವೆಷ್ಟು ಬಲಾತ್ಕಾರದಿಂದ ಒಲಿಸಿದರೂ ಒಪ್ಪದೆ ನಿನ್ನ

ಮನೆಯನ್ನು ಹೊಕ್ಕಿದ್ದಾಳೆ.....'

ವಸಂತಸೇನೆ—(ಸ್ವಗತ) 'ಬಲಾತ್ಕಾರದಿಂದ ಒಲಿಸಿದರೂ' ಎಂಬ ಮಾತು ನನಗೆ ಗೌರವವನ್ನೇ ತರುವಂತಿದೆ.

ವಿದೂಷಕ—'ಅವಳನ್ನು ನೀನೇ ಕೈಯಾರೆ ಹೊರಡಿಸಿ ನನಗೆ ಒಪ್ಪಿಸಿ ಕೊಟ್ಟರೆ ನ್ಯಾಯಾಲಯದ ವ್ಯವಹಾರವಿಲ್ಲದೆ ನೀನು ಒಪ್ಪಿಸಿದಂತಾಗುವುದರಿಂದ ನನಗೆ ನಿನ್ನಲ್ಲಿ ಏಕರೀತಿಯಾದ ಪ್ರೀತಿ ಉಳಿಯುತ್ತದೆ. ಇಲ್ಲವೆ ಹೋದರೆ ನಮ್ಮ ವೈರ ಆಮರಣಾಂತವಾಗಿ ನಿಲ್ಲುವುದೇ ಸರಿ.'

ಚಾರುದತ್ತ—(ತಿರಸ್ಕಾರದಿಂದ) ಇವನೊಬ್ಬ ಮೂರ್ಖ. (ಸ್ವಗತ) ಓ, ಈ ಯುವತಿ ದೇವದಾಸಿಯೇನು? ಆದ್ದರಿಂದಲೇ ಆಗ

ಮನೆಯೊಳಗೆ ಹೋಗೆಂದು ಬಲವಂತಪಡಿಸೆಯೂ
ಕದಲದಿರ್ದಳು ತಾನು ದೌರ್ಭಾಗ್ಯಕಂಜಿ;
ಪುರುಷ ಪರಿಚಯದಿಂದ ಜಾಣ್ನುಡಿಯ ಕಲೆಗಳವು
ಸಿದ್ಧಿಸಿರೆಯೂ ತಾನು ಮೌನದಿಂದಿಹಳು. ೫೬

(ಪ್ರಕಾಶ) ಅಮ್ಮಾ, ವಸಂತಸೇನೆ, ನಾನು ಅರಿಯದೆ ಆಳೆಂದು ಭ್ರಮಿಸಿ ನಡೆದುಕೊಂಡುದು ತಪ್ಪಾಯಿತು. ತಲೆವಾಗಿ ನಿನ್ನ ಕ್ಷಮೆ ಬೇಡುತ್ತೇನೆ.

ವಸಂತಸೇನೆ—ಅನುಚಿತವಾಗಿ ಮನೆಗೆ ಪ್ರವೇಶಮಾಡಿದ ತಪ್ಪು ನನ್ನದಾದ್ದರಿಂದ ನಾನೂ ತಲೆವಾಗಿ ನಿನಗೆ ನಮಸ್ಕರಿಸಿ ಕ್ಷಮೆ ಬೇಡುತ್ತೇನೆ.

ವಿದೂಷಕ—ಓ, ನೀವಿಬ್ಬರೂ ತಲೆವಾಗಿ ಬತ್ತದ ತೆನೆ ಗದ್ದೆಗಳಂತೆ ಅನ್ಯೋನ್ಯ ಸಂಪರ್ಕ ಪಡೆದಿರಿ. ನಾನು ಕೂಡ ಒಂಟೆಯ ಮಂಡಿಯಂತಿರುವ ಈ ನಗ್ನ ಮಂಡೆಯನ್ನು ಬಾಗಿಸಿ ನಿಮ್ಮಿಬ್ಬರ ಕ್ಷಮೆಯನ್ನೂ ಬೇಡುತ್ತೇನೆ.

ಚಾರುದತ್ತ—ಇರಲಿ, ವಿನಯೋಪಚಾರ ಸಾಕು.

ವಸಂತಸೇನೆ—(ಸ್ವಗತ) ಅಹಾ, ಇವನ ಮಾತು ಎಷ್ಟು ಮಧುರ! ಎಷ್ಟು ಚತುರ! ಹೀಗಿಲ್ಲಿ ಬಂದು ಇವನೊಡನೆ ಇಲ್ಲೇ ರಾತ್ರಿಯನ್ನು ಕಳೆಯುವುದು ಸರಿಯಲ್ಲ. ಇರಲಿ ಹೀಗೆ ಮಾಡುತ್ತೇನೆ—(ಪ್ರಕಾಶ) ಪೂಜ್ಯನು ನನ್ನ ಮೇಲೆ ಕೃಪೆ ಮಾಡುವುದಾದರೆ ನನ್ನದೊಂದು

ಕೋರಿಕೆಯುಂಟು. ಈ ನನ್ನ ಆಭರಣಗಳನ್ನು ನಿನ್ನ ಮನೆಯಲ್ಲಿ ನ್ಯಾಸವಾಗಿಟ್ಟುಕೊಳ್ಳಬೇಕು. ಇವುಗಳ ಸಲುವಾಗಿಯೇ ಪಾಪಿಗಳು ನನ್ನನ್ನು ಬೆನ್ನಟ್ಟುತ್ತಾರೆ.

ಚಾರುದತ್ತ—ಈ ಮನೆ ನ್ಯಾಸವನ್ನಿಟ್ಟುಕೊಳ್ಳಲು ಯೋಗ್ಯವಾಗಿಲ್ಲ.

ವಸಂತಸೇನೆ—ಆರ್ಯ, ಹಾಗಲ್ಲ. ನ್ಯಾಸವನ್ನಿಡುವುದು ಪುರುಷರನ್ನು ನೋಡಿಯೇ ಹೊರತು ಮನೆಗಳನ್ನು ನೋಡಿ ಅಲ್ಲ.

ಚಾರುದತ್ತ—ಮೈತ್ರೇಯ, ಆಭರಣವನ್ನು ತೆಗೆದುಕೊ.

ವಸಂತಸೇನೆ—ಅನುಗ್ರಹ ಮಾಡಿದಿರಿ. (ಆಭರಣವನ್ನು ಕೊಡುವಳು)

ವಿದೂಷಕ—(ತೆಗೆದುಕೊಂಡು) ಪೂಜ್ಯೆಗೆ ಮಂಗಳವಾಗಲಿ!

ಚಾರುದತ್ತ—ಅಯ್ಯೋ ಮೂರ್ಖ, ಇದು ದಾನವಲ್ಲ, ನ್ಯಾಸ ಮಾತ್ರ.

ವಿದೂಷಕ—(ಅಪವಾರಿತ) ಹಾಗಾದರೆ ಕಳ್ಳರೇ ಕೊಂಡು ಹೋಗಲಿ....

ಚಾರುದತ್ತ—ಬೇಗವೇ....

ವಿದೂಷಕ—...ಈಕೆ ನಮಗಿತ್ತಿರುವ ನ್ಯಾಸವನ್ನು.

ಚಾರುದತ್ತ—...ತಿರುಗಿ ಕಳುಹಿಸುತ್ತೇನೆ.

ವಸಂತಸೇನೆ—ಈತನ ಜತೆಯಲ್ಲಿ ಈಗ ನನ್ನ ಮನೆಗೆ ಹಿಂದಿರುಗುವುದೇ ನನ್ನ ಇಚ್ಛೆ.

ಚಾರುದತ್ತ—ಮೈತ್ರೇಯ, ಈಕೆಯ ಜತೆಯಲ್ಲಿ ಹೋಗು.

ವಿದೂಷಕ—ಈ ಕಲಹಂಸಗಾಮಿನಿಯ ಜತೆಯಲ್ಲಿ ರಾಜಹಂಸನಂತೆ ನೀನು ಹೋಗುವುದೇ ಶೋಭಿಸುತ್ತದೆ. ನಾನು ಬಡಬ್ರಾಹ್ಮಣ. ಹೋದರೆ —ದಾರಿಯಲ್ಲಿ ಹಾಕಿದ ಬಲಿಯನ್ನು ಕುನ್ನಿಗಳು ಮುತ್ತಿ ತಿನ್ನುವಂತೆ— ನನ್ನನ್ನೂ ಕಿತ್ತು ತಿಂದೇಬಿಡುವರು.

ಚಾರುದತ್ತ—ಹಾಗೆಯೇ ಆಗಲಿ. ನಾನೇ ನಿನ್ನೊಡನೆ ಬರುತ್ತೇನೆ. ರಾಜ ಮಾರ್ಗದಲ್ಲಿ ನಿರಾತಂಕವಾಗಿ ಹೋಗುವಂತೆ ದೀಪಗಳನ್ನು ಹೊತ್ತಿಸಿ ಕೊಡಿರಿ.

ವಿದೂಷಕ—ವರ್ಧಮಾನಕ, ದೀಪಗಳನ್ನು ಹೊತ್ತಿಸು.

ಚೇಟಿ—(ಜನಾಂತಿಕ) ಅಯ್ಯೋ, ಎಣ್ಣೆಯಿಲ್ಲದೆ ದೀಪಗಳು ಉರಿಯುವವೆ?

ವಿದೂಷಕ—(ಜನಾಂತಿಕ) ಆಶ್ಚರ್ಯವೇ ಸರಿ! ನಮ್ಮ ದೀಪಗಳೆಲ್ಲಾ

ನಿರ್ಧನ ಕಾಮುಕರನ್ನು ಮೂದಲಿಸುವ ಗಣಿಕೆಯರಂತೆ ನಿಃಸ್ನೇಹ ವಾಗಿವೆ. (ಎಣ್ಣೆಯಿಲ್ಲದಿವೆ ಮತ್ತು ಪ್ರೇಮವಿಲ್ಲದಿವೆ.)

ಚಾರುದತ್ತ—ಮೈತ್ರೇಯ, ಹೋಗಲಿ. ದೀಪಗಳು ಬೇಡ. ನೋಡು—

ಉದಿಸುವನಿದೊ ಚಂದ್ರಂ ಕಾಮಿನೀಗಂಡಶುಭ್ರಂ
ಗ್ರಹಗಣಪರಿವಾರಂ ರಾಜಮಾರ್ಗಪ್ರದೀಪಂ ;
ಬಿಳಿಯ ಕಿರಣಜಾಲಂ ಕಳ್ತಲೊಳ್ ಕೂಡುತೀಗಳ್
ಪೊಳೆವುವು ಹಸಿಮಣ್ಣೊಳ್ ಕ್ಷೀರಧಾರಾಸಮಾನಂ. ೫೭

(ಪ್ರೇಮದಿಂದ) ವಸಂತಸೇನೆ, ಇದೇ ನಿನ್ನ ಮನೆ. ಒಳಕ್ಕೆ ಹೋಗು.

ವಸಂತಸೇನೆ—(ಪ್ರೇಮದಿಂದ ನೋಡುತ್ತ ನಿಷ್ಕ್ರಮ)

ಚಾರುದತ್ತ—ಮಿತ್ರ, ವಸಂತಸೇನೆ ಹೋದಳು. ಬಾಪ್ಪಾ, ನಾವೂ ಮನೆಗೆ ಹೋಗೋಣ.

ಶೂನ್ಯವಾದುದು ರಾಜ್ಯಮಾರ್ಗವು
ರಕ್ಷಿಜನ ಸಂಚರಿಪರು ;
ತಡೆಯಬೇಕೈತರುವ ಮೋಸವ,
ದೋಷಮಯವೇ ರಜನಿಯು. ೫೮

(ನಡೆಯುತ್ತ) ನೋಡು, ಈ ಚಿನ್ನದ ಗಂಟನ್ನು ನೀನು ರಾತ್ರೆ ಕಾಯಬೇಕು, ವರ್ಧಮಾನಕನು ಹಗಲು ಕಾಯಬೇಕು.

ವಿದೂಷಕ—ನಿನ್ನ ಅಪ್ಪಣೆಯಂತೆಯೇ ಆಗಲಿ.

(ಎಲ್ಲರ ನಿಷ್ಕ್ರಮ)

ಇಲ್ಲಿಗೆ 'ಅಲಂಕಾರನ್ಯಾಸ' ಎಂಬ ಮೊದಲನೆಯ ಅಂಕ ಮುಗಿದುದು.

---

# ಎರಡನೆಯ ಅಂಕ

---

(ಪ್ರವೇಶ)

ಚೇಟಿ—ತಾಯಿಯ ಸಂದೇಶವನ್ನು ವಸಂತಸೇನೆಗೆ ತಿಳಿಸಬೇಕಾಗಿದೆ. ವಸಂತ ಸೇನೆಯನ್ನು ಹೋಗಿ ಕಾಣುತ್ತೇನೆ. (ನಡೆದು, ನೋಡಿ) ಇಲ್ಲಿಯೇ ಒಡತಿ ಹೃದಯಪೂರ್ವಕವಾಗಿ ಏನನ್ನೋ ಬರೆಯುತ್ತಾ ಇದ್ದಾಳೆ. ಹೋಗಿ ಕಾಣುತ್ತೇನೆ.

(ಪ್ರವೇಶ—ವಿರಹೋತ್ಕಂಠೆಯ ಮುಖಮುದ್ರೆಯಿಂದ ಆಸನದಲ್ಲಿ ಕುಳಿತ ವಸಂತಸೇನೆ ಮತ್ತು ಮದನಿಕೆ)

ವಸಂತಸೇನೆ—ಚೇಟಿ, ಆಮೇಲೇನಾಯಿತು?

ಮದನಿಕೆ—ಆರ್ಯೆ, ಏನನ್ನೂ ಇನ್ನೂ ಹೇಳಿಯೇ ಇಲ್ಲ. 'ಆಮೇಲೇನಾ ಯಿತು?' ಎಂದರೇನು?

ವಸಂತಸೇನೆ—ನಾನು ಏನೆಂದೆ?

ಮದನಿಕೆ—'ಆಮೇಲೇನಾಯಿತು?' ಎಂದು.

ವಸಂತಸೇನೆ—(ಹುಬ್ಬು ಹಾರಿಸಿ) ಓ, ಹೀಗೋ.

(ಮೊದಲನೆಯ ಚೇಟಿ ಸಮೀಪಿಸುವಳು.)

ಚೇಟಿ—ಆರ್ಯೆ, ತಾಯಿ ನಿನಗೆ ಹೇಳಿಕಳುಹಿಸಿದ್ದಾಳೆ—ಸ್ನಾನ ಮಾಡಿ ದೇವತಾರ್ಚನೆಯನ್ನು ಮುಗಿಸು, ಎಂದು.

ವಸಂತಸೇನೆ—ಚೇಟಿ, ತಾಯಿಗೆ ಹೋಗಿ ಹೇಳು—ಇಂದು ನಾನು ಸ್ನಾನ ಮಾಡುವುದಿಲ್ಲ. ಬ್ರಾಹ್ಮಣನೇ ಪೂಜೆ ಮಾಡಲಿ.

ಚೇಟಿ—ಆರ್ಯೆಯ ಅಪ್ಪಣೆ. (ನಿಷ್ಕ್ರಮ)

ಮದನಿಕೆ—ಆರ್ಯೆ, ಸ್ನೇಹಕ್ಕಾಗಿ ಕೇಳುತ್ತಿದ್ದೇನೆ, ತಪ್ಪು ಹುಡುಕುವುದ ಕ್ಕಾಗಿ ಅಲ್ಲ—ಇದೆಲ್ಲಾ ಏನು?

ವಸಂತಸೇನೆ—ಮದನಿಕೆ, ನಾನು ಹೇಗಿರುವಂತೆ ನಿನಗೆ ಕಾಣುತ್ತಿದೆ?

ಮದನಿಗೆ—ಆರ್ಯೆ ಶೂನ್ಯಹೃದಯಳಾಗಿರುವುದನ್ನು ನೋಡಿದರೆ ಮನ

ಸ್ವಿನಲ್ಲೇ ಯಾರನ್ನೋ ಕಾಮಿಸುತ್ತಿರಬೇಕೆಂದು ಕಾಣುತ್ತದೆ.

ವಸಂತಸೇನೆ—ನೀನು ಸರಿಯಾಗಿಯೇ ಊಹಿಸಿದೆ. ಪರೇಂಗಿತವನ್ನರಿಯು ವುದರಲ್ಲಿ ಪಂಡಿತೆಯಾದ ಮದನಿಕೆಯೇ ನೀನಲ್ಲವೆ!

ಮದನಿಕೆ—ಪ್ರಿಯವಾರ್ತೆ! ಎಂತಹ ಪ್ರಿಯವಾರ್ತೆ! ತರುಣ ಜನರಿಗೆಲ್ಲ ಮಹೋತ್ಸವಕಾರಣನಾದ ಭಗವಾನ್ ಮನ್ಮಥನನ್ನೇ ನೀನು ಅನು ಗ್ರಹಿಸಿದಂತಾಗಿದೆ. ನೀನು ಸೇವಿಸಲಿಚ್ಛಿಸುವುದು ರಾಜನನ್ನೋ ಅಥವಾ ರಾಜವಲ್ಲಭನನ್ನೋ ಎಂಬುದನ್ನೀಗ ಹೇಳು.

ವಸಂತಸೇನೆ—ಚೇಟಿ, ರಮಿಸುವುದು ನನ್ನ ಅಪೇಕ್ಷೆಯೇ ಹೊರತು ಯಾರನ್ನೂ ಸೇವಿಸುವುದಲ್ಲ.

ಮದನಿಕೆ—ಅತಿಶಯವಿದ್ಯಾಲಂಕೃತನಾದ ಬ್ರಾಹ್ಮಣ ತರುಣನನ್ನೇನಾದರೂ ಕಾಮಿಸಿರುವೆಯೇನು?

ವಸಂತಸೇನೆ—ಬ್ರಾಹ್ಮಣರು ನನಗೆ ಪೂಜ್ಯರು.

ಮದನಿಕೆ—ಅನೇಕ ನಗರಗಳಲ್ಲಿ ವ್ಯಾಪಾರ ಮಾಡಿ ಅತುಲೈಶ್ವರ್ಯವನ್ನು ಗಳಿಸಿರುವ ವೈಶ್ಯತರುಣನನ್ನು ಕಾಮಿಸುತ್ತಿರುವೆಯೋ ಹೇಗೆ?

ವಸಂತಸೇನೆ—ಚೇಟಿ, ಅನುರಾಗಮಯಿಯಾದ ಇನಿಯಳನ್ನೂ ಬಿಟ್ಟು ದೇಶಾಂತರದಲ್ಲಿ ಅಲೆಯುವ ವೈಶ್ಯ ಜನರು ಹೆಚ್ಚಿನ ವಿರಹದುಃಖ ವನ್ನು ತಂದಿಡುತ್ತಾರೆ.

ಮದನಿಕೆ—ಆರ್ಯೆ! ರಾಜನಲ್ಲ, ರಾಜವಲ್ಲಭನೂ ಅಲ್ಲ; ಬ್ರಾಹ್ಮಣನಲ್ಲ; ವೈಶ್ಯನೂ ಅಲ್ಲ. ಇನ್ನು ಆರ್ಯೆ ಕಾಮಿಸುವಾತನು ಯಾರಿರಬಹುದು?

ವಸಂತಸೇನೆ—ಸಖಿ, ನೀನೂ ನನ್ನೊಡನೆ ಕಾಮದೇವಾಯತನೋದ್ಯಾನಕ್ಕೆ ಬಂದಿರಲಿಲ್ಲವೆ?

ಮದನಿಕೆ—ಹೌದು. ಬಂದಿದ್ದೆ.

ವಸಂತಸೇನೆ—ಆದರೂ ಅರಿಯದವಳಂತೆ ನನ್ನನ್ನೇಕೆ ಕೇಳುತ್ತಿರುವೆ?

ಮದನಿಕೆ—ತಿಳಿಯಿತು. ಆರ್ಯೆ, ರಕ್ಷಣೆಯನ್ನು ಕೇಳಿದಾಗ ಇತ್ತ ಆತ ನೇಯೋ?

ವಸಂತಸೇನೆ—ಅವನ ಹೆಸರೇನು?

ಮದನಿಕೆ—ಅವನು ವಾಸಮಾಡುವುದು ಸೆಟ್ಟರ ಕೇರಿಯಲ್ಲಿ.

ವಸಂತಸೇನೆ—ನಾನು ಕೇಳಿದ್ದು ಅವನ ಹೆಸರನ್ನು.

ಮದನಿಕೆ—ಅವನ ಹೆಸರೂ ಸೊಗಸಾಗಿದೆ. ಆರ್ಯೆ, ಆರ್ಯ ಚಾರುದತ್ತ ಎಂಬುದಾಗಿ.

ವಸಂತಸೇನೆ—(ಆನಂದದಿಂದ) ಭಲೇ, ಮದನಿಕೆ, ಸರಿಯಾಗಿ ಊಹಿಸಿದೆ.

ಮದನಿಕೆ—(ಸ್ವಗತ) ಇದು ಹೀಗೊ! (ಪ್ರಕಾಶ) ಆರ್ಯೆ, ಅವನು ದರಿದ್ರನೆಂದು ವದಂತಿಯುಂಟಲ್ಲಾ!

ವಸಂತಸೇನೆ—ಆದ್ದರಿಂದಲೇ ಆತನನ್ನು ಕಾಮಿಸುತ್ತೇನೆ. ದರಿದ್ರಪುರುಷನಲ್ಲಿ ಅನುರಕ್ತೆಯಾದ ಗಣಿಕೆಯಲ್ಲಿ ಯಾರೂ ಕುಂದೆಣಿಸಲಾರರು.

ಮದನಿಕೆ—ಆರ್ಯೆ, ಹೂವೊಂದೂ ಇಲ್ಲದ ಮಾವಿನ ಮರವನ್ನು ಮಧುಕರಗಳು ಸೇವಿಸುವುದುಂಟೆ?

ವಸಂತಸೇನೆ—ಅದಕ್ಕೇ ಅವನ್ನು 'ಮಧುಕರ'ಗಳೆನ್ನುವುದು. (ಮಧುವನ್ನು ಅವು ಮಾಡಬಲ್ಲವೇ ಹೊರತು ತಿಂದು ಆನಂದಿಸಲಾರವು.)

ಮದನಿಕೆ—ಆರ್ಯೆ, ಅವನಲ್ಲಿ ಅನುರಾಗವಿದ್ದರೆ ನೀನೇ ಆತನನ್ನು ಹೋಗಿ ನೇರವಾಗಿ ಏಕೆ ಸೇರುವುದಿಲ್ಲ?

ವಸಂತಸೇನೆ—ಚೇಟಿ, ನೇರವಾಗಿ ನಾನೇ ಹೋದರೆ, ಪ್ರತ್ಯುಪಕಾರ ಮಾಡಲು ಶಕ್ತಿಯಿಲ್ಲದ ಅವನ ದರ್ಶನ ಮತ್ತೆ ದುರ್ಲಭವಾಗಿ ಬಿಡಬಹುದು.

ಮದನಿಕೆ—ಆದ್ದರಿಂದಲೇ ನೀನು ಅವನಲ್ಲಿ ಆಭರಣವನ್ನು ನ್ಯಾಸವಾಗಿಟ್ಟು ಬಂದೆಯೇನು?

ವಸಂತಸೇನೆ—ಸಖಿ, ನೀನು ಊಹಿಸಿರುವುದು ಸರಿಯಾಗಿದೆ.

(ನೇಪಥ್ಯದಲ್ಲಿ)

ಎಲೋ ಭಟ್ಟ, ಹತ್ತು ಹೊನ್ನಿಗೆ ಬಂಧಿಸಿದ್ದ ಜೂಜುಗಾರನು ಓಡಿಬಿಟ್ಟ, ಓಡಿಯೇ ಬಿಟ್ಟ. ಬೇಗ ಹಿಡಿ, ಹಿಡಿ. ಎಲೋ, ನಿಲ್ಲು ನಿಲ್ಲು. ದೂರದಿಂದಲೇ ಕಂಡಿದ್ದೇನೆ.

(ತೆರೆಯನ್ನು ಗಾಬರಿಯಿಂದ ಮೇಲೆತ್ತಿ ಪ್ರವೇಶ)

ಸಂವಾಹಕ—ಅಬ್ಬಾ! ಜೂಜುಗಾರನ ಜೀವನ ಎಷ್ಟು ಕಷ್ಟ!—

ಗರವಿದು 'ಗರ್ದಭಿ' ಯೊದೆದುದು
ಭರದಿಂ ನವಬಂಧಮುಕ್ತಗರ್ದಭಿಯೆನಿಸಲ್
ಮುರಿದುದು 'ಶಕ್ತಿ' ಘಟೋತ್ಕಚ
ನಿರವಂ ಮುರಿದಂತೆ ಶಕ್ತಿ ಕರ್ಣವಿಮುಕ್ತಂ ೧

ಬರೆಯುತಲಿರ್ದಾ ಸಭಿಕನ
ಮರೆಯಿಸಿ ಕಡುವೇಗದಿಂದೆ ತಪ್ಪಿಸಿಕೊಂಡೆಂ
ಪರಿಕಿಸಲೆನಗಂ ದಯೆಯಿಂ
ನೆರವೀಯುವರಾರೊ ಕಾಣೆ ನಡುಬೀದಿಯೊಳಂ ೨

ಆದ್ದರಿಂದ ಈ ಸಭಿಕ, ದ್ಯೂತಕರರು ಬೇರೆ ಕಡೆ ನನ್ನನ್ನು ಹುಡುಕುತ್ತಿರುವಾಗಲೇ ಹಿಂದು ಹಿಂದಾಗಿ ಹೆಜ್ಜೆ ಹಾಕುತ್ತಾ ಈ ಪಾಳು ಗುಡಿಯನ್ನು ಹೊಕ್ಕು ದೇವತೆಯಾಗಿಬಿಡುತ್ತೇನೆ. (ಅಭಿನಯಿಸಿ ಹಾಗೆ ಮಾಡುವನು).

(ಪ್ರವೇಶ—ಮಾಥುರ ಮತ್ತು ದ್ಯೂತಕರ)

ಮಾಥುರ—ಎಲೋ ಭಟ್ಟ, ಹತ್ತು ಹೊನ್ನಿಗೆ ಬಂಧಿಸಿದ್ದ ಜೂಜುಗಾರ ಓಡಿಬಿಟ್ಟ, ಓಡಿಯೇ ಬಿಟ್ಟ. ಬೇಗ ಹಿಡಿ, ಹಿಡಿ. ಎಲೋ, ನಿಲ್ಲು, ನಿಲ್ಲು. ದೂರದಿಂದಲೇ ಕಂಡಿದ್ದೇನೆ.

ದ್ಯೂತಕರ— ನಡೆ ನೀಂ ಪಾತಾಳಕ್ಕಂ
ಪಡೆ ಮೇಣ್ ನೀನಿಂದು ಸಗ್ಗದಾಣ್ಮನ ನೆರವಂ
ಬಿಡುತುಂ ಸಭಿಕನನೊರ್ವನ
ಗಡ ನೆಲೆಯಂ ರುದ್ರನಾಡೊಡಂ ತಾಂ ಪೊರೆಯಲ್ ೩

ಮಾಥುರ— ಎಲ್ಲಿಗೆಲ್ಲಿಗೆ ಓಡುತಿಹೆಯೋ ಕಣ್ಣ ತಪ್ಪಿಸಿ ಸಭಿಕನ,
ಭಯದೆ ಗಡಗಡ ನಡುಗುತೆ;
ಹೆಜ್ಜೆ ಹೆಜ್ಜೆಗೆ ಸಮವೊ ವಿಷಮವೊ ಎಡಹಿ ಬೀಳುತೆ ಕುಲವನು
ಮಸಿಯೊಳದ್ದಿಸಿ ಜಸವನು ? ೪

ದ್ಯೂತಕರ—(ಹೆಜ್ಜೆಯನ್ನು ಹಿಡಿದು ಬರುತ್ತ)ಇಲ್ಲೇ ಓಡಿಪ್ಪಾನೆ. ಇಲ್ಲಿ ಹೆಜ್ಜೆಯ ಗುರುತು ತಪ್ಪಿತು.

ಮಾಥುರ—(ನೋಡಿ ಊಹಿಸುತ್ತ) ಅರೇ, ಕಾಲುಗಳು ತಿರುಗುಮುರುಗಾಗಿವೆ. ಇದೋ ಪ್ರತಿಮೆಯೂ ಇಲ್ಲದ ಪಾಳುಗುಡಿ. (ಯೋಚಿಸಿ) ಧೂರ್ತನಾದ ಜೂಜುಕೋರನು ತಿರುಗುಮುರುಗಾದ ಹೆಜ್ಜೆಗಳಿಂದ ಈ ಪಾಳಗುಡಿಯನ್ನೇ ಹೊಕ್ಕಿರಬೇಕು.

ದ್ಯೂತಕರ—ಹಾಗಾದರೆ ಬೆನ್ನಟ್ಟೋಣ.

ಮಾಥುರ—ಅದೇ ಸರಿ.

(ಇಬ್ಬರೂ ಗುಡಿಯನ್ನು ಹೊಕ್ಕು ಪ್ರತಿಮೆಯುಂತಿರುವವನ್ನು ಗುರುತಿಸಿದ ಸಂಜ್ಞೆಯಿಂದ ಪರಸ್ಪರ ಮಾತಾಡುವರು)

ದ್ಯೂತಕರ—ಓ, ಇದೇನು ಮರದ ಪ್ರತಿಮೆಯೋ?

ಮಾಥುರ—ಅಲ್ಲ, ಅಲ್ಲ, ಕಲ್ಲಿನ ಪ್ರತಿಮೆ. (ಬಹು ಬಗೆಗಳಿಂದ ಅಲ್ಲಾಡಿಸುತ್ತಾನೆ; ಸಂಜ್ಞೆ ಮಾಡಿ) ಹಾಗೆಯೇ ಆಗಲಿ, ಬಾಪ್ಪಾ. ನಾವು ಜೂಜಾಡೋಣ. (ಬಗೆಬಗೆಯ ಆಟಗಳನ್ನು ಆಡುತ್ತಾರೆ.)

ಸಂವಾಹಕ—(ಜೂಜಿನಾಸೆಯನ್ನು ಬಲವಂತದಿಂದ ತಡೆದುಕೊಳ್ಳುತ್ತ, ಸ್ವಗತ) ಅಬ್ಬಾ—

ಗರಗಳ 'ಕಟಕಟ' ಶಬ್ದವೆ
ನರನೆದೆಯಂ ಸೆಳೆವುದಲ್ತೆ ನಿರ್ಧನನಿರಿಯುಂ
ವರಢಕ್ಕಾಶಬ್ದಂ ತಾಂ
ನರಪತಿಯಂ ಭ್ರಷ್ಟರಾಜ್ಯನಂ ಸೆಳೆಯುವವೋಲ್ ೫

ಅರಿವೆಂ ಸುಮೇರುಶಿಖರದೆ
ಪರಿಪತನಂ ಜೂಜಿವೆಂದು ತೊರೆವೆಂ ನಿರುತಂ
ಭರದಿಂದೆಂದೊಡಮೆಳೆವುದು
ಗರಗಳ 'ಕಟಕಟ್ಟ' ಸರಮೆ ಕೋಕಿಲ ಮಧುರಂ ೬

ದ್ಯೂತಕರ—ಈ ಗರ ನನ್ನದು, ನನ್ನದು.

ಮಾಥುರ—ಅಲ್ಲ. ನನ್ನದು, ನನ್ನದು.

ಸಂವಾಹಕ—(ತಟ್ಟನೆ ಬಂದು) ನಿಜವಾಗಿಯೂ ನನ್ನದೇ.

ದ್ಯೂತಕರ—ಮನುಷ್ಯ ಸಿಕ್ಕಿದ.

ಮಾಥುರ—(ಹಿಡಿದುಕೊಂಡು) ಅರೇ, ದುಷ್ಟನ್ನು ನುಂಗಿದವನೆ. ಸಿಕ್ಕಿ

ಬಿದ್ದಿರುವೆ. ಆ ಹತ್ತು ಹೊನ್ನನ್ನು ಕೊಟ್ಟು ಬಿಡು.
ಸಂವಾಹಕ—ಈ ದಿನ ಕೊಡುವೆನು.
ಮಾಥುರ—ಈ ಕ್ಷಣವೇ ಕೊಡು.
ಸಂವಾಹಕ—ಕೊಡುವೆನು. ಸ್ವಲ್ಪ ದಯೆದೋರಬೇಕು.
ಮಾಥುರ—ಅರೇ, ಈಗಲೇ ಕೊಡುವೆಯೋ ಇಲ್ಲವೋ?
ಸಂವಾಹಕ—ತಲೆ ಸುತ್ತುತ್ತದೆ. (ನೆಲದ ಮೇಲೆ ಬೀಳುವನು)
(ಇಬ್ಬರೂ ಬೇಕಾದಷ್ಟು ಹೊಡೆಯುವರು)
ಮಾಥುರ—ನೋಡು, ಜೂಜುಗಾರರ ಸಂಘದ ವತಿಯಿಂದ ನಿನ್ನನ್ನು ಬಂಧಿಸುತ್ತೇನೆ.
ಸಂವಾಹಕ—(ಎದ್ದು, ದುಃಖದಿಂದ) ಅಯ್ಯೋ, ಜೂಜುಗಾರರ ಸಂಘದಿಂದ ಬಂಧಿತನಾದೆನೇ? ಅಯ್ಯೋ, ನಮ್ಮ ಸಂಘದ ನಿಯಮವಂತೂ ಮೀರ ಲಸದಳವಾದುದು. ಈಗ ಎಲ್ಲಿಂದ ತಂದುಕೊಡಲಿ?
ಮಾಥುರ—ಮೊದಲು ಪ್ರಮಾಣಪೂರ್ವಕವಾಗಿ ಜಾಮೀನು ಕೊಡು....
ಸಂವಾಹಕ—ಆಗಲಿ. (ದ್ಯೂತಕರನ ಹತ್ತಿರ ಬಂದು) ಅರ್ಧವನ್ನು ನಿನಗೆ ಕೊಡುತ್ತೇನೆ. ಇನ್ನರ್ಧವನ್ನು ಬಿಟ್ಟುಬಿಡಬೇಕು.
ದ್ಯೂತಕರ—ಆಗಲಿ.
ಸಂವಾಹಕ—(ಸಭಿಕನ ಹತ್ತಿರ ಬಂದು) ಅರ್ಧಕೊಡುವುದಕ್ಕೆ ಪ್ರಮಾಣ ಮಾಡುತ್ತಿದ್ದೇನೆ. ಇನ್ನರ್ಧವನ್ನು ನೀನೂ ಬಿಟ್ಟುಬಿಡಬೇಕು.
ಮಾಥುರ—ತಪ್ಪೇನು? ಆಗಲಂತೆ.
ಸಂವಾಹಕ—(ಗಟ್ಟಿಯಾಗಿ) ಆರ್ಯ, ಅರ್ಧವನ್ನು ನೀನು ಬಿಟ್ಟಿರುವೆಯಷ್ಟೆ?
ಮಾಥುರ—ಹೌದು.
ಸಂವಾಹಕ—(ದ್ಯೂತಕರನನ್ನು ಕುರಿತು) ನೀನೂ ಅರ್ಧವನ್ನು ಬಿಟ್ಟಿರುವೆ ಯಷ್ಟೆ?
ದ್ಯೂತಕರ—ಹೌದು.
ಸಂವಾಹಕ—ಈಗ ನಾನು ಹೋಗುವೆನು.
ಮಾಥುರ—ಮೊದಲು ಹತ್ತು ಹೊನ್ನನ್ನು ಕೊಡು. ಎಲ್ಲಿಗೆ ಹೋಗುವೆ?
ಸಂವಾಹಕ—ಜನಗಳೆ, ನೀವೇ ನೋಡಿ, ನೋಡಿ. ಇದೇ ಈಗ ಒಂದರ್ಧಕ್ಕೆ

ಪ್ರಮಾಣ ಮಾಡಿಸಿಕೊಂಡು ಇನ್ನೊಂದರ್ಧವನ್ನು ಬಿಟ್ಟಿದ್ದಾಗಿದೆ. ಆದರೂ ಮತ್ತೆ ಈಗಲೇ ಎಲ್ಲವನ್ನೂ ಕೊಡಬೇಕೆಂದು ಬಡಪಾಯಿಯಾದ ನನ್ನನ್ನು ಪೀಡಿಸುತ್ತಾರೆ.

ಮಾಥುರ—(ಹಿಡಿದುಕೊಂಡು) ಧೂರ್ತ, ನಾನು ಮಾಥುರ; ಚಾತುರ್ಯವುಳ್ಳವನೇ. ನಾನೇನೂ ಮೋಸಕ್ಕೆ ಒಳಗಾಗುವುದಿಲ್ಲ. ದುಡ್ಡು ನುಂಗಿದವನೇ, ಈಗ ಎಲ್ಲ ಹೊನ್ನನ್ನೂ ಕೊಡು.

ಸಂವಾಹಕ—ಎಲ್ಲಿಂದ ಕೊಡಲಿ?

ಮಾಥುರ—ತಂದೆಯನ್ನು ಮಾರಿ ಕೊಡು.

ಸಂವಾಹಕ—ನನಗೆ ತಂದೆಯಲ್ಲಿ ಬರಬೇಕು?

ಮಾಥುರ—ತಾಯಿಯನ್ನು ಮಾರಿ ಕೊಡು.

ಸಂವಾಹಕ—ನನಗೆಲ್ಲಿಯ ತಾಯಿ?

ಮಾಥುರ—ಹಾಗಾದರೆ ನಿನ್ನನ್ನೇ ಮಾರಿಕೊಂಡು ಕೊಡು.

ಸಂವಾಹಕ—ಸ್ವಲ್ಪ ದಯೆ ತೋರಿಸಿರಿ. ನನ್ನನ್ನು ರಾಜಬೀದಿಗಾದರೂ ಕರೆದುಕೊಂಡು ಹೋಗಿ.

ಮಾಥುರ—ನಡೆ.

ಸಂವಾಹಕ—ಆಗಲಿ. (ನಡೆಯುತ್ತ)ಆರ್ಯರೆ, ಈ ಸಭಿಕನಿಗೆ ಯಾರಾದರೂ ಹತ್ತು ಹೊನ್ನನ್ನು ಕೊಟ್ಟು ನನ್ನನ್ನು ಕೊಳ್ಳಿರಿ. (ನೋಡಿ, ಆಕಾಶ ಭಾಷಣ) ಏನೆಂದಿರಿ—'ನೀನು ಮಾಡುವುದೇನು' ಎಂದೋ? ನಿಮ್ಮ ಮನೆಯಲ್ಲಿ ಆಳಾಗಿರುತ್ತೇನೆ. ಅಯ್ಯೋ, ಮರುಮಾತನ್ನೂ ಕೊಡದೆ ಹೊರಟೇ ಹೋದನೇ. ಇರಲಿ, ಇಲ್ಲಿ ಬರುತ್ತಿರುವ ಇನ್ನೊಬ್ಬನನ್ನು ಕೇಳೋಣ. (ಮತ್ತೆ ಹಾಗೆಯೇ ಕೇಳುವನು). ಅಯ್ಯೋ, ಇವನೂ ನನ್ನನ್ನು ಕಡೆಗಣಿಸಿಯೇ ಹೋಗಿಬಿಟ್ಟನೆ? ಅಯ್ಯೋ, ಚಾರುದತ್ತನ ಐಶ್ವರ್ಯ ತೊಲಗಿ ನನಗೆ ಈ ದುರದೃಷ್ಟ ಬಂತು.

ಮಾಥುರ—ಕೊಡುವೆಯೋ ಇಲ್ಲವೋ?

ಸಂವಾಹಕ—ಎಲ್ಲಿಂದ ಕೊಡಲಿ? (ಎನ್ನುತ್ತ ಕೆಳಗೆ ಬೀಳುವನು)

(ಮಾಥುರನು ಎಳೆಯುವನು)

ಸಂವಾಹಕ—ಆರ್ಯರೇ, ನನ್ನನ್ನು ಕಾಪಾಡಿ, ಕಾಪಾಡಿ.

(ಪ್ರವೇಶ—ದರ್ದುರಕ)

ದರ್ದುರಕ—ಜೂಜೆನ್ನುವುದು ಮನುಷ್ಯನಿಗೆ ಸಿಂಹಾಸನವಿಲ್ಲದ ರಾಜ್ಯವೇ ಸರಿ—

ಪರಿಭವಮುಂ ಲೆಕ್ಕಿಸದಪ
ಹರಿಸಿದ ಧನದಿಂದೆ ದಾನಗೈಯುತ್ತನಿಶಂ
ನರಪತಿವೋಲಾಯುಮೆನಲ್
ಸಿರಿವಂತರ ನಿತ್ಯಸೇವೆಯಂ ಕೈಕೊಳ್ವಂ ೭

ಮತ್ತು

ದ್ರವ್ಯವು ಬರುವುದು ಜೂಜಿಂದೆಂಬೆ
ಹೆಂಡತಿ ಗೆಳೆಯರು ಜೂಜಿಂದೆಂಬೆ ;
ಕೊಟ್ಟುದು ತಿಂದುದು ಜೂಜಿಂದೆಂಬೆ
ಕಳೆದದ್ದೆಲ್ಲವು ಜೂಜಿಂದೆಂಬೆ. ೮

ಮತ್ತು

ಗರ ಮೂರಿಂ ಗತವಿತ್ತಂ
ಗರವೆರಡಿಂದಂತೆ ಮತ್ತೆ ಶೋಷಿತದೇಹಂ
ಗರವೊಂದದು ಪಥದರ್ಶನ
ಕಿರಿ ನಡೆವೆಂ ನಾಲ್ಕರಿಂದೆ ವಿನಿಪಾತಿತನಾಂ ೯

(ಮುಂದೆ ನೋಡಿ) ನಮ್ಮ ಹಿಂದಿನ ಸಭಿಕನಾದ ಮಾಥುರ ಇತ್ತ ಕಡೆಯೇ ಬರುತ್ತಿರುವನು. ಬರಲಿ. ತಪ್ಪಿಸಿಕೊಳ್ಳುವುದಕ್ಕಂತೂ ಆಸ್ಪದವಿಲ್ಲ. ಆದ್ದರಿಂದ ಮುಖಕ್ಕೆ ಮುಸುಕನ್ನು ಹಾಕಿಕೊಳ್ಳುತ್ತೇನೆ. (ಅಭಿನಯಿಸುತ್ತ ನಿಲ್ಲುವನು ಉತ್ತರೀಯವನ್ನು ನೋಡಿ)

ಪಟಮಿದು ಸೂತ್ರದರಿದ್ರಂ
ಪಟಮಿದಲಂಕೃತಮನೇಕ ಛಿದ್ರಗಳಿಂದಂ
ಪಟಮಿದು ಹೊದೆಯಲ್ ಬಾರದು
ಪಟಮಿದು ಶೋಭಿಪುದು ಮತ್ತೆ ಮುಚ್ಚಿಟ್ಟಾಗಳ್ ೧೦

ಅಥವಾ ಈ ಬಡಪಾಯಿ ನಾನಿನ್ನು ಮಾಡುವುದೇನಿದೆ? ಈಗಲೇ—

ಕಾಲೊಂದಿರಲಾಗಸದೊಳ್
ಕಾಲಿನ್ನೊಂದಿರ್ಪುದಾಗೆ ಭೂತಳದೆಡೆಯೊಳ್
ಜೋಲುತ್ತಿರ್ಪೆಂ ನಿತ್ಯಂ
ಕಾಲಡಿ ಬರಿದಾಗೆ ಭಾಸ್ಕರಂ ಪೊಳೆವನ್ನಂ ೧೧

ಮಾಥುರ—ಕೊಡಿಸೋ, ಕೊಡಿಸು.

ಸಂವಾಹಕ—ಎಲ್ಲಿಂದ ಕೊಡಲಿ?

ಮಾಥುರ—(ಎಳೆದಾಡುವನು)

ದರ್ದುರಕ—ಓ, ಇಲ್ಲಿ ಮುಂದೆಯೇ ನಡೆಯುತ್ತಿರುವುದೇನು? ಏನೆಂದೆ—'ಈ ಜೂಜುಗಾರನನ್ನು ಸಭಿಕನು ಪೀಡಿಸುತ್ತಿದ್ದಾನೆ; ಬಿಡಿಸುವವರು ಯಾರೂ ಇಲ್ಲ' ಎಂದೆಯಾ? ಈ ದರ್ದುರನು ಬಂದು ಬಿಡಿಸುತ್ತಾನೆ. (ಸಮೀಪಿಸಿ) ದಾರಿ! ದಾರಿ! (ನೋಡಿ) ಅಯ್ಯೋ, ಇವನೇ ಧೂರ್ತ ಮಾಥುರ. ಇವನು ಬಡಪಾಯಿ ಸಂವಾಹಕ—

ತಲೆಯ ತಗ್ಗಿಸಿ ಸುಮ್ಮನಾವನು ದಿನದಿನವು ನೇತಾಡನೋ
ಹೊಡೆದ ಕಲ್ಲಿನ ಪೆಟ್ಟು ಕಲೆಯನು ಬೆನ್ನು ಯಾವನ ತೋರದೋ;
ಕುನ್ನಿ ದಿನದಿನವಾರ ಮೇಗಾಲ್ ರುಚಿಯನಗಿಯುತೆ ಸವಿಯವೋ
ಅಂಥ ಬಹುಕೋಮಲ ಶರೀರಗೆ ಜೂಜಿನಾಟವದೇತಕೋ? ೧೨

ಇರಲಿ. ಮೊದಲು ಮಾಥುರನನ್ನೇ ಸಮಾಧಾನ ಮಾಡುತ್ತೇನೆ. (ಹತ್ತಿರ ಬಂದು) ಮಾಥುರ, ನಮಸ್ಕಾರ.

ಮಾಥುರ—ನಮಸ್ಕಾರ.

ದರ್ದುರಕ—ಇದೇನು?

ಮಾಥುರ—ಇವನು ಹತ್ತು ಹೊನ್ನನ್ನು ತೀರಿಸಬೇಕು.

ದರ್ದುರಕ—ಇಷ್ಟೇ ತಾನೆ; ಇದೊಂದು ಬೆಳಗಿನ ಊಟಕ್ಕೆ ಸರಿಯಾಗುತ್ತದೆ.

ಮಾಥುರ—(ದರ್ದುರಕನ ಕಂಕುಳಲ್ಲಿರುವ ಬಟ್ಟೆಯನ್ನೆಳೆದು) ಜನರೇ, ನೀವೇ ನೋಡಿ. ಈ ಹರಕು ಚಿಂದಿಬಟ್ಟೆಯನ್ನು ಹೊದೆಯುವ ಈ ಮನುಷ್ಯ ಹತ್ತು ಹೊನ್ನನ್ನು ಬೆಳಗಿನೂಟವೆನ್ನುತ್ತಾನೆ.

ದರ್ದುರಕ—ಅಯ್ಯೋ ಮೂರ್ಖ, ನಿನ್ನ ಹತ್ತು ಹೊನ್ನನ್ನು ನಾನು ಜೂಜಿ

ನಲ್ಲಿಯೇ ಒಳ್ಳೆಯ ಗರ ಹಾಕಿಕೊಂಡು ತೀರಿಸುತ್ತೇನೆ. ದುಡ್ಡಿದ್ದವನು ಅದನ್ನು ಮುಡಿಲಲ್ಲೇ ಇಟ್ಟುಕೊಂಡು ಎಲ್ಲರಿಗೂ ಪ್ರದರ್ಶನ ಮಾಡುವನೇನು ? ಎಲಾ—

ಕುಲಗೆಟ್ಟ ಹಾಳಾದ ಹತ್ತು ಹೊನ್ನಿಗೆ ನೀನು
ಪಂಚೇಂದ್ರಿಯಂಗಳಿಹ ಪುರುಷಸೊರ್ವನನು
ಕೊಲ್ಲುತಿಹೆ ಪಾಪಿ, ಇನ್ನೇನು ? ೧೩

ಮಾಥುರ—ಪ್ರಭು, ನಿನಗೆ ಹತ್ತು ಹೊನ್ನು ಬೆಳಗಿನೂಟ, ನನಗೆ ಅದೇ ನಿಧಿ.

ದರ್ದುರಕ—ಹಾಗಾದರೆ ಇದನ್ನು ಕೇಳು. ಇವನಿಗೇ ಇನ್ನೂ ಹತ್ತು ಹೊನ್ನುಗಳನ್ನು ಕೊಡು. ಇವನು ಇನ್ನೊಮ್ಮೆ ಜೂಜಾಡಲಿ.

ಮಾಥುರ—ಅದರಿಂದಾಗುವುದೇನು ?

ದರ್ದುರಕ—ಗೆದ್ದರೆ ನಿನಗೆ ತೀರಿಸುತ್ತಾನೆ.

ಮಾಥುರ—ಗೆಲ್ಲದಿದ್ದರೆ !

ದರ್ದುರಕ—ತೀರಿಸುವುದೇ ಇಲ್ಲ !

ಮಾಥುರ—ನಿನ್ನೊಡನೆ ಮಾತನಾಡಿ ಉಪಯೋಗವಿಲ್ಲ. ಇಷ್ಟೆಲ್ಲ ಮಾತನಾಡುವ ನೀನೇ ಹೊನ್ನನ್ನು ಕೊಟ್ಟುಬಿಡು. ನಾನು, ಮಾಥುರ. ಎಂದಾದರೂ ವ್ಯರ್ಥವಾದ ಜೂಜಾಟ ಆಡುತ್ತೇನೆಯೆ ? ನನಗೆ ಯಾರ ಭಯವೂ ಇಲ್ಲ. ಎಲೋ ಧೂರ್ತ, ನೀನು ಮೋಸಗಾರ.

ದರ್ದುರಕ—ಏನೋ, ಯಾರು ಮೋಸಗಾರ ?

ಮಾಥುರ—ನೀನೇ ಮೋಸಗಾರ.

ದರ್ದುರಕ—ನಿಮ್ಮಪ್ಪ ಮೋಸಗಾರ ! (ಸಂವಾಹಕನಿಗೆ ಓಡಿಹೋಗಲು ಸನ್ನೆ ಮಾಡುವನು).

ಮಾಥುರ—ಸೂಳೆಯಮಗನೆ, ಹೀಗೇಯೋ ನೀನು ಜೂಜಾಡಿರುವುದು ?

ದರ್ದುರಕ—ಹೌದು, ಹೀಗೆಯೇ ನಾನು ಜೂಜಾಡಿರುವುದು.

ಮಾಥುರ—ಎಲೋ ಸಂವಾಹಕ, ಆ ಹತ್ತು ಹೊನ್ನನ್ನು ಮೊದಲು ಕೊಡು.

ಸಂವಾಹಕ—ಇವತ್ತೇ ಕೊಡುತ್ತೇನೆ. ಇನ್ನೇನು ಕೊಡುತ್ತೇನೆ.

(ಮಾಥುರನು ಎಳೆಯುವನು)

ದರ್ದುರಕ—ಮೂರ್ಖ, ನಾನು ಇಲ್ಲದಾಗ ನೀನು ಹಿಂಸೆ ಮಾಡಬಹುದು.

ನನ್ನ ಕಣ್ಣ ಮುಂದೆ ಹಿಂಸೆ ಮಾಡಲಾಗುವುದಿಲ್ಲ!
(ಮಾಥುರನು ಸಂವಾಹಕನನ್ನೆಳೆದು ಮೂಗಿನ ಮೇಲೆ ಮುಷ್ಟಿಯಿಂದ ಹೊಡೆಯುವನು. ಸಂವಾಹಕನು ನೆತ್ತರನ್ನು ಸುರಿಸುತ್ತ ಮೂರ್ಛಿತನಾಗಿ ಬೀಳುವನು. ದರ್ದುರಕನು ಇಬ್ಬರ ನಡುವೆ ಬರುವನು. ಮಾಥುರನು ದರ್ದುರಕನನ್ನೂ ಹೊಡೆಯುವನು. ಅವನಿಗೇ ತಿರುಗಿಸಿಕೊಂಡು ದರ್ದುರಕನೂ ಹೊಡೆಯುವನು.)

ಮಾಥುರ—ಅರೇ, ಅರೇ, ದುಷ್ಟ, ಬಸವಿಯಮಗನೆ, ನಿನಗೆ ಇದರ ಪರಿಣಾಮ ಬೇಗ ಸಿಕ್ಕುವುದು!

ದರ್ದುರಕ—ಎಲೋ ಮೂರ್ಖ, ನಾನು ನನ್ನಷ್ಟಕ್ಕೆ ದಾರಿಯಲ್ಲಿ ಹೋಗುತಿದ್ದವನನ್ನೇ ಹೊಡೆದಿರುವೆ. ನಾಳೆ ಅರಮನೆಯಲ್ಲಿ ಹೊಡೆದರೆ ಆಗ ನೋಡುವೆ.

ಮಾಥುರ—ಓಹೋ, ನೋಡಿಯೇ ನೋಡುತ್ತೇನೆ.

ದರ್ದುರಕ—ಹೇಗೆ ನೋಡುತ್ತೀಯೆ?

ಮಾಥುರ—(ಕಣ್ಣನ್ನು ಅಗಲಿಸಿ) ಹೀಗೆಯೇ ನೋಡುತ್ತೇನೆ.
(ದರ್ದುರಕನು ಮಾಥುರನ ಕಣ್ಣೊಳಗೆ ಮಣ್ಣೆರಚಿ ಸಂವಾಹಕನಿಗೆ ಓಡಲು ಸನ್ನೆ ಮಾಡುತ್ತಾನೆ. ಮಾಥುರನು ಕಣ್ಣುಗಳನ್ನು ಹಿಡಿದುಕೊಂಡು ನೆಲದ ಮೇಲೆ ಬೀಳುವನು. ಸಂವಾಹಕನು ಓಡಿಹೋಗುವನು)

ದರ್ದುರಕ—(ಸ್ವಗತ) ಪ್ರಧಾನಸಭಿಕನಾದ ಮಾಥುರನ ವೈರ ಗಂಟುಬಿತ್ತು. ಇನ್ನಿಲ್ಲಿರುವುದು ಸರಿಯಲ್ಲ. ನನ್ನ ಪ್ರಿಯಮಿತ್ರನಾದ ಶರ್ವಿಳಕ ಹೇಳುತ್ತಿದ್ದ—ಗೋಪಾಲನ ಮಗ ಆರ್ಯಕನೇ ಮುಂದೆ ಪಟ್ಟಕ್ಕೆ ಬರುವನೆಂದು ಸಿದ್ಧರು ಭವಿಷ್ಯ ನುಡಿದಿರುವರಂತೆ. ಆದ್ದರಿಂದ ನಮ್ಮಂತಹವರೆಲ್ಲ ಈಗ ಅವನ ಅನುಚರರೇ ಆಗಿದ್ದೇವೆ. ಈಗ ಅವನ ಹತ್ತಿರಕ್ಕೇ ಹೋಗುವೆನು. (ನಿಷ್ಕ್ರಮ)

ಸಂವಾಹಕ—(ಭಯದಿಂದ ಓಡುತ್ತ, ನೋಡಿ)ಇಲ್ಲಾವುದೋ ಒಂದು ಮನೆಯ ಪಕ್ಕದ ಬಾಗಿಲು ತೆಗೆದಿದೆ. ಒಳಕ್ಕೆ ಹೋಗಿಬಿಡುತ್ತೇನೆ. (ಪ್ರವೇಶಿಸಿ, ವಸಂತಸೇನೆಯನ್ನು ಕಂಡು) ಆರ್ಯೆ, ನಾನು ಶರಣಾಗತನಾಗಿದ್ದೇನೆ.

ವಸಂತಸೇನೆ—ಶರಣಾಗತನಿಗೆ ಅಭಯವಿತ್ತಿರುವೆ. ಚೇಟಿ, ಪಕ್ಕದ ಬಾಗಿ

ಲನ್ನು ಮುಚ್ಚು. (ಚೇಟಿ ಬಾಗಿಲನ್ನು ಮುಚ್ಚುವಳು)
ವಸಂತಸೇನೆ—ನಿನಗೆ ಭಯ ಯಾರಿಂದ?
ಸಂವಾಹಕ—ಆರ್ಯೆ, ಸಾಲಿಗನಿಂದ.
ವಸಂತಸೇನೆ—ಚೇಟಿ, ಈಗ ಪಕ್ಕದ ಬಾಗಿಲನ್ನು ತೆಗೆದುಬಿಡು.
ಸಂವಾಹಕ—(ಸ್ವಗತ) ಏನು ನನಗಿರುವ ಸಾಲಿಗನ ಭಯವನ್ನು ಈಕೆ ತುಚ್ಛೀಕರಿಸಿದಂತಿದೆ. ಅದಕ್ಕೆ ಹಿಂದಿನವರು ಹೇಳಿರುವುದು—

ಅರಿಯುತೆ ತನ್ನಯ ಪವಣಂ
ನರನುಯ್ಯಲ್ ಭಾರದೊದವನಾತಂಗೆಂದುಂ
ನೆರೆಯದು ಕಷ್ಟಂ ವನದೊಳ
ಗಿರೆಯುಂ ಪಮನಿಸದು ನಾಶಮಾತಂಗೆಂತುಂ ೧೪

ಇದಕ್ಕೆ ನಾನೇ ನಿದರ್ಶನ.
ಮಾಥುರ—(ಕಣ್ಣನ್ನು ತಿಕ್ಕುತ್ತ, ದ್ಯೂತಕರನನ್ನು ಕುರಿತು) ಎಲೋ ಕೊಡು, ಕೊಡು.
ದ್ಯೂತಕರ—ಪ್ರಭೋ, ನಾವು ದರ್ದುರಕನೊಡನೆ ಜಗಳವಾಡುತ್ತಿದ್ದಾಗಲೇ, ಆ ಮನುಷ್ಯನು ಓಡಿಬಿಟ್ಟನು.
ಮಾಥುರ—ನನ್ನ ಮುಷ್ಟಿಯ ಹೊಡೆತದಿಂದ ಅವನ ಮೂಗು ಒಡೆದಿದ್ದಿತು. ಬಾ, ರಕ್ತದ ಗುರುತನ್ನೇ ಅನುಸರಿಸೋಣ. (ಅನುಸರಿಸುತ್ತ)
ದ್ಯೂತಕರ—ಪ್ರಭೋ, ಅವನು ವಸಂತಸೇನೆಯ ಮನೆಯನ್ನು ಹೊಕ್ಕಿದ್ದಾನೆ.
ಮಾಥುರ—ಹಾಗಾದರೆ ನಮ್ಮ ಹೊನ್ನಿಗೆ ಭಯವಿಲ್ಲ.
ದ್ಯೂತಕರ—ಅರಮನೆಗೆ ಹೋಗಿ ತಿಳಿಸೋಣ.
ಮಾಥುರ—ಈ ಧೂರ್ತನು ಅಷ್ಟರಲ್ಲಿ ಬೇರೆ ಕಡೆ ಹೋಗಬಹುದು. ಆದ್ದರಿಂದ ಅವನನ್ನು ಮೊದಲು ಹಿಡಿದು ನಿಲ್ಲಿಸಿಕೊಳ್ಳಬೇಕು.
ವಸಂತಸೇನೆ—ನೀನು ಎಲ್ಲಿಂದ ಬಂದೆ? ನೀನು ಯಾರು? ನೀನು ಯಾರವನು? ನಿನ್ನ ಜೀವನದ ವೃತ್ತಿಯೇನು? ನಿನಗೆ ಭಯ ಎತ್ತಣದು?
ಸಂವಾಹಕ—ಆರ್ಯೆ, ಕೇಳು. ನನ್ನ ಜನ್ಮಭೂಮಿ ಪಾಟಲಿಪುತ್ರ. ನಾನು ಒಬ್ಬ ಗೃಹಸ್ಥನ ಮಗ. ಸಂವಾಹಕನ (ಮೈಕೈ ಒತ್ತುವ) ವೃತ್ತಿಯನ್ನು

ಮಾಡಿ ಜೀವಿಸುತ್ತೇನೆ.

ವಸಂತಸೇನೆ—ಒಳ್ಳೆಯ ಸುಕುಮಾರವಾದ ಕಲೆಯನ್ನೇ ನೀನು ಕಲಿತಿರುವೆ.

ಸಂವಾಹಕ—ನಾನು ಅದನ್ನು ಕಲೆಯೆಂದೇ ಕಲಿತುದು. ಆದರೆ ಅದೇ ಈಗ ಜೀವಿಕೆಯೂ ಆಗಿದೆ.

ಚೇಟಿ—ಆರ್ಯನ ಉತ್ತರದಲ್ಲಿ ವಿಷಾದ ತುಂಬಿದೆಯಲ್ಲಾ! ಆಮೇಲೆ?

ಸಂವಾಹಕ—ಮನೆಯಲ್ಲಿರುವಾಗ ಪ್ರವಾಸಿಕರ ಬಾಯಿಂದ ಇಲ್ಲಿಯ ವರ್ಣನೆಯನ್ನು ಕೇಳಿ, ಹೊಸ ಊರನ್ನು ನೋಡುವ ಕುತೂಹಲದಿಂದ ಇಲ್ಲಿಗೆ ಬಂದೆ. ಉಜ್ಜಯಿನಿಗೆ ಬಂದ ಮೇಲೆ ನಾನು ಸೇವೆ ಮಾಡಿದುದು ಒಬ್ಬನನ್ನೇ. ಅಹಾ, ಆತನು ಎಂಥವನು! ಸುಂದರಾಂಗ! ದಾನ ಮಾಡಿದ್ದನ್ನು ಬಾಯಿಂದ ಹೇಳುವವನಲ್ಲ; ಅಪಕಾರವನ್ನು ಮರೆತೇ ಬಿಡುವವನು! ಹೆಚ್ಚೇನು, ಅವನ ದಾಕ್ಷಿಣ್ಯ ಎಷ್ಟೆಂದರೆ ಪರೋಪಕಾರಕ್ಕಾಗಿ ತನ್ನನ್ನೇ ಮೀಸಲೆಂದು ಭಾವಿಸಿದ್ದಾನೆ. ಅವನು ಶರಣಾಗತ ವತ್ಸಲನೂ ಹೌದು.

ಚೇಟಿ—ಆರ್ಯೆಯ ಪ್ರಿಯತಮನ ಗುಣಗಳನ್ನೆಲ್ಲ ಕದ್ದು ಉಜ್ಜಯಿನಿಯನ್ನಲಂಕರಿಸುತ್ತಿರುವ ಈತನಾರಿರಬಹುದು?

ವಸಂತಸೇನೆ—ಭಲೆ, ಚೇಟಿ, ನನ್ನ ಮನಸ್ಸು ಯೋಚಿಸುತ್ತಿದ್ದುದನ್ನೇ ನೀನೂ ಆಡಿದೆ.

ಚೇಟಿ—ಆರ್ಯ, ಆಮೇಲೆ?

ಸಂವಾಹಕ—ಆರ್ಯೆ, ಅಪಾರ ಕರುಣೆಯಿಂದ ಅವನು ತುಂಬ ದಾನ ಮಾಡಿ . . .

ವಸಂತಸೇನೆ—ಬಡವನಾಗಿಬಿಟ್ಟಿರುವನೇನು?

ಸಂವಾಹಕ—ನಾನು ಹೇಳದೆಯೇ ಆರ್ಯೆಗೆ ಹೇಗೆ ತಿಳಿಯಿತು?

ವಸಂತಸೇನೆ—ಇಲ್ಲಿ ತಿಳಿಯಬೇಕಾದ್ದೇನಿದೆ? ಗುಣಗಳೂ ಸಿರಿಗಳೂ ಒಂದೆಡೆ ದುರ್ಲಭ. ಪಾನಕ್ಕೆ ಅಯೋಗ್ಯವಾದ ಕೆರೆಗಳು ಯಾವಾಗಲೂ ನೀರಿಂದ ತುಂಬಿರುತ್ತವೆ.

ಚೇಟಿ—ಆರ್ಯ, ಆತನ ಹೆಸರೇನು?

ಸಂವಾಹಕ—ಆ ಭೂಲೋಕದ ಚಂದ್ರನ ಹೆಸರನ್ನು ಅರಿಯದವರಾರು?

ಅವನು ಸೆಟ್ಟರ ಬೀದಿಯಲ್ಲಿ ವಾಸಮಾಡುತ್ತಾನೆ. ಹೆಸರು ಮನೋಹರವಾಗಿಯೇ ಇದೆ—'ಚಾರುದತ್ತ' ಎಂಬುದಾಗಿ.

ವಸಂತಸೇನೆ—(ಸಂತೋಷದಿಂದ ಆಸನದಿಂದಿಳಿದು) ಇದೋ, ಈ ಮನೆ ನಿನ್ನದೇ ಎಂದು ತಿಳಿಯಬಹುದು. ಚೇಟಿ, ಈತನಿಗೆ ಆಸನವನ್ನು ಕೊಡು. ಬೀಸಣಿಗೆಯನ್ನು ತಾ. ತುಂಬಾ ಆಯಾಸಪಟ್ಟಂತಿದ್ದಾನೆ.

(ಚೇಟಿ ಹಾಗೆಯೇ ಮಾಡುವಳು)

ಸಂವಾಹಕ—(ಸ್ವಗತ) ಇದೇನು! ಆರ್ಯ ಚಾರುದತ್ತನ ಹೆಸರನ್ನು ಉಚ್ಚರಿಸಿದ ಮಾತ್ರದಿಂದಲೇ ನನಗೆ ಎಷ್ಟು ಆದರ ದೊರೆಯುತ್ತಿದೆ! ಭಲೆ, ಚಾರುದತ್ತ! ಜಗತ್ತಿನಲ್ಲಿ ಬಾಳುವವನು ನೀನೊಬ್ಬನೇ. ಉಳಿದವರೆಲ್ಲ ಉಸಿರಾಡುವವರಷ್ಟೇ. (ವಸಂತಸೇನೆಯ ಕಾಲಿಗೆ ಬಿದ್ದು) ಆರ್ಯೆ, ನೀನು ಆಸನದಲ್ಲಿಯೇ ಕುಳ್ಳಿರಬೇಕು.

ವಸಂತಸೇನೆ—(ಆಸನದಲ್ಲಿ ಕುಳಿತು) ಆರ್ಯ, ನಿನ್ನ ಸಾಲಿಗನೆಲ್ಲಿ?

ಸಂವಾಹಕ—

ಪೂಜಾಧನನೇ ಸುಜನಂ
ಸೋಜಿಗಮೇನಾರಿಗಿರದು ಚಂಚಲಕನಕಂ
ಪೂಜಿಸಲರಿವನದಾವನೊ
ಪೂಜೆಯು ಪಡೆಯಲ್ಕೆ ತಿಳಿವನಾತನೆ ನಿರುತಂ ೧೫

ವಸಂತಸೇನೆ—ಆಮೇಲೆ?

ಸಂವಾಹಕ—ಆರ್ಯನು ನನಗೆ ವೃತ್ತಿಯನ್ನು ಕಲ್ಪಿಸಿ ಪರಿಚಾರಕನನ್ನಾಗಿ ಇಟ್ಟುಕೊಂಡನು. ಅವನ ಗುಣ ಮಾತ್ರ ಉಳಿದ ಗತಿಯೊದಗಿದಾಗ ನಾನು ಜೂಜಿನಿಂದ ಜೀವಿಸುವುದಕ್ಕೆ ಆರಂಭಿಸಿದೆ. ನನ್ನ ದುರದೃಷ್ಟದಿಂದ ಜೂಜಿನಲ್ಲಿ ಹತ್ತು ಹೊನ್ನು ಸೋತೆ.

ಮಾಥುರ—ಅಯ್ಯೋ, ಮುಳುಗಿಹೋದೆ; ಕಳೆದುಕೊಂಡೆ!

ಸಂವಾಹಕ—ಇದೋ ಆ ಸಭಿಕ, ದ್ಯೂತಕರಿಬ್ಬರೂ ನನ್ನನ್ನು ಹಿಂಬಾಲಿಸಿ ಬಂದಿದ್ದಾರೆ. ಎಲ್ಲವನ್ನೂ ಕೇಳಿರುವ ನೀನೇ ಇನ್ನು ಗತಿ.

ವಸಂತಸೇನೆ—ಮದನಿಕೆ, ವಾಸದ ಮರ ಬೀಳುತ್ತಿದ್ದರೆ ಹಕ್ಕಿಗಳು ಅತ್ತ ಇತ್ತ ಹಾರಾಡುತ್ತವೆ. ಈ ಸಭಿಕ ದ್ಯೂತಕರರಿಗೆ ಈ ಸಂವಾಹಕನೇ

ಕೊಟ್ಟಿರುವನೆಂದು ಹೇಳಿ ಈ ಕಡಗವನ್ನು ಕೊಡು. (ಕೈಯಿಂದ ಕಡಗವನ್ನು ಕಳಚಿ ಚೇಟಿಗೆ ಕೊಡುವಳು.)

ಚೇಟಿ—(ತೆಗೆದುಕೊಂಡು) ಒಡತಿಯ ಅಪ್ಪಣೆ. (ನಿಷ್ಕ್ರಮ.)

ಮಾಥುರ—ಮುಳುಗಿಹೋದೆ! ಕಳೆದುಕೊಂಡೆ!

ಚೇಟಿ—ಮೇಲೆ ನೋಡುತ್ತಾ, ನಿಟ್ಟುಸಿರುಬಿಡುತ್ತಾ, ಬಾಗಿಲಿಗೆ ಕಣ್ಣಿಟ್ಟು ನೋಡುತ್ತಾ ವಿಚಾರಮಾಡುತ್ತಿರುವ ಇವರೇ ಆ ಸಭಿಕ, ದ್ಯೂತಕರರಿರಬೇಕು. (ಹತ್ತಿರ ಬಂದು) ಆರ್ಯನಿಗೆ ನಮಸ್ಕಾರ.

ಮಾಥುರ—ನಿನಗೆ ಶುಭವಾಗಲಿ.

ಚೇಟಿ—ನಿಮ್ಮಲ್ಲಿ ಸಭಿಕ ಯಾರು?

ಮಾಥುರ—

ವರಸುಂದರಿ! ನಿನ್ನಧರಂ
ಸುರತಕ್ಷತಮಾಗಿ ತೋರೆ ನುಡಿಸುವೆ ಯಾರಂ
ಸುರುಚಿರವಚನದಿನೀಗಳ್
ಸುರಿಸುತೆ ಕಡೆಗಣ್ಣ ನೋರೆನೋಟದ ಸೊಬಗಂ ೧೬

ನನ್ನಲ್ಲಿ ಐಶ್ವರ್ಯವಿಲ್ಲ. ಬೇರೆಲ್ಲಾದರೂ ಹೋಗು.

ಚೇಟಿ—ಹೀಗೆಲ್ಲಾ ನೀನು ಹೇಳುವುದನ್ನು ನೋಡಿದರೆ ನೀನು ಜೂಜುಗಾರನೇ ಅಲ್ಲ. ನಿಮಗೆ ಯಾರಾದರೂ ಸಾಲಗಾರರುಂಟೋ?

ಮಾಥುರ—ಹೌದು. ಒಬ್ಬನು ಹತ್ತು ಹೊನ್ನನ್ನು ಕೊಡಬೇಕು. ಅವನ ವಿಚಾರವೇನು?

ಚೇಟಿ—ಅವನ ಪರವಾಗಿ ನನ್ನೊಡತಿ ಈ ಕಡಗವನ್ನು ನಿಮಗೆ ಕೊಟ್ಟಿದ್ದಾಳೆ. ಇಲ್ಲ, ಇಲ್ಲ. ಅವನೇ ನಿಮಗೆ ಕೊಟ್ಟಿದ್ದಾನೆ.

ಮಾಥುರ—(ಸಂತೋಷದಿಂದ ತೆಗೆದುಕೊಂಡು) ಆ ಕುಲಪುತ್ರನಿಗೆ ಹೇಳು—'ನಿನ್ನ ಬಾಕಿ ಸಂದಿತು. ಬಾಪ್ಪಾ, ಮತ್ತೆ ಜೇಕಾದಂತೆ ಜೂಜಾಡಿ ಸುಖಿಸು' ಎಂದು. (ಇಬ್ಬರೂ ನಿಷ್ಕ್ರಮಿಸುವರು)

ಚೇಟಿ—(ವಸಂತಸೇನೆಯ ಹತ್ತಿರ ಬಂದು) ಆರ್ಯೆ, ಸಭಿಕ, ದ್ಯೂತಕರರು ಸಂತೋಷದಿಂದ ಹೋದರು.

ವಸಂತಸೇನೆ—ಆರ್ಯನೂ ಇನ್ನು ಬಂಧುಗಳನ್ನು ಹೋಗಿ ಸಮಾಧಾನ

ಪಡಿಸಲಿ.

ಸಂವಾಹಕ—ಹಾಗಾದರೆ ನನ್ನದೊಂದು ಕೋರಿಕೆಯಿದೆ. ನನ್ನ ಕಲೆ ನಿನ್ನ ಸೇವೆಯುವರಲ್ಲಿಯೂ ಸಾರ್ಥಕವಾಗಬೇಕೆಂದು.

ವಸಂತಸೇನೆ—ಯಾರ ಸಲುವಾಗಿ ಈ ಕಲೆಯನ್ನು ನಮ್ಮವರು ಕಲಿಯಬೇಕೋ, ಆ ನೀನು ಮೊದಲು ಸೇವಿಸುತ್ತಿದ್ದ ಆರ್ಯನನ್ನೇ ಮತ್ತೆ ಸೇವಿಸಿದರಾಯಿತು.

ಸಂವಾಹಕ—(ಸ್ವಗತ) ಆರ್ಯೆ ಜಾಣ್ಮೆಯಿಂದಲೇ ನಿರಾಕರಿಸಿಬಿಟ್ಟಳು. ಇನ್ನು ಹೇಗೆ ಪ್ರತ್ಯುಪಕಾರ ಮಾಡಲಿ? (ಪ್ರಕಾಶ) ಆರ್ಯೆ, ದ್ಯೂತಕರನಿಂದಾದ ಈ ಅಪಮಾನವನ್ನು ನಾನು ಸಹಿಸಲಾರೆ; ಬೌದ್ಧ ಸಂನ್ಯಾಸಿಯಾಗಿ ಬಿಡುತ್ತೇನೆ. ಆರ್ಯೆಯ ನೆನಪಿನಲ್ಲಿರಲಿ—ಸಂವಾಹಕನು ಜೂಜುಗಾರನಾಗಿ ಕಡೆಗೆ ಬೌದ್ಧಸಂನ್ಯಾಸಿಯಾದನೆಂಬುದು.

ವಸಂತಸೇನೆ—ಆರ್ಯ, ಇಷ್ಟು ಸಾಹಸ ಬೇಡ.

ಸಂವಾಹಕ—ಆರ್ಯೆ, ಇದೇ ನನ್ನ ದೃಢವಾದ ನಿಶ್ಚಯ (ನಡೆದು)

ಎನಗೈಸಲೆ ಜೂಜಿತ್ತುದು
ಜನರೆಲ್ಲರ ಕೈಗೆ ಮೀರ್ದ ಪದವಿಯನದರಿಂ-
ದನುವಿಂ ವಿಹರಿಪೆನೀಗಳ್
ಜನಪತಿಪಥದಲ್ಲಿ ತಲೆಯನೆತ್ತುತೆ ನಲವಿಂ ೧೭

(ನೇಪಥ್ಯದಲ್ಲಿ ಕೋಲಾಹಲ)

ಸಂವಾಹಕ—(ಕೇಳಿ) ಅರೇ, ಇದೇನಿದು. (ಆಕಾಶದ ಕಡೆ) ಏನೆಂದಿರಿ—'ವಸಂತಸೇನೆಯ ತುಂಟ ಆನೆ, 'ಖುಂಟ ಮೋಡಕ' ತಪ್ಪಿಸಿಕೊಂಡು ನಡೆಯುತ್ತಿದೆ'ಯೆಂದಿರಾ? ಆಗಲಿ, ಆರ್ಯೆಯ ಮದ್ದಾನೆಯನ್ನು ನೋಡಿಕೊಂಡೇ ಹೋಗುವೆನು. ಅಥವಾ ನನಗಿನ್ನು ಇದೆಲ್ಲಾ ಏಕೆ? ನನ್ನ ನಿಶ್ಚಯದಂತೆ ನಡೆಯುತ್ತೇನೆ. (ನಿಷ್ಕ್ರಮ)

(ತೆರೆಯನ್ನು ಗಾಬರಿಯಿಂದ ಎತ್ತಿ, ವಿಕಟ ಹಾಗೂ ಉಜ್ಜ್ವಲ ವೇಷದ ಕರ್ಣಪೂರಕನ ಪ್ರವೇಶ)

ಕರ್ಣಪೂರಕ—ಎಲ್ಲಿ, ಎಲ್ಲಿ ಆರ್ಯೆ?

ಚೇಟಿ—ದುಷ್ಟ, ಎದುರಿಗೇ ನಿಂತಿದ್ದರೂ ಆರ್ಯೆಯನ್ನು ಕಾಣದೆ ಹೋಗುತ್ತಿರುವ ನಿನ್ನ ಗಾಬರಿಯ ಕಾರಣವಾದರೂ ಏನು?

ಕರ್ಣಪೂರಕ—ಆರ್ಯೆ, ನಮಸ್ಕಾರ.

ವಸಂತಸೇನೆ—ಕರ್ಣಪೂರಕ, ನಿನ್ನ ಮುಖ ಸಂತೋಷವನ್ನು ಸೂಚಿಸುತ್ತಿದೆ. ವಿಷಯವೇನು?

ಕರ್ಣಪೂರಕ—(ಗರ್ವದಿಂದ) ಆರ್ಯೆ, ಇಂದು ನೀನು ಕರ್ಣಪೂರಕನ ಪರಾಕ್ರಮವನ್ನು ಕಣ್ತುಂಬ ನೋಡದೆ ವಂಚಿತಳಾದೆ.

ವಸಂತಸೇನೆ—ಏನು, ಕರ್ಣಪೂರಕ, ಏನದು?

ಕರ್ಣಪೂರಕ—ಕೇಳು. ನಿನ್ನ ತುಂಟ ಆನೆಯಿಲ್ಲವೇ—ಖುಂಟ ಮೋಡಕ—ಅದು ಗೂಟದ ಕಂಬವನ್ನು ಕಿತ್ತುಹಾಕಿದ್ದೇ ಮಹಾಮಾತ್ರನನ್ನು ಸಿಗಿದುಹಾಕಿ, ಎಲ್ಲರನ್ನೂ ತಲ್ಲಣಗೊಳಿಸುತ್ತ ರಾಜಮಾರ್ಗದಲ್ಲಿ ಕಾಲಿಟ್ಟಿತು. ಈ ನಡುವೆ ಜನರೆಲ್ಲಾ ಕೂಗಿಕೊಳ್ಳುತ್ತಿದ್ದರು:—

'ಕರೆದುಯ್ಯಿರಿ ಬಾಲಕರಂ
ತರುಗಳ ಮೇಲ್ ಮನೆಯ ತುದಿಯನೇರಿರಿ ಬೇಗಂ
ಅರರೇ ಕಾಣುವುದಿಲ್ಲವೆ
ಬರುತಿರ್ಪುದು ದುಷ್ಟಹಸ್ತಿಯೇ ಕಟ್ಟದಿರೊಳ್' ೧೮

ಮತ್ತು

'ಎಡೆಬಿಟ್ಟುವು ಕಾಲ್ಬಳೆಗಳ್
ಪುಡಿಯಾದುವು ರತ್ನಖಚಿತ ಕಟಿಸೂತ್ರಂಗಳ್
ಒಡೆದುವು ರತ್ನಾಂಕುರದಾ
ಕಡುಚೆಲ್ವಿಂ ತೊಳಗಿ ಪೊಳೆವ ಮೆಚ್ಚಿನ ಬಳೆಗಳ್' ೧೯

ಆ ಮೇಲೆ ಆ ತುಂಟ ಆನೆ ನಳಿನಿಯಂತೆ ಪ್ರಫುಲ್ಲ ಪದ್ಮವನದಲ್ಲಿ ಹೇಗೋ ಹಾಗೆ ಉಜ್ಜಯಿನಿಯಲ್ಲಿ ಮುಳುಗಿ ಏಳುತ್ತಾ ಸಂನ್ಯಾಸಿಯೊಬ್ಬನನ್ನು ತನ್ನ ಸೊಂಡಿಲು, ಕಾಲು, ದಂತಗಳಿಂದ ಹಿಡಿದುಬಿಟ್ಟಿತು. ಆಗಲೇ ಭಯದಿಂದ ಅವನ ದಂಡ, ಕಮಂಡಲು, ಎಲ್ಲಾ ಬಿದ್ದು ಹೋಗಿದ್ದುವು. ಅವನ ಮೇಲೆ ತುಂತುರುನೀರನ್ನು ಸುರಿಸಿ ಇವನನ್ನು ದಂತಗಳ ನಡುವೆ ಎತ್ತಿಕೊಂಡುದನ್ನು ನೋಡಿ ಜನ

ಗಳೆಲ್ಲಾ—'ಅಯ್ಯೋ, ಸಂನ್ಯಾಸಿ ಸಾಯುವನಲ್ಲಾ' ಎಂದು ಕೂಗಿಕೊಂಡರು.

ವಸಂತಸೇನೆ—(ಗಾಬರಿಯಿಂದ) ಅಯ್ಯೋ, ಪ್ರಮಾದವಾಯಿತು, ಪ್ರಮಾದವಾಯಿತು.

ಕರ್ಣಪೂರಕ—ಗಾಬರಿ ಬೇಡ. ಆರ್ಯೆ, ಶಾಂತವಾಗಿ ಕೇಳು. ಆಗ ಸರಪಳಿ ಕಿತ್ತುಕೊಂಡು ಮೆರೆಯುತ್ತಿದ್ದ, ದಂತಗಳ ನಡುವೆ ಸಂನ್ಯಾಸಿಯನ್ನು ಎತ್ತಿಟ್ಟುಕೊಂಡಿದ್ದ, ಆ ಆನೆಯನ್ನು ನೋಡಿ ನಾನು ಕರ್ಣಪೂರಕ, —ಅಲ್ಲ, ಅಲ್ಲ, ಆರ್ಯೆಯ ಅನ್ನಪಿಂಡದಿಂದ ಬೆಳೆದ ಈ ದಾಸ—ವಕ್ರಗತಿಯಿಂದ ಧಾವಿಸುತ್ತಾ, ಆ ಜೂಜುಕೋರನಿಗೆ ಅಭಯವೀಯುತ್ತಾ, ಬೇಗನೆ ಪಕ್ಕದ ಅಂಗಡಿಯಲ್ಲಿದ್ದ ಕಬ್ಬಿಣದ ಹಾರೆಯನ್ನು ಹಿಡಿದುಕೊಂಡು ಮದ್ದಾನೆಯನ್ನು ಯುದ್ಧಕ್ಕೆ ಕರೆದನು.

ವಸಂತಸೇನೆ—ಆಮೇಲೆ!

ಕರ್ಣಪೂರಕ—

ಹೊಡೆಯುತೆ ಕೋಪನೊಳಾನೆಯ
ನಡಿಗಡಿಗಂ ವಿಂಧ್ಯಶೈಲಶಿಖರೋಪಮಮಂ
ಬಿಡಿಸಿದೆನಾ ಸಂನ್ಯಾಸಿಯ
ನೆಡೆಯಿಂದಂ ಗಜದ ನಿಶಿತದಂತಾಂತರದಾ ೨೦

ವಸಂತಸೇನೆ—ಒಳ್ಳೆಯ ಕೆಲಸ ಮಾಡಿದೆ. ಆಮೇಲೆ?

ಕರ್ಣಪೂರಕ—ಆರ್ಯೆ, ಆಗ ಭೇಷ್, ಭಲೆ, ಶಹಬಾಸ್, ಎನ್ನುತ್ತ—ಅತಿಭಾರದಿಂದ ತುಂಬಿದ ದೋಣಿಯಂತೆ ಉಜ್ಜಯಿನಿಗೆ ಉಜ್ಜಯಿನಿಯೇ ನನ್ನ ಪಕ್ಕಕ್ಕೆ ತಿರುಗಿತು. ಆಗ ಅವರಲ್ಲೊಬ್ಬ ಮಾತ್ರ ಮೈಮೇಲೆ ಒಡವೆಗಳಿರಬೇಕಾದ ಸ್ಥಳಗಳನ್ನು ಮುಟ್ಟಿ ನೋಡಿಕೊಳ್ಳುತ್ತ, ಮೇಲಕ್ಕೆ ನೋಡಿ ನಿಟ್ಟುಸಿರು ಬಿಟ್ಟು, ಈ ಉತ್ತರೀಯವನ್ನು ನನ್ನ ಮೇಲೆ ಎಸೆದನು.

ವಸಂತಸೇನೆ—ಕರ್ಣಪೂರಕ, ಆ ಉತ್ತರೀಯಕ್ಕೆ ಜಾಜಿ ಹೂವಿನ ಪರಿಮಳ ಕಟ್ಟಿದೆಯೋ ಇಲ್ಲವೋ ನೋಡಿ ಹೇಳು.

ಕರ್ಣಪೂರಕ—ಆನೆಯ ಮದಗಂಧದ ಪ್ರಭಾವದಿಂದ ಆ ಪರಿಮಳವನ್ನು

ನಾನು ಹೀಗೆಂದು ನಿರ್ಣಯಿಸಲಾರೆ.

ವಸಂತಸೇನೆ—ಹೆಸರೇನಾದರೂ ಉಂಟೋ ನೋಡು.

ಕರ್ಣಪೂರಕ—ಇದೋ ಹೆಸರಿದೆ. ಆರ್ಯೆಯೇ ಓದಬಹುದು. (ಉತ್ತರೀಯವನ್ನು ಕೊಡುವನು)

ವಸಂತಸೇನೆ—'ಆರ್ಯ ಚಾರುದತ್ತನದು' (ಎಂದು ಓದಿ ಪ್ರೇಮದಿಂದ ಅದನ್ನು ತಾನೇ ಹೊದೆದುಕೊಳ್ಳುವಳು.)

ಚೇಟಿ—ಕರ್ಣಪೂರಕ, ಆರ್ಯೆಗೆ ಈ ಉತ್ತರೀಯ ಒಪ್ಪುವುದೇನು?

ಕರ್ಣಪೂರಕ—ಹೌದು, ಬಹಳ ಚೆನ್ನಾಗಿ ಆರ್ಯೆಗೆ ಒಪ್ಪುತ್ತದೆ.

ವಸಂತಸೇನೆ—ಕರ್ಣಪೂರಕ, ನಿನ್ನ ಬಹುಮಾನವನ್ನು ಹಿಡಿ (ಎಂದು ಆಭರಣವನ್ನೀಯುವಳು).

ಕರ್ಣಪೂರಕ—(ತಲೆವಾಗಿ ನಮಸ್ಕರಿಸುತ್ತ ಸ್ವೀಕರಿಸಿ) ಈಗ ಉತ್ತರೀಯ ನಿಜವಾಗಿಯೂ ಆರ್ಯೆಗೆ ಬಹಳ ಸೊಗಸಾಗಿ ಒಪ್ಪುತ್ತದೆ.

ವಸಂತಸೇನೆ—ಕರ್ಣಪೂರಕ, ಈ ಸಮಯದಲ್ಲಿ ಆರ್ಯಚಾರುದತ್ತನು ಇರುವುದೆಲ್ಲಿ?

ಕರ್ಣಪೂರಕ—ಇದೇ ದಾರಿಯಿಂದ ಮನೆಗೆ ಹೊರಟಿದ್ದನು.

ವಸಂತಸೇನೆ—ಚೇಟಿ, ಮೇಲಿನ ಉಪ್ಪರಿಗೆಗೆ ಹೋಗಿ ಆರ್ಯ ಚಾರುದತ್ತನು ಕಾಣಿಸುವನೋ ನೋಡೋಣ.

(ನಿಷ್ಕ್ರಮ—ಎಲ್ಲರೂ)

ಇಲ್ಲಿಗೆ 'ದ್ಯೂತಕರ–ಸಂವಾಹಕ' ಎಂಬ
ಎರಡನೆಯ ಅಂಕ ಮುಗಿದುದು

---

# ಮೂರನೆಯ ಅಂಕ

---

(ಪ್ರವೇಶ ಚೇಟ)

ಚೇಟ— ಕರುಣಾನ್ವಿತನಿರೆ ಸುಜನಂ
ಪರಿಜನದೊಳ್ ಸ್ವಾಮಿ ಲೇಸವಂ ನಿರ್ಧನನುಂ
ಉರುಪಿಶುನಂ ಧನಗರ್ವಿತ
ನರಿವೈ ಪರಿಣಾಮುದಾರುಣಂ ಧಾರಿಣಿಯೊಳ್ ೧

ಮತ್ತು

ಹುಲ್ಲ ಮೆಲ್ಲುತಿರ್ಪ ಗೂಳಿಯನ್ನು ತಡೆವುದಾಗದು
ಪರರ ಪೆಂಡಿರಲ್ಲಿ ಸಕ್ತನನ್ನು ತಡೆವುದಾಗದು;
ಜೂಜಿನಲ್ಲಿ ನಿರತನಪ್ಪನನ್ನು ತಡೆವುದಾಗದು
ಹುಟ್ಟುಗುಣದ ದೋಷವನ್ನು ತಡೆವುದಾಗದು. ೨

ಆರ್ಯ ಚಾರುದತ್ತನು ಸಂಗೀತ ಕೇಳಲೆಂದು ಹೋಗಿ ಆಗಲೇ ಎಷ್ಟು ವೇಳೆಯಾಯಿತು! ಅರ್ಧರಾತ್ರಿ ಮೀರುತ್ತಾ ಬಂದಿದೆ. ಇನ್ನೂ ತಿರುಗಿಬಾರನು. ಹೊರಬಾಗಿಲಿನ ಅಂಗಳದಲ್ಲಾದರೂ ಹೋಗಿ ನಿದ್ದೆಯನ್ನು ಮಾಡುವೆನು. (ಹಾಗೆಯೇ ಮಾಡುವನು)

(ಪ್ರವೇಶ—ಚಾರುದತ್ತ ಮತ್ತು ವಿದೂಷಕ)

ಚಾರುದತ್ತ—ಅಹಾ, ರೇಭಿಲ ಎಷ್ಟು ಸೊಗಸಾಗಿ ಹಾಡಿದ! ವೀಣೆಯೆಂಬುದು ಸಮುದ್ರದಿಂದ ಹುಟ್ಟಿದ ಮತ್ತೊಂದು ರತ್ನವೇ! ಏಕೆಂದರೆ—

ಉತ್ಕಂಠಿತರ್ಗೆದೆಯ ಮೆಚ್ಚಿಸುವ ಸಖಿಯೆನಲು
ಪ್ರಿಯಜನವು ತಡಗೈಯಲಿದೆ ವಿನೋದ;
ವಿರಹತಪ್ತರ ಚಿತ್ತಶಾಂತಿಗುತ್ತಮವೆನಲು
ಕಾಮಿ ಕಾಮುವ ಮೀರಿಸಾ ಪ್ರಮೋದ. ೩

ವಿದೂಷಕ—ಅಯ್ಯಾ, ಬಾ. ಮನೆಗೆ ಹೋಗೋಣ.

ಚಾರುದತ್ತ—ಅಹಾ, ಭಾವ ರೇಭಿಲ ಹಾಡಿದ್ದು ಎಷ್ಟು ಚೆನ್ನಾಗಿತ್ತು!

ವಿದೂಷಕ—ನನಗೆ ಇಬ್ಬರಿಂದ ತುಂಬಾ ನಗೆ ಬರುತ್ತದೆ—ಸಂಸ್ಕೃತವನ್ನು ಆಡುವ ಹೆಂಗಸೊಬ್ಬಳು; ಎತ್ತರದ ದನಿಯಿಂದ ಹಾಡುವ ಗಂಡಸೊಬ್ಬನು. ಸಂಸ್ಕೃತವನ್ನು ಆಡುವ ಹೆಂಗಸು ಹೊಸದಾಗಿ ಮೂಗುದಾರ ಹಾಕಿದ ಕಡಸಿನಂತೆ 'ಸೂ' 'ಸೂ' ಎಂಬ ಶಬ್ದ ಮಾಡುತ್ತಿರುತ್ತಾಳೆ. ಎತ್ತರದ ದನಿಯಿಂದ ಹಾಡುವ ಗಂಡಸು ಬಾಡಿದ ಹೂಮಾಲೆಯನ್ನು ಹಾಕಿಕೊಂಡ ಮುದಿ ಪುರೋಹಿತನಂತೆ ಸ್ವಲ್ಪವೂ ನನಗೆ ಒಗ್ಗುವುದಿಲ್ಲ.

ಚಾರುದತ್ತ—ಮಿತ್ರ, ಇವತ್ತು ಭಾವ ರೇಭಿಲ ಹಾಡಿದ್ದು ಬಹಳ ಸೊಗಸಾಗಿತ್ತು. ಆದರೂ ನಿನಗೆ ಸಂತೋಷವಾಗಲಿಲ್ಲವಲ್ಲ!

ಅತಿಲಲಿತಂ ಸುಸಮಂ ಪರಿ
ಣತರಾಗಂ ಭಾವಬಂಧುರಂ ರಮಣೀಯಂ
ಸ್ತುತಿಯೇತಕೆ ಪಲವಂತ
ರ್ಹಿತೆಯಾಗಿಯೆ ವನಿತೆಯಿರ್ದಳೋ ಮೇಣೆಂಬಂ ೪

ಮತ್ತು

ಅಂತಪ್ಪಾ ಸ್ವರಸಂಕ್ರಮಂ ಮೃದುಗುಣಂ ಸುಶ್ಲಿಷ್ಟತಂತ್ರೀಸ್ವನಂ
ವರ್ಣಾಂತರ್ಗತಮೂರ್ಛನಾಂತರಮಿರಲ್ ತಾರಂ ವಿರಾಮಂ ಹಿತಂ
ಲೀಲಾಸಂಯಮಿತಂ ಬಳಿಕ್ಕೆ ಲಲಿತಂ ರಾಗದ್ವಿರುಚ್ಚಾರಿತಂ
ಸಂಗೀತಂ ಮುಗಿದಿರ್ಪೊಡಂ ನಿರುತಮಾಂ ಪೋಪೆಂ ಗಡಾ ಕೇಳ್ವನೊಲ್

ವಿದೂಷಕ—ಅಯ್ಯಾ, ಮಿತ್ರ, ಅಂಗಡಿಬೀದಿಯ ಮಗ್ಗುಲಲ್ಲಿ ಕುನ್ನಿಗಳೂ ಕೂಡ ಎಲ್ಲ ಸುಖವಾಗಿ ನಿದ್ದೆ ಮಾಡಿವೆ. ನಾವೂ ಮನೆಗೆ ಹೋಗೋಣ. (ಮುಂದೆ ನೋಡಿ) ಗೆಳೆಯ, ಇಲ್ಲಿ ನೋಡು. ಕಗ್ಗತ್ತಲಿಗೆ ಜಾಗ ಮಾಡಿಕೊಡಲೋ ಎಂಬಂತೆ ಅಂತರಿಕ್ಷದ ಉಪ್ಪರಿಗೆಯಿಂದ ಭಗವಾನ್ ಚಂದ್ರನೂ ಇಳಿಯುತ್ತಿದ್ದಾನೆ.

ಚಾರುದತ್ತ—ಹೌದು, ನೀನು ಹೇಳಿದ್ದು ಸರಿಯೆ—

ಈತ ಕತ್ತಲೆಗೆ ತಾಣಗೊಟ್ಟು ತಾನಸ್ತವೈದುತಿಹನು
ಚಂದ್ರನೊಂವೆಡೆಗೆ ಕೋಡು ನೀಡಿರಲು ಮೇಲೆ ಮೇಲಕಂತೆ;

ಕಾಡ ಮದ್ದಾನೆಯಾಡೆ ನೀರೊಳೀಡಾಡಿ ಮೈಯನೆಲ್ಲ
ನೀರ ಮೇಗಡೆಗೆ ನೀಡಿ ಕಂಗೊಳಿಪ ಮೊನೆಯ ಕೋಡಿನಂತೆ. ೫

ವಿದೂಷಕ—ಓ, ಇದೇ ನಮ್ಮ ಮನೆ. ವರ್ಧಮಾನಕ, ಏ ವರ್ಧಮಾನಕ, ಬಾಗಿಲು ತೆಗೆ.

ಚೇಟ—ಮೈತ್ರೇಯನ ದನಿ ಕೇಳಿಸುತ್ತಿದೆ. ಚಾರುದತ್ತ ಬಂದಿರಬೇಕು. ಮುಂಚೆ ಬಾಗಿಲನ್ನು ತೆಗೆದು ಬರುತ್ತೇನೆ. (ತೆಗೆದು) ಆರ್ಯನಿಗೆ ನಮಸ್ಕಾರ! ಮೈತ್ರೇಯ, ನಿನಗೂ ನಮಸ್ಕಾರ. ಇಲ್ಲಿ ಮಣೆ ಹಾಕಿದೆ; ಇಬ್ಬರೂ ಕುಳಿತುಕೊಳ್ಳಿ.

(ಇಬ್ಬರೂ ಪ್ರವೇಶಿಸಿ ಕುಳಿತುಕೊಳ್ಳುವರು)

ವಿದೂಷಕ—ವರ್ಧಮಾನಕ, ಕಾಲನ್ನು ತೊಳೆಯಲು ರದನಿಕೆಯನ್ನು ಕರೆ.

ಚಾರುದತ್ತ—(ಅನುಕಂಪೆಯಿಂದ) ನಿದ್ದೆ ಬಂದವರನ್ನು ಎಬ್ಬಿಸುವುದು ಬೇಡ.

ಚೇಟ—ಮೈತ್ರೇಯ, ನಾನು ನೀರನ್ನು ತರುತ್ತೇನೆ. ನೀನು ಕಾಲನ್ನು ತೊಳೆ.

ವಿದೂಷಕ—(ಕೋಪದಿಂದ) ಗೆಳೆಯ, ನೋಡು. ಈ ತೊತ್ತಿನ ಮಗ ನೀರನ್ನು ತರುತ್ತಾನಂತೆ; ಬ್ರಾಹ್ಮಣನಾದ ನನ್ನ ಕೈಯಿಂದ ಕಾಲನ್ನು ತೊಳೆಸುತ್ತಾನೆ.

ಚಾರುದತ್ತ—ಮಿತ್ರ, ಮೈತ್ರೇಯ, ನೀನೇ ನೀರನ್ನು ಹಿಡಿ. ವರ್ಧಮಾನಕನು ಕಾಲು ತೊಳೆಯಲಿ.

ಚೇಟ—ಮೈತ್ರೇಯ, ನೀರು ತಾ. (ವಿದೂಷಕನು ನೀರು ಕೊಡುವನು. ಚೇಟನು ಚಾರುದತ್ತನ ಕಾಲು ತೊಳೆಯುವನು.)

ಚಾರುದತ್ತ—ಬ್ರಾಹ್ಮಣನಿಗೂ ಪಾದೋದಕವನ್ನು ಕೊಡಪ್ಪಾ.

ವಿದೂಷಕ—ನನಗೇಕೆ ಪಾದೋದಕ? ಏಟು ತಿಂದ ಕತ್ತೆಯಂತೆ ಮತ್ತೆ ನಾನು ನೆಲದ ಮೇಲೆ ಹೇಗಿದ್ದರೂ ಹೊರಳುವವನು.

ಚೇಟ—ಆರ್ಯ, ಮೈತ್ರೇಯ, ನೀನು ಬ್ರಾಹ್ಮಣನಲ್ಲವೆ?

ವಿದೂಷಕ—ಹಾವುಗಳ ನಡುವೆ ಒಳ್ಳೆ ಹೇಗೋ ಹಾಗೆಯೇ ಬ್ರಾಹ್ಮಣರ ನಡುವೆ ನಾನೂ ಬ್ರಾಹ್ಮಣ.

ಚೇಟ—ಏನೇ ಆಗಲಿ, ನಿನ್ನ ಕಾಲನ್ನೂ ನಾನು ತೊಳೆಯುತ್ತೇನೆ. (ತೊಳೆದು) ಆರ್ಯ ಮೈತ್ರೇಯ, ಇದೋ ಈ ಹೊನ್ನಿನ ಗಂಟು ಹಗಲು ನನ್ನ

ಹೊಣೆ, ರಾತ್ರಿ ನಿನ್ನ ಹೊಣೆ. ಇಕೋ, ತೆಗೆದುಕೊ. (ಕೊಟ್ಟು ಹೋಗುವನು.)

ವಿದೂಷಕ—(ತೆಗೆದುಕೊಂಡು) ಇನ್ನೂ ಇದು ಇಲ್ಲೇ ಇದೆಯೊ! ಈ ಹಾಳು ನಿದ್ರಾಚೋರ ಬೊಡ್ಡಿಯಮಗನನ್ನು ಕದಿಯುವುದಕ್ಕೆ ಕಳ್ಳರೂ ಇಲ್ಲವೇ ಈ ಉಜ್ಜಯಿನೀಪಟ್ಟಣದಲ್ಲಿ? ವಯಸ್ಯ, ಒಳ ಅಂಗಳದಲ್ಲಿದನ್ನು ಸೇರಿಸಿ ಬರುತ್ತೇನೆ.

ಚಾರುದತ್ತ—

ಒಳಗಿನ ಅಂಗಳದಲ್ಲಿಡೆ ಸಲ್ಲದು
ವೇಶ್ಯೆಯು ಧರಿಸಿದ ಕಾರಣದೆ;
ವಿಪ್ರನೆ ನೀನೇ ಪಿಡಿಯಿದನಾಕೆಗೆ
ಒಪ್ಪಿಸಿ ಕೊಟ್ಟೈತರುವನಕ. ೭

(ನಿದ್ರೆ ಮಾಡುತ್ತ—ಮತ್ತೆ 'ಅಂತಪ್ಪಾ ಸ್ವರಸಂಕ್ರಮಂ....' ಎಂದು ಆಡುತ್ತಾನೆ.)

ವಿದೂಷಕ—ಏನು, ನಿನಗೆ ನಿದ್ದೆ ಬಂತೆ?

ಚಾರುದತ್ತ—ಹೌದು.

ಹಣೆಯಿಂದೆನ್ನಯ ಕಣ್ಗುರ-
ವಣಿಸುತ್ತುಂ ಬರ್ಪಳಲ್ತೆ ನಿದ್ರಾಂಗನೆ ತಾಂ
ಚಣಚಣಮದೃಶ್ಯಳಿಂವೊಡ-
ಮಣಮಾ ಜರೆಯಂತೆ ಸತ್ತ್ವಮಂ ಸೋಲಿಸುತುಂ ೮

ವಿದೂಷಕ—ಸರಿ, ನಿದ್ದೆ ಮಾಡೋಣ. (ನಿದ್ರಿಸುವನು)

(ಪ್ರವೇಶ—ಶರ್ವಿಲಕ)

ಶರ್ವಿಲಕ—

ಎನ್ನ ಕಾಯವೈಶಾಲ್ಯಕಿಂಬು ಸುಖವಾಗಿ ಮೊರೆಯುವಂತೆ
ಬಿಜ್ಜೆ ಬಲದಿಂದ ದೇಹಬಲದಿಂದಲಂತೆ ಕನ್ನ ಕೊರೆದು:
ಒಳಗೆ ನುಗ್ಗುವೆಡೆ ನೆಲವು ಕೆರೆದಿರಲು ಪಕ್ಕೆಗಳನು ಬಿಡವೆ
ಹಳೆಯ ಪನೆಯನ್ನು ಕಳಚಿ ಮುಂಬರಿವ ಸರ್ಪನಂತೆ ಸುಳಿವೆ. ೯

(ಆಕಾಶವನ್ನು ನೋಡಿ, ಹರ್ಷದಿಂದ) ಓ, ಭಗವಾನ್ ಶಶಾಂಕನು ಅಸ್ತವೈದುತ್ತಿರುವನು—

ನರಪತಿಪುರುಷರ ಭಯದಿಂ
ಪರಗೃಹದೂಷಣಕೆ ಸುಳಿವ ವೀರನನೆನ್ನಂ
ಗುರುತಿಮಿರಾವೃತಸಕಲಳ್
ಮರೆಯಿಸುತುಂ ರಜನಿ ಜನನಿಯಂದದೆ ಪೊರೆವಳ್ ೧೦

ಮರಗಳ ತೋಪಿನ ಸಮೀಪದಲ್ಲಿ ಹೊರಗೋಡೆಗೆ ಕನ್ನವನ್ನು ಹಾಕಿ ಈಗ ನಡುಮನೆಗೆ ಹೊಕ್ಕಿದ್ದೇನೆ. ಇನ್ನು ಒಳಅಂಗಳಕ್ಕೀಗ ನುಗ್ಗುತ್ತೇನೆ—

ಜನರು ಹೇಳಲಿ 'ನೀಚ'ನೆಂದಿದ, 'ನಿದ್ರೆಯಲ್ಲಿಯೆ ಬೆಳೆವುದು,
ನಂಬಿ ಮಲಗಿದ ಜನರ ವಂಚನೆ, ಚೌರ್ಯವಲ್ಲವು ಶೌರ್ಯವು;'
ಲೇಸು ಸೇವಾಂಜಲಿಗೆ ನಿಂದ್ಯತೆಯಾಂತೊಡಂ ಸ್ವಾತಂತ್ರ್ಯವು
ಮುನ್ನ ದ್ರೌಣಿಯೆ ಸುಪ್ತವಧೆಯೊಳು ತೋರಿದೀ ಸನ್ಮಾರ್ಗವು. ೧೧

ಈಗ ಯಾವ ಜಾಗದಲ್ಲಿ ಕನ್ನ ಹಾಕಲಿ ?—

ನೀರು ನೆನೆಯಿಸೆ ಶಿಥಿಲವಾವುದು ಶಬ್ದವಾಗದ ನೆಲವದು
ಗೋಡೆಗನ್ನವು ದೊಡ್ಡದಂತೆಯೆ ಕಣ್ಣ ತಪ್ಪಿಸಬೇಹುದು ;
ಉಪ್ಪು ಹಿಡಿದಿಟ್ಟಿಗೆಯು ತುಂಬಿದ ಜೀರ್ಣಪಾರ್ಶ್ವವದಾವುದು
ಎಲ್ಲಿ ಪೆಣ್ಗಳು ಕಾಣರೆಲ್ಲಿಯೆ ಹಣವು ನನಗೈತರ್ಪುದು. ೧೨

(ಗೋಡೆಯನ್ನು ಮುಟ್ಟಿ ನೋಡುತ್ತ) ನಿತ್ಯವೂ ಸೂರ್ಯೋಪಾಸನೆಯ ಅರ್ಘ್ಯವನ್ನು ಬಿಟ್ಟು ಈ ನೆಲ ಮೆತ್ತಗಿವೆ; ಉಪ್ಪುಮಣ್ಣೂ ಆಗಿದೆ. ಓ ಇಲ್ಲಿಯೇ ಇಲಿಯ ಬಿಲಗಳೂ ಇವೆ. ಸರಿ, ನನ್ನ ಕೆಲಸವಾದಂತೆಯೇ. ಸ್ಕಂದಪೂಜಕರಾದ ನಮಗೆ (ಕಳ್ಳರಿಗೆ) ಇದು ಸಿದ್ಧಿಯ ಮೊದಲನೆಯ ಸೂಚನೆ. ಈಗ ಇನ್ನು ಕರ್ಮವನ್ನಾರಂಭಿಸಬೇಕು. ಯಾವ ಜಾತಿಯ ಕನ್ನವನ್ನು ಕೊರೆಯಲಿ? ಶಾಸ್ತ್ರಕಾರನಾದ ಆಚಾರ್ಯ ಕನಕಶಕ್ತಿ ನಾಲ್ಕು ಬಗೆಯ ಕನ್ನಕೊರೆಯುವ ವಿಧಾನವನ್ನು ತೋರಿಸಿಕೊಟ್ಟಿರುವನು—ಸುಟ್ಟ ಇಟ್ಟಿಗೆಯಾದರೆ ಎಳೆದುಕೊಳ್ಳುವುದು; ಹಸಿ ಇಟ್ಟಿಗೆಯಾದರೆ ಕತ್ತರಿಸುವುದು; ಮುದ್ದೆ ಮಣ್ಣಾದರೆ ನೆನೆಸುವುದು; ಕಟ್ಟಿಗೆಯಾದರೆ ಸೀಳುವುದು. ಇಲ್ಲಿ ಸುಟ್ಟ ಇಟ್ಟಿಗೆಯಾದ್ದರಿಂದ ಎಳೆಯುವುದೇ ವಿಧಾನ. ಆದರಲ್ಲಿಯೂ—

'ಪದ್ಮಕೋಶ,' 'ಭಾಸ್ಕರ,'
'ಬಾಲಚಂದ್ರ,' 'ಪುಷ್ಕರ,'
ತವೆ 'ವಿಶಾಲ,' 'ಸ್ವಸ್ತಿಕ,'
'ಪೂರ್ಣಕುಂಭ' ನಾಮಕ—
ಆವುದಿವುಗಳಲ್ಲಣಂ
ಮದೀಯ ಶಿಲ್ಪಕನುಗುಣಂ—
ಆವುದನ್ನೆ ನೋಡುತುಂ
ನಾಳೆಯೆಲ್ಲ ಪೌರರು
ಬೆರಗುಗೊಂಡು ನುತಿಪರು ! ೧೩

ಈ ಸುಟ್ಟ ಇಟ್ಟಿಗೆಯ ಸ್ಥಳದಲ್ಲಿ 'ಪೂರ್ಣಕುಂಭ'ವೇ ಒಪ್ಪುತ್ತದೆ. ಅದನ್ನೇ ಈಗ ಕೊರೆಯುತ್ತೇನೆ—

ಉಪ್ಪಿಳಿದು ಬರಡಾದ ಬೇರೆ ಗೋಡೆಗಳಲ್ಲಿ
ನಾನಿರುಳು ಕೊರೆದಿರುವ ಕನ್ನಗಳನು ;
ಹಗಲೊಳಗೆ ನೋಡಿದಾ ನೆರೆಯುವರು ಕರ್ಮವನು
ಬೈವಂತೆ ಮೆಚ್ಚುವರು ಕೌಶಲವನು. ೧೪

ವರದಾಯಕನಾದ ಕುಮಾರ ಕಾರ್ತಿಕೇಯನಿಗೆ ನಮಸ್ಕಾರ! ಆ ಮೇಲೆ ಪರಮದೇವನೂ ಪರಮಾಚಾರ್ಯನೂ ಆದ ಕನಕಶಕ್ತಿಗೆ ನಮಸ್ಕಾರ! ಆಮೇಲೆ ನನ್ನ ಸಾಕ್ಷಾತ್ ಗುರುವಾದ ಯೋಗಾಚಾರ್ಯ ಭಾಸ್ಕರನಂದಿಗೆ ನಮಸ್ಕಾರ! ಅವನ ಮೊದಲ ಶಿಷ್ಯನೇ ನಾನು. ಪರಿತುಷ್ಟನಾದ ಆತನಿಂದಲೇ ನನಗೆ ಯೋಗಚೂರ್ಣ ಅನುಗ್ರಹಿಸಲ್ಪಟ್ಟಿದೆ.

ಅದನು ಲೇಪಿಸಲೆನ್ನನಾರೂ
ಕಾಣಲಾರರು ರಕ್ಷಿಗಳ್
ಶಸ್ತ್ರಘಾತದಿನಾವ ನೋವೂ
ಕಾಯಕಾಗದು, ರಕ್ಷೆ ದಲ್. ೧೫

(ಲೇಪಿಸಿಕೊಳ್ಳುವನು) ಅಯ್ಯೋ, ಒಳ್ಳೇ ಕಷ್ಟ ಬಂದಿತಲ್ಲಾ ! ನನ್ನ ಅಳತೆ ದಾರವನ್ನೇ ಮರೆತು ಬಂದಿದ್ದೇನೆ! (ಯೋಚಿಸಿ) ಓ, ಇರಲಿ. ಈ ನನ್ನ ಜನಿವಾರವೇ ಅಳತೆ ದಾರವಾಗಲಿ. ಜನಿವಾರ ಎನ್ನುವುದು

ಬ್ರಾಹ್ಮಣನಿಗೆ ಬಹಳ ದೊಡ್ಡ ಉಪಕಾರವಸ್ತು; ವಿಶೇಷತಃ ನನ್ನಂತಹವನಿಗೆ. ಏಕೆಂದರೆ—

ಇದರಿಂದಲಳೆಯುವನು ಕನ್ನದಳತೆಯನಂತೆ
ಇದರಿಂದ ಕಳಚುವನು ಭೂಷಣಗಳ;
ತಿರುಗಣೆಯು ತುಕ್ಕಿಡಿಯೆ ಬಾಗಿಲನು ತೆಗೆಯುವನು
ಹುಳುಹಾವು ಕಚ್ಚಿದರೆ ಇದೆ ವೇಷ್ಟನ. ೧೬

ಮೊದಲು ಅಳೆದುಕೊಂಡು ಕೆಲಸವನ್ನು ಆರಂಭಿಸುತ್ತೇನೆ. (ಹಾಗೆ ಮಾಡುತ್ತ ಸುತ್ತಲೂ ನೋಡಿ) ಇನ್ನೊಂದೇ ಇಟ್ಟಿಗೆ ಉಳಿದಿರುವುದು ಕನ್ನ ಮುಗಿಯುವುದಕ್ಕೆ! ಅಯ್ಯಯ್ಯೋ!! ಹಾವು ಕಚ್ಚಿಬಿಟ್ಟಿತಲ್ಲಾ! (ಜನಿವಾರದಿಂದ ಬೆರಳನ್ನು ಸುತ್ತಿಕೊಂಡು ವಿಷವೇಗವನ್ನು ಅಭಿನಯಿಸುತ್ತಾನೆ. ಚಿಕಿತ್ಸೆಮಾಡಿಕೊಂಡು) ಅಬ್ಬ, ಈಗೊಮ್ಮೆ ಸ್ವಸ್ಥನಾದೆ. (ಮತ್ತೆ ಕೆಲಸವನ್ನು ಮುಂದುವರಿಸಿ, ಕಂಡಿಯಿಂದ) ಓ, ದೀಪವುರಿಯುತ್ತಿದೆ—

ದೀಪದ ಕುಡಿಯಿದು ವರ ಹೇ
ಮೋಪಮಮೆನೆ ಸಂಧಿಯಿಂದೆ ಪೊರಮಟ್ಟೆಳೆಯೊಳ್
ತಾಂ ಪಿಹಿತಂ ತಮದಿಂ ನಿಕ
ಷೋಪಲದೊಳ್ ಸ್ವರ್ಣರೇಖೆಯೆಂದೆನೆ ಪೊಳೆಗುಂ ೧೭

(ಮತ್ತೆ ಕೆಲಸ ಮಾಡಿ) ಈ ಕನ್ನ ಮುಗಿಯಿತು, ಇರಲಿ. ಈಗ ಪ್ರವೇಶ ಮಾಡುತ್ತೇನೆ. ಅಥವಾ ಈಗಲೇ ಬೇಡ. ಮೊದಲು ಮನುಷ್ಯನ ಗೊಂಬೆಯನ್ನು ಒಳಗಿಳಿಸುತ್ತೇನೆ. (ಹಾಗೆ ಮಾಡಿ ನೋಡಿ) ಓ, ಯಾರೂ ಇಲ್ಲ. ಕಾರ್ತಿಕೇಯನಿಗೆ ನಮೋ ನಮಃ. (ಪ್ರವೇಶಿಸಿ, ನೋಡುತ್ತ) ಓ, ಇಬ್ಬರು ಗಂಡಸರು ಮಲಗಿದ್ದಾರೆ, ಇರಲಿ. ಆತ್ಮ ರಕ್ಷಣೆಗಾಗಿ ಬಾಗಿಲನ್ನು ಮುಂಚೆ ತೆರೆದಿರುತ್ತೇನೆ. ಓ, ಮನೆ ಹಳೆಯದಾದ್ದರಿಂದ ಬಾಗಿಲೂ ಕಿರುಗುಟ್ಟುತ್ತದೆಯಲ್ಲವೆ? ಇರಲಿ. ಸ್ವಲ್ಪ ನೀರನ್ನು ಹುಡುಕಿ ತರುತ್ತೇನೆ. ನೀರೆಲ್ಲಿ ಇದ್ದೀತು! (ಅಲ್ಲಿಂದಿಲ್ಲಿ ನೋಡುತ್ತ, ನೀರನ್ನು ಹುಡುಕಿ ತಂದು ಚಿಮುಕಿಸಿ, ಅಂಜುತ್ತ) ಈ ನೀರು ನೆಲಕ್ಕೆ ಬೀಳುವಾಗ ಸದ್ದಾಗಲಿಲ್ಲವೆಂದು ನಂಬುತ್ತೇನೆ. ಇರಲಿ. ಈಗ ಹೀಗೆ ಮಾಡುತ್ತೇನೆ. (ಹಿಂದಕ್ಕೆ ನೋಡುತ್ತಲೇ

ಬಾಗಿಲನ್ನು ತೆಗೆವು) ಆಯಿತು. ಎಲ್ಲ ಸರಿಯಾಗಿದೆ. ಈಗ ಈ ಜನರಿಬ್ಬರೂ ನಿದ್ರೆಯ ನಟನೆ ಮಾಡುತ್ತಿದ್ದಾರೋ ನಿಜವಾಗಿಯೋ ನಿದ್ರೆ ಮಾಡುತ್ತಿದ್ದಾರೋ ನೋಡುತ್ತೇನೆ. (ಅಂಜಿಸಿ, ಪರೀಕ್ಷಿಸಿ) ನಿಜವಾಗಿಯೇ ನಿದ್ರೆ ಮಾಡಿರಬೇಕು.

ನಿಃಶ್ವಾಸಂ ದಲಶಂಕಿತಂ ಸುವಿಶದಂ ಸಾಮ್ಯಾಂತರಾಲಂ ಸಮಂ
ನೇತ್ರಂ ಗಾಢನಿಮೀಲಿತಂ ವಿಕಲಮುಲ್ಲಾಭ್ಯಂತರ ಪ್ರೋಜ್ವಲಂ
ಗಾತ್ರಂ ಪ್ರಸ್ತಶರೀರಸಂಧಿಶಿಥಿಲಂ ಶಯ್ಯಾಪ್ರಮಾಣಾಧಿಕಂ
ದೀಪಂ ಕುಕ್ಕದೆಯಿರ್ಪುದೆಂತಭಿಮುಖಂ ಮಿಥ್ಯಾಪ್ರಸುಪ್ತಾತ್ಮನಂ ೧೮

(ಸುತ್ತ ನೋಡಿ) ಇದೇನು? ಓ ಮೃದಂಗ; ಇದು ತಾಳ. ಇದು ಪಣವವಾದ್ಯ, ಇದು ವೀಣೆ, ಇವು ಬಿದಿರಿನ ಕೊಳಲುಗಳು. ಇವು ಪುಸ್ತಕಗಳು. ಇದೇನೋ ನಾಟ್ಯಾಚಾರ್ಯನ ಮನೆಯಂತೆ ಇದೆಯಲ್ಲಾ! ಇವನೇನು ನಿಜವಾಗಿಯೂ ದರಿದ್ರನೋ ಅಥವಾ ರಾಜಭಯ ಇಲ್ಲವೆ ಚೋರಭಯದಿಂದ ಹಣವನ್ನು ಭೂಮಿಯಲ್ಲಿ ಹೂಳಿಟ್ಟಿರುವನೋ? ಅಹಹ, ನನಗೆ, ಶರ್ವಿಳಕನಿಗೆ ಅರಿಯದಂತೆ ಹೂಳಿಟ್ಟ ಧನವಿರಲು ಸಾಧ್ಯವೆ? ಇರಲಿ. ಈ ಬೀಜವನ್ನು ಚೆಲ್ಲುತ್ತೇನೆ. (ಚೆಲ್ಲಿ) ಚೆಲ್ಲಿದ ಬೀಜ ಎಲ್ಲಿಯೂ ಮೊಳಕೆಯಾಗಲಿಲ್ಲ ಎಂದ ಮೇಲೆ ಇವನು ನಿಜವಾಗಿಯೂ ದರಿದ್ರನೇ ಸರಿ. ಇರಲಿ, ಹೋಗುತ್ತೇನೆ.

ವಿದೂಷಕ—(ಕನವರಿಸುವನು) ಅಯ್ಯಾ ಮಿತ್ರ, ಕನ್ನದಂತೆ ಕಾಣುತ್ತದೆ. ಕಳ್ಳನನ್ನು ನೋಡುತ್ತಿರುವೆನೋ ಎಂಬಂತಿದೆ. ಆದ್ದರಿಂದ ಈ ಹೊನ್ನಿನ ಗಂಟನ್ನು ನೀನೇ ತೆಗೆದುಕೊಳ್ಳಪ್ಪಾ.

ಶರ್ವಿಲಕ—ನಾನು ಹೊಕ್ಕುದನ್ನರಿತ ಇವನು ತಾನಂಥ ದರಿದ್ರನೆಂದು ನನ್ನನ್ನೇ ಅಪಹಾಸ್ಯ ಮಾಡುತ್ತಿಲ್ಲವಷ್ಟೆ? ಒಂದೇ ಏಟಿಗೆ ಕೊಂದು ಬಿಡಲೋ ಅಥವಾ ಇದು ಇವನ ಚಾಪಲ್ಯದ ಕನಸು ಮಾತವೋ? (ನೋಡಿ) ಎಲಾ, ಜೂಲಾದ ಸ್ನಾನ ಚೌಕದಲ್ಲಿ ಕಟ್ಟಿರುವ ಈ ಗಂಟು ದೀಪದ ಬೆಳಕಿನಲ್ಲಿ ಮಿನುಗುತ್ತಿರುವುದರಿಂದ ಹೊನ್ನಿನ ಒಡವೆಯವೇ ಸರಿ, ಇರಲಿ, ತೆಗೆದುಕೊಳ್ಳುತ್ತೇನೆ. ಅಥವಾ ನನ್ನಂತೆಯೇ ಬಡತನದಲ್ಲಿರುವ ಗೃಹಸ್ಥನನ್ನು ಪೀಡಿಸುವುದು ಯುಕ್ತವಲ್ಲ.

ಸುಮ್ಮನೇ ಹೊರಟುಹೋಗುತ್ತೇನೆ.

ವಿದೂಷಕ—ಅಯ್ಯಾ ಮಿತ್ರ, ನೀನು ಈ ಹೊನ್ನಿನ ಗಂಟನ್ನು ತೆಗೆದುಕೊಳ್ಳದಿದ್ದರೆ ಗೋಬ್ರಾಹ್ಮಣರ ಆಣೆ ನೋಡು.

ಶರ್ವಿಲಕ—ಗೋವಿನ ಆಣೆಯೂ, ಬ್ರಾಹ್ಮಣರ ಮೇಲಿನ ಆಣೆಯೂ ಅನುಲ್ಲಂಘನೀಯವೇ ಸರಿ. ದೀಪ ಜೋರ ಉರಿಯುತ್ತಿದೆ! ದೀಪವನ್ನಾರಿಸುವುದಕ್ಕೆ ನನ್ನ ಬಳಿ ಜೆಂಕಿಹುಳು ಉಂಟು. ಅದನ್ನು ಬಿಡುತ್ತೇನೆ. ಬಿಡುವುದಕ್ಕೆ ಇದೇ ಸಮಯ. ಇದೋ, ಬಿಟ್ಟೊಡನೆಯೇ ಹುಳು ದೀಪದ ಮೇಲೆ ಹೋಗಿ ಮತ್ತೆ ಮತ್ತೆ ಸುತ್ತುತ್ತಿದೆ. ಓ, ಪುಕ್ಕಗಳ ಗಾಳಿಯಿಂದ ದೀಪವನ್ನು ನಂದಿಸಿಯೇ ಬಿಟ್ಟಿತು—ನನ್ನ ಹುಳು. ಕಗ್ಗತ್ತಲೆಯನ್ನು ಕವಿಸಿತು. ಅಲ್ಲ, ಅಲ್ಲ. ಈ ಬ್ರಾಹ್ಮಣನ ಮನೆಯಲ್ಲಿ ಕಗ್ಗತ್ತಲೆಯನ್ನು ಕವಿಸುತ್ತಿರುವವನು ಬ್ರಾಹ್ಮಣನಾದ ನಾನೇ. ಅಯ್ಯೋ! ಚತುರ್ವೇದಪಾರಂಗತನೂ ದಾನಸ್ವೀಕಾರ ಮಾಡದವನೂ ಆದ ಮಹಾಶ್ರೋತ್ರಿಯನ ಮಗನೇ ಈ ಶರ್ವಿಲಕ! ಬ್ರಾಹ್ಮಣನಾಗಿಯೂ ನಾನು ಸೂಳೆಯಾದ ಮದನಿಕೆಯ ಸಲುವಾಗಿ ಈಗ ಅಕಾರ್ಯಮಾಡುತ್ತಿದ್ದೇನೆ. ಇರಲಿ. ಈಗ ಈ ಬ್ರಾಹ್ಮಣನ ಪ್ರೀತಿಯನ್ನು ಸ್ವೀಕರಿಸುತ್ತೇನೆ (ಹಣದ ಗಂಟಿಗಾಗಿ ಕೈ ನೀಡುವನು).

ವಿದೂಷಕ—ಅಯ್ಯಾ ಮಿತ್ರ, ನಿನ್ನ ತುದಿಗೈ ತಣ್ಣಗಿದೆಯಲ್ಲಾ !

ಶರ್ವಿಲಕ—ಅಯ್ಯೋ ತಪ್ಪಾಯಿತು. ನೀರು ಸೋಕಿದ್ದರಿಂದ ನನ್ನ ತುದಿಗೈ ತಣ್ಣಗಾಗಿದೆ. ಇರಲಿ. ಕಂಕುಳಲ್ಲಿ ಕೈಯನ್ನಿಟ್ಟು ಬೆಚ್ಚಗೆ ಮಾಡಿಕೊಳ್ಳುವೆನು. (ಎಡಗೈಯನ್ನು ಬಿಸಿಮಾಡಿಕೊಂಡು ಗಂಟನ್ನು ತೆಗೆದುಕೊಳ್ಳುವನು)

ವಿದೂಷಕ—ತೆಗೆದುಕೊಂಡೆಯಾ ?

ಶರ್ವಿಲಕ—ಬ್ರಾಹ್ಮಣನ ವಿಶ್ವಾಸವನ್ನು ಮೀರುವಂತಿಲ್ಲ. ಆದ್ದರಿಂದ ತೆಗೆದುಕೊಂಡಿದ್ದೇನೆ.

ವಿದೂಷಕ—ಈಗ ಸಾಮಾನೆಲ್ಲವನ್ನೂ ಮಾರಿದ ವರ್ತಕನಂತೆ ಸುಖವಾಗಿನ್ನು ನಿದ್ರೆ ಮಾಡುತ್ತೇನೆ.

ಶರ್ವಿಲಕ—ಮಹಾ ಬ್ರಾಹ್ಮಣ, ನೂರು ವರ್ಷ ನಿದ್ದೆ ಮಾಡು.(ಸ್ವಗತ)

ಅಯ್ಯೋ ಕಷ್ಟ! ಸೂಳೆ ಮದನಿಕೆಯ ಸಲುವಾಗಿ ಈ ಬ್ರಾಹ್ಮಣನ ಮನೆ ಕತ್ತಲಲ್ಲಿ ಪತಿತವಾದಂತಾಯಿತು; ಇಲ್ಲ, ನಾನೇ ಪತಿತನಾಗುವಂತಾಯಿತು—

ಸುಡು ಚೀ ಬಡತನವೆಂಬುದ-
ನೊಡರಿಪುದದೆಯುಳ್ಳೆ ಕಜ್ಜಮಂ ನಿರ್ಲಜ್ಜಂ
ನುಡಿವೆಂ ಕಡುನೀಚಮಿದೆಂ-
ದೊಡನೆಂಯೆ ಗೈಯಳ್ಕೆ ನಾನೆ ಬಗೆದಂದಿರ್ಪೆಂ ೧೯

ಈಗಿನ್ನು ಮದನಿಕೆಯನ್ನು ಬಿಡಿಸಿಕೊಂಡು ಬರಲು ವಸಂತಸೇನೆಯ ಮನೆಗೆ ಹೋಗುತ್ತೇನೆ. (ನಡೆಯುತ್ತ ನೋಡಿ) ಏನು, ಹೆಜ್ಜೆಯ ಸದ್ದಿನಂತಿದೆ! ರಕ್ಷಿಗಳಲ್ಲವಷ್ಟೆ! ಕಂಬದಂತೆ ನಿಂತುಬಿಡುತ್ತೇನೆ. ಅಥವಾ ನನಗೆ, ಶರ್ವಿಲಕನಿಗೆ, ರಕ್ಷಿಗಳು ಎಷ್ಟರವರು? ನಾನೆಂದರೆ-

ಜಿಕ್ಕು ನಡೆಯೊಳಗಂತೆ ಜಿಂಕೆಯೋಟದೊಳಿನಲು
ಎರಗಿ ಮುರಿವುದರೊಳಗೆ ಗಿಡಗ ನಾನು;
ನಿದ್ರಿತಾನಿದ್ರಿತರ ಶಕ್ತಿಯಳೆವೆಡೆ ನಾಯಿ
ಪರಿದೋಡುವೆಡೆಯಲ್ಲಿ ಹಾವೆ ನಾನು;
ಜೇರೆ ವೇಷಾಂತರವ ತಳೆವಲ್ಲಿ ಮಾಯೆಯೆನೆ
ಬೇರೆ ಭಾಷೆಯ ನುಡಿಯೆ ವಾಕ್ಕೆ ನಾನು;
ಇರುಳೊಳಗೆ ನಾ ದೀಪ, ಸಂಕಟದೊಳಾ ಕೇರೆ
ನೆಲದೊಳಗೆ ಕುದುರೆ ನೀರೊಳಗೆ ನಾಕೆ. ೨೦

ವೃತ್ತ

ಉರಗವೆ ಗತಿಯೊಳು, ಸ್ಥೈರ್ಯದೊಳದ್ರಿಯೆ
ಸುತ್ತಾಟದೊಳಾಂ ಗರುಡಸಮ;
ಮೊಲವೆನೆ ಮನೆಗಳ ನೋಡುವ ಸಮಯವೆ
ಪಿಡಿವೆಡೆ ತೋಳವೆ, ಸಿಂಹಬಲ. ೨೧

(ಪ್ರವೇಶ—ರದನಿಕೆ)

ರದನಿಕೆ—ಅಯ್ಯೋ, ಅಯ್ಯೋ, ಹೊರ ಬಾಗಿಲಿನ ಅಂಗಳದಲ್ಲಿ ವರ್ಧಮಾನ ಕನು ಮಲಗಿದ್ದ. ಅವನೂ ಈಗ ಕಾಣುವುದಿಲ್ಲ. ಇರಲಿ, ಆರ್ಯ

ಮೈತ್ರೇಯನನ್ನಾದರೂ ಕೂಗುತ್ತೇನೆ. (ಹೋಗುವಳು)

ಶರ್ವಿಲಕ—(ರದನಿಕೆಯನ್ನು ಕೊಲ್ಲಲು ಬಯಸಿ, ಕತ್ತೆಗೆ ವಿಚಾರಮಾಡಿ) ಹೆಣ್ಣು ಹೆಂಗಸು ತಾನೆ! ಇದ್ದುಕೊಳ್ಳಲಿ. ನಾನು ಹೋಗುವೆನು. (ನಿಷ್ಕ್ರಮ)

ರದನಿಕೆ—(ಹೋಗುತ್ತ ಭಯದಿಂದ) ಅಯ್ಯೋ, ಅಯ್ಯೋ, ನಮ್ಮ ಮನೆ ಮನೆಯಲ್ಲಿ ಕನ್ನ ಹಾಕಿ ಕಳ್ಳನು ಹೊರಗೆ ಹೋಗುತ್ತಿದ್ದಾನೆ. ಇರಲಿ, ಬೇಗ ಹೋಗಿ ಮೈತ್ರೇಯನನ್ನು ಎಬ್ಬಿಸುತ್ತೇನೆ.(ಅವನ ಹತ್ತಿರಬಂದು) ಆರ್ಯ ಮೈತ್ರೇಯ, ಏಳು, ಏಳು. ನಮ್ಮ ಮನೆಯಲ್ಲಿ ಕನ್ನವನ್ನು ಕೊರೆದು ಕಳ್ಳನು ಹೋದನು.

ವಿದೂಷಕ—(ಎದ್ದು) ಆ, ತೊತ್ತಿನ ಮಗಳೆ, ಏನು ಹೇಳುತ್ತಿರುವೆ—ಕಳ್ಳನನ್ನು ಕೊರೆದು ಕನ್ನ ಹೋಗಿಯಾಯಿತೆ?

ರದನಿಕೆ—ಅಯ್ಯೋ ಹತಭಾಗ್ಯ, ನಿನ್ನ ಹಾಸ್ಯ ಹಾಗಿರಲಿ. ನೋಡು, ಇಲ್ಲಿ ಕಾಣುವುದಿಲ್ಲವೆ?

ವಿದೂಷಕ—ಆ, ತೊತ್ತಿನ ಮಗಳೆ, ಏನೆಂದೆ?—ಎರಡನೆಯ ಬಾಗಿಲಿನಂತೆ ಕನ್ನವಾಗಿದೆಯೆ? ಅಯ್ಯೋ, ಮಿತ್ರ, ಚಾರುದತ್ತ, ಏಳು, ಏಳು. ನಮ್ಮ ಮನೆಯಲ್ಲಿ ಕನ್ನವನ್ನು ಕೊರೆದು ಕಳ್ಳನು ಹೋಗಿಯಾಯಿತು.

ಚಾರುದತ್ತ—ಆಗಲಿ, ಈಗ ನಿನ್ನ ಹಾಸ್ಯ ಹಾಗಿರಲಿ.

ವಿದೂಷಕ—ಅಯ್ಯಾ, ಹಾಸ್ಯನಲ್ಲ. ನೀನೇ ನೋಡು.

ಚಾರುದತ್ತ—ಯಾವ ಜಾಗದಲ್ಲಿ?

ವಿದೂಷಕ—ಇಗೋ ಇಲ್ಲೀ.

ಚಾರುದತ್ತ—(ನೋಡಿ) ಅಹಾ, ಕನ್ನ ನಿಜವಾಗಿಯೂ ನೋಡುವಂತೆ ಸೊಗಸಾಗಿದೆ—

ತುದಿಬುಡವೆರಡೆಡೆಯಿಟ್ಟಿಗೆ
ಯಿದೊ ತೆಗೆದಿವೆ ಮೇಲೆ ಕಿರಿದು ದೊಡ್ಡದು ನಡುವೊಳ್
ಒದಗಿರೆ ಕುಜನರ ಕೂಟಂ
ಹೃದಯಂ ಪೆರ್ಮನೆಯು ಸೀಳ್ದು ಕೆಡೆದವೊಲೀಗಳ್ ೨೨

ಅಹಾ, ಈ ಕೆಲಸದಲ್ಲೂ ಎಂತಹ ಕೌಶಲ ಶಕ್ಯವಿದೆ!

ವಿದೂಷಕ—ಅಯ್ಯೋ ಮಿತ್ರ, ಆಗಂತುಕ ಇಲ್ಲವೆ ಅಭ್ಯಾಸಿ—ಈ ಇಬ್ಬರ

ಲ್ಲೊಬ್ಬನಿಂದ ಮಾತ್ರ ಈ ಕನ್ನದ ಕೆಲಸ ನಡೆದಿರಬೇಕು. ಇಲ್ಲದಿದ್ದರೆ ಈ ಉಜ್ಜಯಿನೀಪಟ್ಟಣದಲ್ಲಿ ನಮ್ಮ ಮನೆಯ ಸಂಪತ್ತನ್ನು ಅರಿಯದವರಾರು ?

ಚಾರುದತ್ತ—

ವೈದೇಶ್ಯಂ ಗಡ ಗೈದನಕ್ಕುಮಿದನಾ ಕರ್ಮಾಂಗದಭ್ಯಾಸಕೆಂ-
ದಾರಯ್ಯಂ ಬಹುನಿರ್ಧನರ್ ಜನರಿವರ್ ನಿಶ್ಚಿಂತಸುಪ್ತರ್ಕ-
ಳೆಂದಾತಂ ನೋಡಲೊಡಂ ಮಹಾಭವನಮುಂ ಜಾತಾಶನಾದಂ ಫಲಂ
ಕನ್ನಂಗೈದ ಮಹಾಪರಿಶ್ರಮಮೊಳಿನ್ ಪೋದಂ ನಿರಾಶಂ ಕರಂ ೨೩

ಪಾಪ, ಆ ಬಡಪಾಯಿ ತನ್ನ ಸ್ನೇಹಿತರೊಡನೆ ಏನೆಂದು ಈಗ ಹೇಳಿಕೊಳ್ಳಬೇಕು? ವರ್ತಕನ ಮನೆಗೆ ಹೊಕ್ಕರೂ ಏನೊಂದೂ ಸಿಕ್ಕಲಿಲ್ಲವೆಂದು ಹೇಗೆ ಹೇಳಿಯಾನು ?

ವಿದೂಷಕ—ಅಯ್ಯಾ, ಆ ಹಾಳು ಕಳ್ಳನಲ್ಲಿಷ್ಟು ನಿನಗೆ ಸಹಾನುಭೂತಿಯೆ? ಅವನಿಲ್ಲಿಗೆ ಬರುವಾಗ ಯೋಚನೆ ಮಾಡಿದ್ದೇನು ಗೊತ್ತೆ—'ಈ ಮನೆ ಬಹಳ ದೊಡ್ಡದಾಗಿದೆ. ಇಲ್ಲಿಂದ ರತ್ನದ ಗಂಟನ್ನೋ ಚಿನ್ನದ ಗಂಟನ್ನೋ ಹಾರಿಸಿಕೊಂಡು ಹೋಗುತ್ತೇನೆ' ಎಂದು. (ನೆನಪು ಮಾಡಿಕೊಂಡು ವಿಷಾದದಿಂದ, ಸ್ವಗತ) ಅಯ್ಯಾ, ಆ ಚಿನ್ನದ ಗಂಟೆಲ್ಲಿ ? (ಮತ್ತೆ ನೆನಪು ಮಾಡಿಕೊಂಡು, ಪ್ರಕಾಶ), ಮಿತ್ರ, ನೀನು ಸದಾ ಕಾಲವೂ ಹೇಳುತ್ತೀಯೆ—'ಮೈತ್ರೇಯ ಮೂರ್ಖ, ಮೈತ್ರೇಯ ಹೆಡ್ಡ' ಎಂದು. ನೋಡು ಚಿನ್ನದ ಗಂಟನ್ನು ನಿನ್ನ ಕೈಯಲ್ಲೇ ಕೊಟ್ಟು ನಾನು ಎಂತಹ ಬುದ್ಧಿವಂತಿಕೆ ತೋರಿಸಿದೆ. ಇಲ್ಲದಿದ್ದರೆ ಆ ಕಳ್ಳ ತೊತ್ತಿನ ಮಗನು ಹಾರಿಸಿಕೊಂಡೇ ಹೋಗುತ್ತಿದ್ದನು.

ಚಾರುದತ್ತ—ನೀನು ಹಾಸ್ಯಮಾಡಬೇಡ.

ವಿದೂಷಕ—ನಾನು ಎಷ್ಟೇ ಮೂರ್ಖನಾದರೂ ಹಾಸ್ಯಕ್ಕೆ ಕಾಲ, ಸನ್ನಿವೇಶ ಇಷ್ಟೂ ಗೊತ್ತಿಲ್ಲವೆ ?

ಚಾರುದತ್ತ—ಹಾಗಾದರೆ ನೀನು ಕೊಟ್ಟ ಸಮಯ ಯಾವುದು ?

ವಿದೂಷಕ—ನಾನು ನಿನಗೆ ಹೇಳಲಿಲ್ಲವೆ—'ನಿನ್ನ ತುದಿಗೈ ತಣ್ಣಗಿದೆ' ಎಂದು. ಆಗಲೇ ಕೊಟ್ಟದ್ದು.

ಚಾರುದತ್ತ—ಹೀಗೂ ಇದ್ದರೂ ಇರಬಹುದು. (ಸುತ್ತಲೂ ನೋಡಿ ಸಂತೋಷ ದಿಂದ) ಮಿತ್ರ, ಒಳ್ಳೆಯ ಸುದ್ದಿಯುಂಟು.

ವಿದೂಷಕ—ಏನು, ಗಂಟು ಕಳವಾಗಿಲ್ಲವೆ ?

ಚಾರುದತ್ತ—ಕಳವಾಗಿದೆ.

ವಿದೂಷಕ—ಹಾಗಾದರೆ ಒಳ್ಳೆಯ ಸುದ್ದಿಯೇನು ಬಂತು ?

ಚಾರುದತ್ತ—ಬಂದ ಕಳ್ಳನು ಸಫಲಪ್ರಯತ್ನನಾದನಲ್ಲ, ಎಂಬುದೇ.

ವಿದೂಷಕ—ಅಯ್ಯೋ, ಗಂಟು ನಮ್ಮಲ್ಲಿಟ್ಟಿದ್ದ ನ್ಯಾಸವಲ್ಲವೆ ?

ಚಾರುದತ್ತ—ಅಯ್ಯೋ, ನ್ಯಾಸವೆ ? (ಮೂರ್ಛೆ ಹೋಗುವನು).

ವಿದೂಷಕ—ಮಿತ್ರ, ಸಮಾಧಾನಮಾಡಿಕೊ. ಯಾರದ್ದೋ ಅಡವಿಟ್ಟ ಗಂಟನ್ನು ಕಳ್ಳನು ಕೊಂಡೊಯ್ದರೆ ನೀನೇಕೆ ಮೂರ್ಛೆ ಬೀಳಬೇಕು?

ಚಾರುದತ್ತ—(ಸಮಾಧಾನಮಾಡಿಕೊಂಡು) ಮಿತ್ರ—

ನಂಬುವರಾರ್ ನಿಜಸಂಗತಿ-
ಯಂ ಬುವಿಯೊಳ್ ಸನ್ನನೆಲ್ಲರುಂ ನೀಳ್ಕರಿಪರ್
ತಾಂ ಬಡತನಮೆಂಬುದೆ ಅಪ-
ನಂಬಿಕೆಗಳ ತಾಣಮತ್ತೆ ಪೌರುಷಶೂನ್ಯಂ ೨೪

ಅಯ್ಯೋ, ಕಷ್ಟ !—

ಎನ್ನಯ ಪೊನ್ನೊಳಗಾಸೆಯ-
ನಿನ್ನೆವರಂ ತೋರುತಿರ್ದನತ್ತೆ ಕೃತಾಂತಂ
ಇನ್ನೇತಕೆ ಕಡುನೀಚಂ
ಬನ್ನಂಗೊಳಿಸಿರ್ಪನೆನ್ನ ಚಾರಿತ್ರಮುಮಂ ೨೫

ವಿದೂಷಕ—ಓ, ನಾನು ಬಾಯಿಬಡಿಯುತ್ತೇನೆ—'ಕೊಟ್ಟವರು ಯಾರು, ಕೊಂಡವರು ಯಾರು, ಕಂಡವರು ಯಾರು' ಎಂಬುದಾಗಿ.

ಚಾರುದತ್ತ—ಈಗ ನಾನು ಸುಳ್ಳಾಡಬೆ ?

ಪರರಾ ನ್ಯಾಸದ ಪೊನ್ನನ್
ಮರಳೀಪೆಂ ಭಿಕ್ಷೆಯೆತ್ತಿ ಮೇಣಾರ್ಜಿಸುತುಂ
ಒರೆಯೆಂ ಸುಳ್ಳನದೆಂದುಂ
ಪುರುಷರ ಚಾರಿತ್ರಪತನದಾ ಕಾರಣಮಂ ೨೬

ರದನಿಕೆ—ಇದನ್ನು ಆರ್ಯೆ ಧೂತಾದೇವಿಗೆ ಹೋಗಿ ತಿಳಿಸುತ್ತೇನೆ. (ಹೋಗುವಳು)

(ಪ್ರವೇಶ—ಚೇಟಿಯೊಡನೆ ಚಾರುದತ್ತನ ಪತ್ನಿ ಧೂತಾದೇವಿ)

ಧೂತಾದೇವಿ—(ಉದ್ವೇಗದಿಂದ) ಆರ್ಯಪುತ್ರನಿಗೂ ಮೈತ್ರೇಯನಿಗೂ ದೇಹದ ಗಾಯಗಳಾವುವೂ ಆಗಿಲ್ಲವೆಂಬುದು ನಿಜವಷ್ಟೆ!

ಚೇಟಿ—ಒಡತಿ, ನಿಜ. ಆದರೆ ಆ ವೇಶ್ಯೆಯ ಒಡವೆಯಿತ್ತಲ್ಲಾ ಅದು ಕಳವಾಗಿದೆ.

ಧೂತಾದೇವಿ—(ಮೂರ್ಛೆ ಹೋಗುವಳು)

ಚೇಟಿ—ಆರ್ಯೆ, ಧೂತಾದೇವಿ ಶಾಂತಳಾಗಬೇಕು.

ಧೂತಾದೇವಿ—(ಶಾಂತಳಾಗಿ) ಚೇಟಿ, ಏನೆಂದೆ—'ಆರ್ಯಪುತ್ರನು ಅಕ್ಷತ ಶರೀರನಾಗಿರುವನು ಎಂದಲ್ಲವೆ? ಹೀಗೆ ಕ್ಷತಚಾರಿತ್ರನಾಗುವುದಕ್ಕಿಂತಲೂ ಕ್ಷತಶರೀರನಾಗಿದ್ದರೇ ಉತ್ತಮವಾಗಿತ್ತು. ಈಗ ಉಜ್ಜಯಿನಿಯಲ್ಲೆಲ್ಲ ಜನರು ಹೀಗೆಯೇ ಆಡಿಕೊಳ್ಳುತ್ತಾರೆ—'ಬಡತನದ ಕಾರಣದಿಂದ ಚಾರುದತ್ತನೇ ಈ ನೀಚಕಾರ್ಯವನ್ನು ಮಾಡಿದನು' ಎಂಬುದಾಗಿ. (ಮೇಲೆ ನೋಡಿ ನಿಟ್ಟುಸಿರುಬಿಡುತ್ತ) ಭಗವನ್ ಕೃತಾಂತ, ಪದ್ಮಪತ್ರದ ಮೇಲಿನ ಜಲಬಿಂದುವಿನಂತೆ ಚಂಚಲವಾಗಿರುವ ದರಿದ್ರನ ಅದೃಷ್ಟಗಳೊಡನೆ ನೀನು ಆಟವಾಡುವೆ. ನನಗೆ ತೌರುಮನೆಯಲ್ಲಿ ಕೊಟ್ಟ ಈ ರತ್ನಹಾರವೊಂದಿನ್ನೂ ಉಳಿದಿದೆ. ಇದನ್ನಾದರೂ ಅಭಿಮಾನಧನನಾದ ಪತಿ ಸ್ವೀಕರಿಸುವುದು ಗೊತ್ತಿಲ್ಲ. ಚೇಟಿ, ಆರ್ಯ ಮೈತ್ರೇಯನನ್ನು ಕೂಗು.

ಚೇಟಿ—ದೇವಿಯ ಅಪ್ಪಣೆ. (ವಿದೂಷಕನ ಹತ್ತಿರ ಬಂದು) ಆರ್ಯ ಮೈತ್ರೇಯ, ಧೂತಾದೇವಿ ನಿನ್ನನ್ನು ಕರೆಯುತ್ತಾಳೆ.

ವಿದೂಷಕ—ಆಕೆಯೆಲ್ಲಿದ್ದಾಳೆ?

ಚೇಟಿ—ಇಲ್ಲೇ ಇದ್ದಾಳೆ. ಕಂಡು ಬಾ.

ವಿದೂಷಕ—(ಬಂದು) ಪೂಜ್ಯೆಗೆ ಮಂಗಳವಾಗಲಿ.

ಧೂತಾದೇವಿ—ಆರ್ಯನಿಗೆ ನಮಸ್ಕಾರ, ಪೂರ್ವಾಭಿಮುಖನಾಗು.

ವಿದೂಷಕ—ಇದೋ ಪೂರ್ವಕ್ಕೆ ಮುಖ ಮಾಡಿದ್ದೇನೆ.

ಧೂತಾದೇವಿ—ಆರ್ಯ, ಇದನ್ನು ಸ್ವೀಕರಿಸು.

ವಿದೂಷಕ—ಇದೇನಿದು ?

ಧೂತಾದೇವಿ—ನಾನು ರತ್ನಷಷ್ಠೀ ಉಪವಾಸವ್ರತ ಮಾಡಿದ್ದೆ. ಅದರ ಅಂಗವಾಗಿ ಯಥಾಶಕ್ತಿ ಬ್ರಾಹ್ಮಣನಿಗೇನಾದರೂ ದಾನಮಾಡಬೇಕು. ಇದುವರೆಗೂ ಇನ್ನೂ ದಾನ ಕೊಟ್ಟಿರಲಿಲ್ಲ. ಆದ್ದರಿಂದ ಆತನ ಪರವಾಗಿ ಈ ರತ್ನಹಾರವನ್ನು ನೀನು ತೆಗೆದುಕೊ.

ವಿದೂಷಕ—(ತೆಗೆದುಕೊಂಡು) ನಿನಗೆ ಮಂಗಳವಾಗಲಿ. ಹೋಗುತ್ತೇನೆ. ಇದನ್ನು ಪ್ರಿಯಮಿತ್ರನಿಗೆ ನಿವೇದಿಸುತ್ತೇನೆ.

ಧೂತಾದೇವಿ—ಆರ್ಯ ಮೈತ್ರೇಯ, ನಾನು ನಾಚುವಂತೆ ಆಗದ ಹಾಗೆ ನೋಡಿಕೋ. (ಹೋಗುವಳು)

ವಿದೂಷಕ—(ವಿಸ್ಮಯದಿಂದ) ಅಬ್ಬಾ, ಈಕೆ ಎಷ್ಟು ಮಹಾನುಭಾವಳು !

ಚಾರುದತ್ತ—ಮೈತ್ರೇಯನೇಕೆ ಇಷ್ಟು ತಡಮಾಡುತ್ತಿದ್ದಾನೆ. ಸಂಕಟದಿಂದ ಅಕಾರ್ಯವನ್ನೇನಾದರೂ ಮಾಡುತ್ತಿರಬಹುದೆ? ಮೈತ್ರೇಯ, ಮೈತ್ರೇಯ!

ವಿದೂಷಕ—(ಬಂದು) ಇಗೋ ಬಂದೆ. ಇದನ್ನು ತೆಗೆದುಕೊ. (ರತ್ನಹಾರವನ್ನು ತೋರಿಸುವನು)

ಚಾರುದತ್ತ—ಇದೇನು ?

ವಿದೂಷಕ—ಮಿತ್ರ, ಯೋಗ್ಯಪತ್ನೀಪರಿಗ್ರಹದ ಫಲ.

ಚಾರುದತ್ತ—ಏನು, ಬ್ರಾಹ್ಮಣಿ ನನ್ನ ಮೇಲೆ ಕನಿಕರಪಡುವಂತಾಯಿತೇ ? ಕಷ್ಟ. ಈಗ ನಿಜವಾಗಿಯೂ ನಾನು ದರಿದ್ರನಾದೆ—

ದುರದೃಷ್ಟದೆ ನಷ್ಟಧನಂ
ಕರಮನುಕಂಪಕ್ಕೆ ಪಾತ್ರನಾಂ ಸ್ತ್ರೀಧನಕಂ
ಪುರುಷಂ ನಾರಿಯೆ ಧನದಿಂ
ವರನಾರಿಯೆ ಪುರುಷನೆನಿಪಳ್ಳೆಸಲೆ ಧನದಿಂ ೨೭

ಹಾಗಲ್ಲ; ನಾನು ಖಂಡಿತವಾಗಿಯೂ ದರಿದ್ರನಲ್ಲ, ನನಗೆ—

ಸಿರಿಗನುಗತೆಯೆನೆ ಪೆಂಡತಿ
ವರಮಿತ್ರಂ ನೀನಿರಲ್ಕೆ ಸುಖದುಃಖಸಮಂ
ಪರಿನಷ್ಟಮಲ್ತು ನಿಜವಂ
ಪರಿಕಿಸಲಿಂತಿವು ದರಿದ್ರದುರ್ಲಭಮದರಿಂ ೨೮

ಮೈತ್ರೇಯ, ಹೋಗು; ರತ್ನಹಾರವನ್ನು ವಸಂತಸೇನೆಗೆ ತೆಗೆದುಕೊಂಡು ಹೋಗು. ಅವಳಿಗೆ ನಾನು ಹೀಗೆ ಹೇಳಿದೆನೆಂದು ತಿಳಿಸು: 'ನೀನಿಟ್ಟ ಚಿನ್ನದ ಗಂಟನ್ನು ನನ್ನದೇ ಎಂಬ ಭ್ರಮೆಯಿಂದ ಜೂಜಿನಲ್ಲಿ ಸೋತುಬಿಟ್ಟೆ. ಅದಕ್ಕೆ ಪ್ರತಿಯಾಗಿ ಈ ರತ್ನಹಾರವನ್ನು ಸ್ವೀಕರಿಸು' ಎಂದು.

ವಿದೂಷಕ—ಅಯ್ಯೋ ಬೇಡ, ಬೇಡ. ತಿನ್ನಲಿಲ್ಲ, ಉಣ್ಣಲಿಲ್ಲ; ಆ ಕಳ್ಳರ ಪಾಲಾದ ಅಗ್ಗದ ಒಡವೆಯ ಬದಲು ಚತುಸ್ಸಾಗರಗಳ ಸಾರರೂಪವಾದ ರತ್ನಹಾರವನ್ನು ಕೊಡುವುದು ಬೇಡ.

ಚಾರುದತ್ತ—ಮಿತ್ರ, ಹಾಗೆನ್ನಬೇಡ—

ನಂಬಿಕೆಯಾವುದನವಳಾ
ಲಂಬಿಸುತಂ ನ್ಯಾಸಗೈದಳೆನ್ನೊಳ್ ವಲಮಾ
ನಂಬಿಕೆ ಪಿರಿದೆನಲದರಾ
ತುಂಬಿದ ಬೆಲೆಯನ್ನೆ ಕೊಡುವೆನ್ನೈಸಲೆ ನೋಡಲ್ ೨೯

ಆದ್ದರಿಂದ ಮಿತ್ರ, ನನ್ನ ದೇಹವನ್ನು ಮುಟ್ಟಿ ಆಣೆ ಮಾಡುತ್ತಿದ್ದೇನೆ. ಇದನ್ನವಳಿಗೆ ಒಪ್ಪಿಸಿಕೊಡದೆ ನೀನು ಹಿಂದಿರುಗಲಾಗದು. ವರ್ಧಮಾನಕ—

ಇದೆಯಿಟ್ಟಿಗೆಯಿಂ ನೀಂ ವಹಿ-
ಲದೆ ಕನ್ನಮನೊಡನೆ ಮುಚ್ಚು ಕಾಣದ ತೆರದಿಂ
ವಿಧವಿಧದಿಂ ಜನರಾಡುವ-
ರದರಿಂ ಪರಿಹರಿಪೆನಿಂದು ನಯರಕ್ಷೆಯನಾಂ ೩೦

ಮಿತ್ರ, ಮೈತ್ರೇಯ, ನೀನು ಔದಾರ್ಯದಲ್ಲಿ ಸ್ವಲ್ಪವೂ ಕೊರತೆಯಾಗದಂತೆ ಮಾತನಾಡಬೇಕು.

ವಿದೂಷಕ—ದರಿದ್ರನಾದ ಮಾತ್ರಕ್ಕೆ ಮಾತಿನಲ್ಲಿ ಕೊರತೆ ಬರುತ್ತದೆಯೆ?

ಚಾರುದತ್ತ—ಅಯ್ಯಾ, ಗೆಳೆಯ, ನಿಜವಾಗಿಯೂ ನಾನು ದರಿದ್ರನಲ್ಲ (ನನಗೆ ‘ಸಿರಿಗನುಗತೆ ಪೆಂಡಿತಿ....’ ಎಂದು ಮತ್ತೆ ಹಾಡುತ್ತಾನೆ). ಈಗ ಇನ್ನು ಹೋಗಿ ಬಾ. ನಾನು ಶುಚಿಯಾಗಿ ಸಂಧ್ಯಾವಂದನೆ ಮಾಡುತ್ತೇನೆ.

(ನಿಷ್ಕ್ರಮ—ಎಲ್ಲರೂ)

ಇಲ್ಲಿಗೆ ‘ಕೊರೆದ ಕನ್ನ’ ವೆಂಬ ಮೂರನೆಯ ಅಂಕ ಮುಗಿದುದು.



# ನಾಲ್ಕನೆಯ ಅಂಕ

(ಪ್ರವೇಶ–ಚೇಟಿ)

ಚೇಟಿ—ಆರ್ಯೆಯ ಹತ್ತಿರ ಹೋಗುವಂತೆ ಅಮ್ಮನ ಅಪ್ಪಣೆಯಾಗಿದೆ. ಓ, ಆರ್ಯೆ ಇಲ್ಲಿಯೇ ಚಿತ್ರಪಟವನ್ನು ನಿಟ್ಟಿಸುತ್ತಾ ಮದನಿಕೆಯೊಡನೆ ಏನೋ ಮಾತನಾಡುತ್ತಾ ಇದ್ದಾಳೆ. ಹೋಗಿ ಕಾಣುವೆನು. (ನಡೆಯುವಳು)

(ಪ್ರವೇಶ–ಮೇಲೆ ಹೇಳಿದಂತೆ ವಸಂತಸೇನೆ ಮತ್ತು ಮದನಿಕೆ)

ವಸಂತಸೇನೆ—ಸಖಿ, ಮದನಿಕೆ, ಈ ಚಿತ್ರದ ಆಕೃತಿ ಆರ್ಯಚಾರುದತ್ತನನ್ನು ಸರಿಯಾಗಿ ಹೋಲುವುದೆ?

ಮದನಿಕೆ—ಹೌದು, ತುಂಬಾ ಸೊಗಸಾಗಿ ಹೋಲುವುದು.

ವಸಂತಸೇನೆ—ನಿನಗೆ ಹೇಗೆ ಗೊತ್ತು ?

ಮದನಿಕೆ—ಆರ್ಯೆಯ ಸ್ನೇಹಮಯದೃಷ್ಟಿ ಅದರಲ್ಲಿ ನೆಟ್ಟಿರುವುದರಿಂದಲೇ.

ವಸಂತಸೇನೆ—ಸಖಿ, ಮದನಿಕೆ, ಸೂಳೆಗೇರಿಯ ದಾಕ್ಷಿಣ್ಯದಿಂದ ನೀನು ಹೇಳುತ್ತಿರುವೆಯೇನು?

ಮದನಿಕೆ—ಆರ್ಯೆ, ಸೂಳೆಗೇರಿಯಲ್ಲಿ ವಾಸಿಸುವವರೆಲ್ಲರೂ ಕಪಟದಾಕ್ಷಿಣ್ಯವನ್ನೇ ತೋರಿಸುವರೆಂಬ ನಿಯಮವಿದೆಯೆ?

ವಸಂತಸೇನೆ—ಸಖಿ, ನಾನಾಪುರುಷರ ಸಂಗದಿಂದ ಸೂಳೆಯರು ತೋರಿಸುವುದು ಕಪಟದಾಕ್ಷಿಣ್ಯವೇ.

ಮದನಿಕೆ—ಆರ್ಯೆಯ ದೃಷ್ಟಿ, ಹೃದಯ ಎರಡೂ ಇಲ್ಲಿ ಪ್ರೀತಿಯಿಂದ ನೆಟ್ಟಿರುವಾಗ, ಅದಕ್ಕೆ ಕಾರಣವನ್ನೇಕೆ ಕೇಳುತ್ತಿರುವೆ?

ವಸಂತಸೇನೆ—ಸಖೀಜನರ ನಡುವೆ ಹಾಸ್ಯಕ್ಕೆ ಗುರಿಯಾಗಬಾರದೆಂದು.

ಮದನಿಕೆ—ಆರ್ಯೆ, ಅದು ಸಾಧ್ಯವಿಲ್ಲ. ಹೆಂಗಸರು ಸಖಿಯರ ಮನಸ್ಸಿಗೆ ಬೇಕಾದುದನ್ನೇ ಅನುಮೋದಿಸುವರು.

ಚೇಟಿ—(ಸಮೀಪಿಸಿ) ಆರ್ಯೆ, ಅಮ್ಮನು ಹೀಗೆ ಆಜ್ಞಾಪಿಸಿದ್ದಾಳೆ—'ಪಕ್ಕದ

ಬಾಗಿಲಲ್ಲಿ ಮುಸುಕುಹೊದಿಸಿದ ಗಾಡಿ ಸಿದ್ಧವಾಗಿದೆ. ನೀನಿನ್ನು ಹೊರಡು' ಎಂದು.

ವಸಂತಸೇನೆ—ಚೇಟಿ, ಆರ್ಯ ಚಾರುದತ್ತನು ನನ್ನನ್ನು ಕರೆದುಕೊಂಡು ಹೋಗುವನೇನು ?

ಚೇಟಿ—ಆರ್ಯೆ, ಗಾಡಿಯೊಂದಿಗೆ ಹತ್ತುಸಾವಿರ ಹೊನ್ನನ್ನು ಕೊಟ್ಟರುವಾತನೇ ಕರೆದುಕೊಂಡು ಹೋಗುವನು.

ವಸಂತಸೇನೆ—ಆತನು ಯಾರು ?

ಚೇಟಿ—ಅದೇ, ರಾಜನ ಭಾವಮೈದನಾದ ಸಂಸ್ಥಾನಕ.

ವಸಂತಸೇನೆ—(ಕೋಪದಿಂದ) ತೊಲಗಾಚೆ. ಮತ್ತೆ ಈ ಮಾತನ್ನಾಡೀಯೆ.

ಚೇಟಿ—ಆರ್ಯೆ ಪ್ರಸನ್ನಳಾಗಬೇಕು. ನಾನು ಅಮ್ಮನ ಸಂದೇಶವನ್ನು ಮಾತ್ರ ಅರಿಕೆಮಾಡುತ್ತಿದ್ದೇನೆ.

ವಸಂತಸೇನೆ—ನಾನು ಕೋಪಿಸುತ್ತಿರುವುದೂ ಸಂದೇಶವನ್ನು ಕುರಿತೇ.

ಚೇಟಿ—ಹಾಗಾದರೆ ನಾನು ಅಮ್ಮನಿಗೆ ಏನೆಂದು ಬಿನ್ನವಿಸಲಿ ?

ವಸಂತಸೇನೆ—ಹೀಗೆ ಬಿನ್ನವಿಸು–'ನಾನು ಬದುಕಿರಬೇಕೆಂಬ ಇಚ್ಛೆಯಿರುವುದಾದರೆ ಅಮ್ಮನು ಮತ್ತೆ ಎಂದೂ ಇಂತಹ ಅಪ್ಪಣೆ ಮಾಡಲಾಗದು.'

ಚೇಟಿ—ನಿನ್ನ ಇಷ್ಟ. (ನಿಷ್ಕ್ರಮ)

(ಪ್ರವೇಶ—ಶರ್ವಿಲಕ)

ಶರ್ವಿಲಕ— ನಿಂದ್ಯದೋಷವನಿರುಳಿಗೀಯುತೆ,
ನಿದ್ದೆಯನ್ನೇ ಗೆಲ್ಲುತೆ ;
ರಾಜರಕ್ಷಿಗಳೊಡನೆಯೆ ;
ಸೂರ್ಯನುದಯದೆ ಮಂದರಶ್ಮಿಯು
ರಾತ್ರಿಯುಡುಗಿದ ಶಶಿಯೊಲು
ಆದೆ‌ನಾನೀ ಪರಿಯೊಳು. ೧

ಮತ್ತು

ಜೀಗನಡಿಯಿಡುವೆನ್ನ ನೆಟ್ಟನೆ ನೋಡುವಾತನ ಕಾಣಲು
ದುಗುಡದಿಂದಾಂ ಸುಮ್ಮನಿರುವೆಡೆ ಜೀಗ ನಡೆವನ ನೋಡಲು ;

ಎನ್ನ ಕಲುಷಿತವಂತರಂಗವು ಅಳಿವುದೆಲ್ಲರನೆನ್ನಲು,
ತನ್ನ ದೋಷಗಳಿಂದೆ ಮನುಜಗೆ ಶಂಕೆ ಬರ್ಪುದು ಸಹಜವು. ೨

ಆ ಮದನಿಕೆಯ ಸಲುವಾಗಿ ನಾನು ಅಕಾರ್ಯ ಮಾಡಿದ್ದಾಯಿತು—

ಪರಿಜನ ಸಂಭಾಷಣಪರ ನರನಿರೆ
ಬಿಡುತಲಿ ಮುಂದಕೆ ನಾ ನಡೆದೆ;
ಮತ್ತೊಂದೆಡೆಯಲಿ ಪೆಣ್ಬೇಡೊಂದಿರೆ
ನೋಡುತೆ ಬಿಡುತಲಿ ಮುಂಬರಿದೆ;
ರಾಜನ ರಕ್ಷಿಗಳೈತರೆ ಪಕ್ಕದೆ
ಮನೆತೊಲೆಯಂದದೆ ನಾ ನಿಂತೆ;—
ಇಂತೀ ನೂರಾರೆಸಕಗಳಿಂದಲೆ
ಇರುಳನೆ ಹಗಲಂತಾಗಿಸಿದೆ. ೩

(ನಡೆಯುವನು)

ವಸಂತಸೇನೆ—ಚೇಟಿ, ಈ ಚಿತ್ರಪಟವನ್ನು ನನ್ನ ಶಯ್ಯಾಗೃಹದಲ್ಲಿಟ್ಟು ಬೀಸಣಿಗೆಯನ್ನು ತೆಗೆದುಕೊಂಡು ಬೇಗ ಬಾ.

ಮದನಿಕೆ—ಆರ್ಯೆಯ ಅಪ್ಪಣೆ. (ಚಿತ್ರವನ್ನು ತೆಗೆದುಕೊಂಡು ಹೋಗುವಳು)

ಶರ್ವಿಲಕ—ಇದೇ ವಸಂತಸೇನೆಯ ಮನೆ. ಪ್ರವೇಶಿಸುತ್ತೇನೆ. (ಪ್ರವೇಶಿಸಿ) ನಾನು ಮದನಿಕೆಯನ್ನು ಎಲ್ಲಿ ಕಾಣಬಹುದೋ ಏನೋ?

(ಪ್ರವೇಶ—ಬೀಸಣಿಗೆ ಹಿಡಿದುಕೊಂಡು ಬರುತ್ತಿರುವ ಮದನಿಕೆ)

(ನೋಡಿ) ಓ ಇಲ್ಲಿಯೇ ಮದನಿಕೆಯಿದ್ದಾಳೆ—

ಮದನನ ಮೀರಿಸಿ ಗುಣದೊದವಿಂದೆ
ಚೆಲ್ವಿಂದೆಸೆವಳು ರತಿಯಂತೆ;
ಮದನಾಗ್ನಿಯಿನಿದೊ ಉರಿವೆನ್ನೆದೆಯನು
ಚಂದನದಿಂದೆನೆ ತಣಿಸುತ್ತೆ. ೪

ಮದನಿಕೆ!

ಮದನಿಕೆ—(ನೋಡಿ) ಆಶ್ಚರ್ಯ. ಏನು, ಶರ್ವಿಲಕ! ಶರ್ವಿಲಕ, ನಿನಗೆ ಸ್ವಾಗತ. ಎಲ್ಲಿಂದ ಬಂದೆ?

ಶರ್ವಿಲಕ—ನಿಧಾನವಾಗಿ ಹೇಳುತ್ತೇನೆ.

(ಇಬ್ಬರೂ ಪ್ರೇಮದಿಂದ ಪರಸ್ಪರ ನೋಡುವರು)

ವಸಂತಸೇನೆ—ಮದನಿಕೆ ತಡಮಾಡುತ್ತಿದ್ದಾಳೆ. ಎಲ್ಲಿಗೆ ಹೋಗುವಳೋ ಏನೋ? (ಕಿಟಕಿಯಿಂದ ನೋಡಿ) ಇದೇನು! ಯಾರೋ ಗಂಡಸಿನೊಂದಿಗೆ ಮಾತನಾಡುತ್ತಾ ನಿಂತಿದ್ದಾಳೆ. ಪ್ರೇಮಪೂರ್ಣವೂ ನಿಶ್ಚಲವೂ ಆದ ದೃಷ್ಟಿಯಿಂದ ಅವನನ್ನು ಕುಡಿದುಬಿಡುವಂತೆ ಧ್ಯಾನ ಮಾಡುತ್ತಿರುವುದರಿಂದ, ಈತನೇ ಇವಳನ್ನು ಇಲ್ಲಿಂದ ಬಿಡಿಸಿಕೊಂಡು ಹೋಗುವ ಇಷ್ಟವುಳ್ಳಾತನೆಂದು ತೋರುತ್ತದೆ. ಆಗಲಿ, ಇಬ್ಬರ ಪ್ರೇಮವೂ ಮುಂದುವರಿಯಲಿ. ಯಾರ ಪ್ರೀತಿಗೂ ವಿಘ್ನಬೇಡ. ಮಧ್ಯೆ ಅವಳನ್ನೀಗ ನಾನೂ ಕರೆಯುವುದಿಲ್ಲ.

ಮದನಿಕೆ—ಶರ್ವಿಲಕ, ಹೇಳು.

ಶರ್ವಿಲಕ—(ಗಾಬರಿಯಿಂದ ಎಲ್ಲ ಕಡೆಗೂ ನೋಡುತ್ತಾನೆ)

ಮದನಿಕೆ—ಇದೇನಿದು? ಗಾಬರಿಗೊಂಡವನಂತೆ ಕಾಣುತ್ತಿರುವೆ!

ಶರ್ವಿಲಕ—ನಾನು ರಹಸ್ಯವನ್ನು ಹೇಳಬೇಕಾಗಿದೆ. ಈ ಸ್ಥಳ ಏಕಾಂತವಾಗಿದೆ ತಾನೆ?

ಮದನಿಕೆ—ಹೌದು.

ವಸಂತಸೇನೆ—ಪರಮರಹಸ್ಯವೇನು? ಹಾಗಾದರೆ ನಾನು ಕೇಳುವುದಿಲ್ಲ.

ಶರ್ವಿಲಕ—ಮದನಿಕೆ, ನಿಷ್ಕ್ರಯದ ಹಣವನ್ನು ಕೊಟ್ಟರೆ ವಸಂತಸೇನೆ ನಿನ್ನನ್ನು ಬಿಡುವಳಷ್ಟೇ?

ವಸಂತಸೇನೆ—ಮಾತು ನನಗೇ ಸಂಬಂಧಿಸಿದ್ದು. ಅದ್ದರಿಂದ ಈ ಕಿಟಕಿಯ ಹಿಂದೆ ಮೈಮರಸಿಕೊಂಡು ಕೇಳುತ್ತೇನೆ.

ಮದನಿಕೆ—ಈ ವಿಷಯದಲ್ಲಿ ನಾನು ಒಡತಿಯನ್ನು ಕೇಳಿದೆ. ಅವಳು ಹೇಳಿದಳು—'ನನಗೆ ಇಷ್ಟಬಂದರೆ ದುಡ್ಡನ್ನೇ ತೆಗೆದುಕೊಳ್ಳದೆ ಪರಿಜನವನ್ನೆಲ್ಲ ಬಿಡಿಸಿಬಿಡುತ್ತೇನೆ' ಎಂದು. ಇರಲಿ, ಶರ್ವಿಲಕ, ಆರ್ಯೆಯ ಕೈಯಿಂದ ನನ್ನನ್ನು ಬಿಡಿಸಿಕೊಂಡು ಹೋಗುವಷ್ಟು ಹಣ ನಿನಗೆ ಎಲ್ಲಿಂದತಾನೆ ಬರಬೇಕು?

ಶರ್ವಿಲಕ— ಬಡತನಮುಡಿಸಿರಲೆನ್ನಂ
ಕಡುಮೋಹಂ ನಿನ್ನೊಳಂತೆ ನೆಲಸಿರಲೀಗಳ್

ನಡುರಾತ್ರಿಯೊಳೀ ದಿವಸಂ
ಮಡದಿಯೆ ಗೈದಿರ್ಪೆನಲ್ತೆ ಕಡುಸಾಹಸಮಂ ೫

ವಸಂತಸೇನೆ—ಇವನ ರೂಪವೇನೋ ಪ್ರಸನ್ನವಾಗಿದೆ. ಆದರೆ ಸಾಹಸ ಕರ್ಮ ಮಾತ್ರ ಮನಸ್ಸನ್ನು ಚುಚ್ಚುತ್ತದೆ.

ಮದನಿಕೆ—ಶರ್ವಿಲಕ, ಹೆಣ್ಣೆಂಬ ಕ್ಷುದ್ರವಸ್ತುವಿಗೋಸ್ಕರನೀನು ಎರಡನ್ನೂ ಸಂದೇಹಾಸ್ಪದವಾಗುವಂತೆ ಮಾಡಿಕೊಂಡೆ.

ಶರ್ವಿಲಕ—ಏನೇನನ್ನು ?

ಮದನಿಕೆ—ದೇಹ ಮತ್ತು ಚಾರಿತ್ರವೆರಡನ್ನೂ.

ಶರ್ವಿಲಕ—ಹುಚ್ಚಿ, ಹೊನ್ನು ವಾಸಿಸುವುದೇ ಸಾಹಸದಲ್ಲಿ.

ಮದನಿಕೆ—ಶರ್ವಿಲಕ, ನೀನು ಚಾರಿತ್ರಭ್ರಷ್ಟನಲ್ಲ. ಆದ್ದರಿಂದ ನನ್ನ ಸಲುವಾಗಿ ಸಾಹಸಕ್ಕೆ ಕೈಹಾಕಿದಾಗಲೂ ಅತ್ಯಂತ ಘೋರವಾದ್ದೇ ನನ್ನೂ ಮಾಡಿಲ್ಲ ತಾನೆ ?

ಶರ್ವಿಲಕ—

ಅಬಲೆಯೊಡವೆಯು ಕದಿಯೆನೆಂದೂ ಫುಲ್ಲಲತೆಯಂತೆಸೆವಳ,
ವಿಪ್ರವಿತ್ತವ ಕೊಳ್ಳೆನೆಂದೂ ಯಜ್ಞಕಾಗಿಯೆ ತಂದಿಹ ;
ತಾಯ ತೊಡೆಯೊಳಗಿರ್ಪ ಶಿಶುವಿನ ಧನವ ಲೋಭವೆ ಸೆಳೆಯನು,
ಸ್ಥಿರವು ಕಾರ್ಯಾಕಾರ್ಯನಿರ್ಣಯವೆನ್ನ ಚೌರ್ಯದೊಳೆಂಬೆನು. ೬

ಆದ್ದರಿಂದ ವಸಂತಸೇನೆಗೆ ಹೋಗಿ ಆಜ್ಞಾಪಿಸು—

ಇದೊ ನಿನ್ನ ಮೈಯಳತೆಗೆಂದೆ ಮಾಡಿಸಿದಂತೆ
ರಾಜಿಸುವ ಭೂಷಣವನಪ್ಪುಕೆಯ್ಯುದ್ದು
ಹೊರಗಿದನು ತೋರಿಸವೆ ನೀಂ ಧರಿಸು ಮನೆಯಲ್ಲಿ
ನೀನೆನಗೆ ತೋರುತಿಹ ನೇಹಕೆಂದು. ೭

ಮದನಿಕೆ—ಶರ್ವಿಲಕ, ಈ ಒಡವೆ ಹೊರಗೆ ತೋರಿಸಬಾರವೆನ್ನುವುದೂ, ಕೊಡುತ್ತಿರುವುದು ಗಣಿಕೆಗೆನ್ನುವುದೂ ಪರಸ್ಪರ ಹೊಂದುವಂತಿಲ್ಲ. ಇಲ್ಲಿ ಸ್ವಲ್ಪ ತಾ. ನಾನು ಒಡವೆಯನ್ನು ನೋಡುವೆನು.

ಶರ್ವಿಲಕ—ಇದೇ ಒಡವೆ. (ಹಿಂಜರಿಯುತ್ತಲೇ ಕೊಡುವನು.)

ಮದನಿಕೆ—(ನೋಡಿ)—ಈ ಒಡವೆಯನ್ನು ಮುಂಚೆ ನೋಡಿರುವಂತಿವೆ

ಯಲ್ಲಾ ! ಹೇಳು, ಇದು ನಿನಗೆಲ್ಲಿಂದ ಬಂತು ?

ಶರ್ವಿಲಕ—ಮದನಿಕೆ, ಅದರಿಂದ ನಿನಗೇನಾಗಬೇಕು. ಸುಮ್ಮನೆ ತೆಗೆದುಕೊ.

ಮದನಿಕೆ—(ಕೋಪದಿಂದ) ನನ್ನಲ್ಲಿ ನಂಬಿಕೆಯೂ ಇಲ್ಲದಿದ್ದರೆ ನನ್ನನ್ನು ಬಿಡಿಸಿಕೊಂಡೇಕೆ ಹೋಗುವೆ ?

ಶರ್ವಿಲಕ—ಪ್ರಿಯೆ, ಬೆಳಗಾದ ಮೇಲೆ ಸೆಟ್ಟರ ಬೀದಿಯಲ್ಲಿ ಜನರಾಡಿ ಕೊಳ್ಳುತ್ತಿದ್ದರು—'ವರ್ತಕನಾದ ಚಾರುದತ್ತನದು' ಎಂದು.

(ವಸಂತಸೇನೆ, ಮದನಿಕೆ ಇಬ್ಬರೂ ಮೂರ್ಛೆ ಹೋಗುವರು)

ಶರ್ವಿಲಕ—ಮದನಿಕೆ ಸಮಾಧಾನಮಾಡಿಕೊ. ಇದೇಕೆ ಈಗ—

ಒಡಲೇ ಸಡಿಲ್ದಿರೆ ದುಃಖದೊ
ಅಡಿಗಡಿಗಂ ಭೀತಿಲೋಲಲೋಚನೆಯಾದ್ಯೆ
ಬಿಡುಗಡೆಯೈತರ್ಪೆಡೆಯೊಳ್
ನಡುಗುವುದೇಕಿಂತು ಮರುಕದೋರದೆಯೆನ್ನೊಳ್ ೮

ಮದನಿಕೆ—(ಎಚ್ಚೆತ್ತು) ಸಾಹಸಿಯೆ, ನನಗಾಗಿ ಈ ಅಕಾರ್ಯಮಾಡುವುದ ಕ್ಕೆಂದು ಹೋದ ನೀನು ಆ ಮನೆಯಲ್ಲಿ ಯಾರನ್ನೂ ಕೊಂದಾಗಲಿ, ಗಾಯ ಮಾಡಿಯಾಗಲಿ ಬಂದಿಲ್ಲವಷ್ಟೆ !

ಶರ್ವಿಲಕ—ಮದನಿಕೆ, ಶರ್ವಿಲಕನು ಯಾವಾಗಲೂ ಭೀತರ ಮೇಲೂ ನಿದ್ರಿತರ ಮೇಲೂ ಕೈ ಮಾಡುವುದಿಲ್ಲ. ನಾನು ಯಾರನ್ನೂ ಕೊಂದಿಲ್ಲ, ಗಾಯಗೊಳಿಸಿಯೂ ಇಲ್ಲ.

ಮದನಿಕೆ—ನಿಜವೋ ?

ಶರ್ವಿಲಕ—ನಿಜ.

ವಸಂತಸೇನೆ—(ಎಚ್ಚೆತ್ತು) ಆಶ್ಚರ್ಯ ! ಈಗ ಇವರಿಂದ ಬದುಕಿದೆ.

ಮದನಿಕೆ—ಇದು ಪ್ರಿಯವಾರ್ತೆ.

ಶರ್ವಿಲಕ—(ಅಸೂಯೆ ಪಡುತ್ತ) ಮದನಿಕೆ, ಏನು, 'ಪ್ರಿಯವಾರ್ತೆ' ಯೆಂದೆಯಾ ?—

ನಿನ್ನ ನೇಹವೆ ಬಿಗಿಯುಬೆಪೆಯನು ನಾನು ಗೈವೆನಕಾರ್ಯವ,
ಖ್ಯಾತವೃತ್ತರ ಪೂರ್ವಪುರುಷರ ಕುಲದೊಳಾನೊಗೆದಿರ್ದರೂ ;

ಕಾಮನಳಿಸೆಯು ಗುಣವನೆಲ್ಲವ ಮಾನವೊಂದನು ಕಾಯ್ವೆನು
ಗೆಳೆಯನೆನ್ನುವೆ ಯೆನ್ನನಾದೊಡೆ ನೀನು ಕಾಮಿಪೆಯನ್ಯನ. ೯
(ಕಟಕಿಯಿಂದ)

ಪಲವೆಲ್ಲವ ಫಲಿಸುವ ಸತ್
ಕುಲಸುತರೆನಿಸಿರ್ಪ ಪೆರ್ಮರಂಗಳ್ ನೋಡಲ್
ಬೆಲೆವೆಣ್ ಪಕ್ಕಿಗಳಿಂಟಲ್
ಫಳಿಲನೆ ತವೆ ನಿಷ್ಫಲಂಗಳಪ್ಪುವು ಬುವಿಯೊಳ್ ೧೦
ಉರಿ ಕಾಮಾಗ್ನಿಗೆ ತಾನಾ
ಸುರತಂ ಮೇಣ್ ಪ್ರಣಯಮಿಂಧನಂ ಮಾನಿಸರಾ
ತರತರದಾಹುತಿಯಂ ಸಲೆ
ಸುರಿವರ್ ಬಿಡದೊಳಗೆ ಧನಮುಮಂ ಯೌವನಮಂ ೧೧

ವಸಂತಸೇನೆ—(ನಗೆಯಿಂದ) ಅಹಾ, ಇವನ ಉದ್ವೇಗ ನಿಷ್ಕಾರಣವಾದುದು.
ಶರ್ವಿಲಕ—ಸರ್ವಥಾ—

ಕಡುಗಾಂಪರವರ್ ಪುರುಷರ್
ನಡೆ ನಂಬುವರಾರೊ ಪೆಂಡಿರೊಳ್ ಸಿರಿಗಳೊಳಂ
ಮಡದಿಯರುಂ ಸಿರಿವೆಣ್ಣುಂ
ಬಿಡಮೋಡುವರಲ್ತೆ ಸರ್ಪಕನ್ಯೆಯ ನಡೆಯಿಂ ೧೨
ಪ್ರಣಯಂ ಸಲ್ಲದು ಪೆಂಡಿರೊ
ಳಣಮೊಲ್ಲದೆ ಪ್ರಣಯಿಯನ್ನೆ ತೊರೆವರ್ ಪೆಂಡಿರ್
ಪ್ರಣಯಿನಿಯೊಳ್ ಗಡ ಮಾಳ್ಪುದು
ಪ್ರಣಯಮೆನದು ಶೂನ್ಯಮಾಗೆ ತೊರೆವುದೆ ಯೋಗ್ಯಂ ೧೩

ಹಿಂದಿನವರು ಹೇಳಿರುವುದು ಸರಿಯಾಗಿದೆ —

ಇವರು ನಗುವರು ಇವರು ಅಳುವರು ಎಲ್ಲವೂ ಹಣಕಾಗಿಯೆ,
ಇವರು ನಂಬಿಸಿ ಪುರುಷರನ್ನಿಹರಂತೆ ನಂಬರು ಪುರುಷನ;
ಆದಕಾರಣ ಕುಲವ ಶೀಲವನಾಂತ ಪುರುಷನು ದೂರದೆ
ಆ ಶ್ಮಶಾನದ ಹೂಗಳಂತೆಯೆ ಸೂಳೆಜನರನು ತೊರೆವುದು. ೧೪

ಮತ್ತು

ತೆರೆಯಂತೆ ಸಾಗರದ ಚಂಚಲಿಪ ಚಿತ್ತೆಯರು
ಸಂಜೆಮೋಡದ ತೆರೆದೆ ಕ್ಷಣಿಕರಾಗೆಯರು
ಹಣವನೆಲ್ಲವ ಸೆಳೆದು, ಧನಹೀನ ಪುರುಷನನು
ನಿರ್ಮಾಲ್ಯಲೇಪದೊಲು ತೊರೆವರಕಟಾ ! ೧೫

ಹೆಣ್ಣುಗಳು ಯಾವಾಗಲೂ ಚಂಚಲೆಯರೇ—
ಒರ್ವಂ ಬಗೆಯಲ್ಲಿರೆ ಮ-
ತ್ತೊರ್ವನ ಕಣ್‌ಸನ್ನೆಯಿಂದೆ ಕರೆವರ್ ಬೇ-
ರೊರ್ವಂಗುಕ್ಕಿಸಿ ಮದಜಲ
ಸರ್ವಸ್ವಮನನ್ಯನೊರ್ವನೊಳ್ ಕೂಡಿರುವರ್ ೧೬

ಇದು ಕವಿಯೊಬ್ಬನ ಸುಭಾಷಿತ—
ಪದುಮಂ ಬೆಳೆಯದ ಬೆಟ್ಟದ
ತುದಿಯೊಳ್ ಹಯಭಾರ ಕತ್ತೆ ಹೊತ್ತುದುಮಿಲ್ಲಂ
ಆದೆ ಬಿತ್ತಿದ ಜವೆ ನೆಲ್ಲಾ
ಗದು ಶುಚಿಯಾಗಿಹರಿಲ್ಲ ಗಣಿಕಾಂಗನೆಯರ್ ೧೭

ಆ, ದುರಾತ್ಮ, ಚಾರುದತ್ತ, ನಿನ್ನನ್ನು ಇಲ್ಲವೆನ್ನಿಸಿಬಿಡುತ್ತೇನೆ. (ಕೆಲವು ಹೆಜ್ಜೆಗಳನ್ನಿಡುವನು.)

ಮದನಿಕೆ—(ಸೆರಗನ್ನು ಹಿಡಿದುಕೊಂಡು) ಅಸಂಬದ್ಧವಾಗಿ ಮಾತನಾಡುತ್ತಿರುವೆ. ಯಾವುದು ಊಹಾತೀತವೋ ಅದರ ಬಗೆಗೆ ಕೋಪಿಸುತ್ತಿರುವೆ.

ಶರ್ವಿಲಕ—ಏನು ಊಹಾತೀತವೆಂದೆಯಾ ?

ಮದನಿಕೆ—ನೋಡು, ಈ ಒಡವೆ ಆರ್ಯೆಗೆ ಸೇರಿದ್ದು.

ಶರ್ವಿಲಕ—ಆದರೇನು ?

ಮದನಿಕೆ—ಅದನ್ನಿವಳು ಆತನಲ್ಲಿ ನ್ಯಾಸವಾಗಿಟ್ಟದ್ದಳು.

ಶರ್ವಿಲಕ—ಏತಕ್ಕಾಗಿ.?

ಮದನಿಗ—(ಕಿವಿಯಲ್ಲಿ)....ಇದಕ್ಕಾಗಿ.

ಶರ್ವಿಲಕ—(ನಿರ್ವಿಣ್ಣನಾಗಿ) ಅಯ್ಯೊ, ಕಷ್ಟ !—
ಬಿರುಬಿಸಿಲಿಂ ಬಸವಳಿದಾಂ
ನೆರಳಿಂಗೆಂದಾವ ಕೊಂಬೆಯಂ ಮರೆಗೊಂಡೆಂ

ಅರಿಯದೆ ಮತ್ತಾ ಕೊಂಬೆಯ
ವರಪರ್ಣಂಗಳನೆ ತಂದು ಪಾಳ್ಗೈದೆನಲಾ ೧೮

ವಸಂತಸೇನೆ—ಓ, ಇವನೂ ಈಗ ಪರಿತಪಿಸುತ್ತಿದ್ದಾನೆ! ಆದ್ದರಿಂದ ತಿಳಿಯದೆ ಇದನ್ನು ಮಾಡಿರಬೇಕು.

ಶರ್ವಿಲಕ—ಈಗ ಏನು ಮಾಡಿದರೆ ಸರಿ?

ಮದನಿಕೆ—ಅದು ನಿನಗೇ ಗೊತ್ತು.

ಶರ್ವಿಲಕ—ಹಾಗಲ್ಲ, ನೋಡು—

ಚದುರೆಯರೆನಿಪರ್ ಗಡ ಸಹ
ಜದ ಬಲದಿಂದೆಲ್ಲ ಪೆಂಡಿರುಂ ಧಾರಿಣಿಯೊಳ್
ಅದೆ ಪುರುಷರ್ಕಳ ಚದುರೆಂ
ಬುದು ಬರ್ಕುಂ ಶಾಸ್ತ್ರನೀತಿಯುಪದೇಶಗಳಿಂ ೧೯

ಮದನಿಕೆ—ಶರ್ವಿಲಕ, ನನ್ನ ಮಾತನ್ನು ಕೇಳುವುದಾದರೆ, ಅದನ್ನು ಆ ಮಹಾನುಭಾವನಿಗೆ ತಿರುಗಿ ಕೊಟ್ಟುಬಾ.

ಶರ್ವಿಲಕ—ಅವನು ಹೋಗಿ ಅರಸನಿಗೆ ನನ್ನ ಮೇಲೆ ದೂರು ಕೊಟ್ಟರೆ?

ಮದನಿಕೆ—ಚಂದ್ರನಿಂದ ಬಿಸಿಲು ಬರುವುದಿಲ್ಲ.

ವಸಂತಸೇನೆ—ಹೌದು, ಮದನಿಕೆ, ಹೌದು.

ಶರ್ವಿಲಕ—ಮದನಿಕೆ

ಈ ಗೆಯ್ಮೆಯಿಂದೆನಗೆ ಚಿತೆಯಿಲ್ಲ ಭಯವಿಲ್ಲ,
ಆತನಾ ಸದ್ಗುಣವ ನೀನೊರೆವುದೇಕೆ?
ಲಜ್ಜೆಯನು ಮೋಣೆನಗೆ ತಾರದೀ ಕೀಳ್ಗೆಲಸ
ಎನ್ನಂಥ ಧೂರ್ತರಿಗೆ ದೊರೆ ಮಾಳ್ಪುದೇನು? ೨೦

ಆದರೆ ನೀನು ಹೇಳುವುದು ನೀತಿವಿರುದ್ಧವಾಗಿದೆ. ಬೇರೆ ಉಪಾಯವನ್ನಾಲೋಚಿಸು.

ಮದನಿಕೆ—ಬೇರೆ ಉಪಾಯವೆಂದರೆ ಇದು.

ವಸಂತಸೇನೆ—ಬೇರೆ ಉಪಾಯ ಏನಿರಬಹುದು?

ಮದನಿಕೆ—ಆ ಗೃಹಸ್ಥನ ಬಂಧುವಿನ ನೆಪದಲ್ಲಿ ಒಡವೆಯನ್ನು ಒಡತಿಗೇ ಒಪ್ಪಿಸಿಬಿಡು.

ಶರ್ವಿಲಕ—ಹೀಗೆ ಮಾಡಿದರೆ ಏನಾಗುತ್ತದೆ?

ಮದನಿಕೆ—ನೀನು ಕಳ್ಳನಲ್ಲವೆಂದಾಗುತ್ತದೆ, ಆ ಗೃಹಸ್ಥನೂ ಋಣಮುಕ್ತನಾಗುತ್ತಾನೆ, ಒಡತಿಗೆ ತನ್ನ ಒಡವೆಯೂ ಸಿಕ್ಕುತ್ತದೆ!

ಶರ್ವಿಲಕ—ಇದಂತೂ ಅತಿಸಾಹಸವೇ ಸರಿ.

ಮದನಿಕೆ—ಎಲಾ, ಒಪ್ಪಿಸಿಬಿಡು; ಇಲ್ಲದಿದ್ದರೇನೆ ಅತಿಸಾಹಸವಾಗುವುದು.

ವಸಂತಸೇನೆ—ಭಾಪು, ಮದನಿಕೆ, ಭಾಪು! ತೊತ್ತಲ್ಲದವಳಂತೆ ಮಾತನಾಡಿರುವೆ.

ಶರ್ವಿಲಕ— ನಿನ್ನಂ ಮೇಣನುಸರಿಸು
ತ್ತಿರ್ಸ್ಪೊಳಗಂ ಯೋಗ್ಯಬುದ್ಧಿ ಮೂಡಿತ್ತೀಗಳ್
ಉತ್ಪತಚಂದ್ರಂ ತೊಲಗಿ
ಪರ್ನ್ನಂ ನಿಶಿಯೊಳಗೆ ದಾರಿದೋರ್ವಂ ವಿರಳಂ ೨೧

ಮದನಿಕೆ—ಹಾಗಾದ ಮೇಲೆ, ಇಲ್ಲಿಯೇ 'ಕಾಮದೇವಗೃಹ'ದಲ್ಲಿ ಸ್ವಲ್ಪ ಹೊತ್ತು ನಿಲ್ಲು; ನಿನ್ನ ಆಗಮನವನ್ನು ಒಡತಿಗೆ ತಿಳಿಸಿ ಬರುತ್ತೇನೆ.

ಶರ್ವಿಲಕ—ಹಾಗೆಯೇ ಆಗಲಿ.

ಮದನಿಕೆ—(ಸಮೀಪಿಸಿ) ಆರ್ಯೆ, ಚಾರುದತ್ತನ ಕಡೆಯಿಂದ ಬ್ರಾಹ್ಮಣನೊಬ್ಬನು ಬಂದಿದ್ದಾನೆ.

ವಸಂತಸೇನೆ—ಸಖಿ, ಅವನ ಕಡೆಯವನೇ ಎಂಬುದು ನಿನಗೆ ಹೇಗೆ ಗೊತ್ತು?

ಮದನಿಕೆ—ಆರ್ಯೆ, ನಮ್ಮ ಕಡೆಯವರನ್ನೂ ನಾನು ಕಾಣೆನೆ?

ವಸಂತಸೇನೆ—(ಸ್ವಗತ-ತಲೆದೂಗಿ ನಕ್ಕು) ಸರಿಯೆ. (ಪ್ರಕಾಶ) ಒಳಕ್ಕೆ ಬರಲಿ.

ಮದನಿಕೆ—ಒಡತಿಯ ಅಪ್ಪಣೆ. (ಬಂದು) ಶರ್ವಿಲಕನು ಪ್ರವೇಶಿಸಬಹುದು.

ಶರ್ವಿಲಕ—(ಸಮೀಪಿಸಿ, ಅನ್ಯಮನಸ್ಕನಾಗಿ) ಪೂಜ್ಯೆಗೆ ಮಂಗಳವಾಗಲಿ!

ವಸಂತಸೇನೆ—ಆರ್ಯ, ನಮಸ್ಕಾರ; ಆಸನದಲ್ಲಿ ಕುಳಿತುಕೊಳ್ಳಬೇಕು.

ಶರ್ವಿಲಕ—ವರ್ತಕನು ಬಿನ್ನವಿಸುತ್ತಾನೆ—'ಮನೆ ತುಂಬಾ ಹಳೆಯದಾಗಿರುವುದರಿಂದ ಈ ಗಂಟನ್ನು ಕಾಪಾಡುವುದು ಕಷ್ಟ, ಸ್ವೀಕರಿಸಬೇಕು' ಎಂದು.

(ಮದನಿಕೆಗೆ ಗಂಟನ್ನೊಪ್ಪಿಸಿ ಹೊರಡಲಣಿಯಾಗುವನು)

ವಸಂತಸೇನೆ—ಆರ್ಯ, ನಾನೂ ಒಂದು ಸುದ್ದಿಯನ್ನು ಪ್ರತಿಯಾಗಿ ಹೇಳಿ ಕಳುಹಿಸಬೇಕಾಗಿದೆ. ಅದನ್ನೂ ಕೇಳಿಕೊಂಡು ಹೋಗು.

ಶರ್ವಿಲಕ—(ಸ್ವಗತ) ಅಲ್ಲಿಗೆ ಹೋಗುವವರು ಯಾರೊ? (ಪ್ರಕಾಶ) ಪ್ರತಿಯಾಗಿ ಕಳುಹಿಸಬೇಕಾದ ಸುದ್ದಿಯೇನು?

ವಸಂತಸೇನೆ—ಆರ್ಯನು ಮದನಿಕೆಯನ್ನು ಸ್ವೀಕರಿಸಬೇಕು.

ಶರ್ವಿಲಕ—ಪೂಜ್ಯಳೆ, ನನಗೆ ಅರ್ಥವಾಗಲಿಲ್ಲ.

ವಸಂತಸೇನೆ—ನನಗೆ ಅರ್ಥವಾಗಿದೆ.

ಶರ್ವಿಲಕ—ಏನೆಂದು?

ವಸಂತಸೇನೆ—ಚಾರುದತ್ತನು ನನ್ನೊಡನೆ ಹೀಗೆ ಹೇಳಿದ್ದನು—'ಯಾರು ಈ ಒಡವೆಯನ್ನು ತಂದುಕೊಡುವನೋ ಅವನಿಗೇ ಮದನಿಕೆಯನ್ನು ಕೊಡಬೇಕು' ಎಂದು. ಆದ್ದರಿಂದ ಅವನೇ ಈಗ ಕನ್ಯಾದಾನಮಾಡುತ್ತಿರುವನೆಂದು ನೀನು ತಿಳಿಯಬೇಕು.

ಶರ್ವಿಲಕ—(ಸ್ವಗತ) ಇದೇನು! ಈಕೆಗೆ ನನ್ನ ಗುಟ್ಟೆಲ್ಲ ಗೊತ್ತಾದಂತಿದೆ! (ಪ್ರಕಾಶ) ಭಲೆ, ಚಾರುದತ್ತ, ಭಲೆ!

ಪುರುಷರ್ ಯತ್ನಮನೆಂದುಂ
ವರಗುಣಗಳನಾರ್ಜಿಪಲ್ಲಿ ಗೈವುದೆ ಯೋಗ್ಯಂ
ಪರಮದರಿದ್ರಂ ಗುಣಯುತ
ನಿರೆ ನಿಚ್ಚಂ ಮೀರ್ವನೊಡೆಯನಂ ನಿರ್ಗುಣನಂ ೨೨

ಮತ್ತು

ಗುಣದೊಳ್ ಯತ್ನಂಗೈವುದು
ಗುಣದಿಂದಪ್ರಾಪ್ಯಮಪ್ಪುದಾವುದುಮಿಲ್ಲಂ
ಗುಣದುತ್ಕರ್ಷದೆ ಚಂದಿರ-
ನಣಮುಡರ್ದಂ ಶಂಭುಶೀರ್ಷಮಂ ದುರ್ಗಮಮಂ ೨೩

ವಸಂತಸೇನೆ—ಏ, ಬಂಡಿಯವನು ಯಾರು?

(ಬಂಡಿಯೊಡನೆ ಪ್ರವೇಶ)

ಚೇಟ—ಆರ್ಯೆ, ಬಂಡಿ ಸಿದ್ಧವಾಗಿದೆ.

ವಸಂತಸೇನೆ—ಸಖಿ, ಮದನಿಕೆ, ಇತ್ತ ನನ್ನನ್ನು ಸರಿಯಾಗಿ ನೋಡು. ನಿನ್ನನ್ನು ಈತನಿಗೆ ಕೊಟ್ಟಿರುವೆ. ಬಂಡಿಯನ್ನು ಹತ್ತು. ನನ್ನನ್ನು ನೆನೆಯುವೆಯಷ್ಟೆ!

ಮದನಿಕೆ—(ಅಳುತ್ತ) ಒಡತಿ ನನ್ನನ್ನು ಪರಿತ್ಯಾಗ ಮಾಡಿಬಿಟ್ಟಳು! (ಕಾಲಿಗೆ ಬೀಳುವಳು)

ವಸಂತಸೇನೆ—ಈಗ ನೀನೇ ನನಗೆ ನಮಸ್ಕಾರಾರ್ಹಳಾಗಿರುವೆ. ಹೋಗಮ್ಮಾ. ಬಂಡಿಯನ್ನು ಹತ್ತು. ನನ್ನ ನೆನಪಿರಲಿ.

ಶರ್ವಿಲಕ—ನಿನಗೆ ಮಂಗಳವಾಗಲಿ! ಮದನಿಕೆ-

ನಡೆ ನೋಡೀಕೆಯನಿದಿರೊಳ್
ಮುಡಿವಾಗುತೆ ವಂದಿಸೀಕೆಯಂ ಸ್ವಾಮಿನಿಯಂ
ಪಡೆಯಲ್ ಕಠಿಣಮನಾ
ಮಡದಿಯ ಪಡಿವೆಸರ ಮುಸುಕನವಳಿಂ ಪಡೆದಯ್ ೨೪

(ಮದನಿಕೆಯೊಡನೆ ಬಂಡಿಯೇರಿ ಹೋಗಲಾರಂಭಿಸುವನು)

(ನೇಪಥ್ಯದಲ್ಲಿ)

"ಓ, ಯಾರವರು? ರಕ್ಷಣಾಧ್ಯಕ್ಷನ ಅಪ್ಪಣೆಯಾಗಿದೆ—ಗೋಪಾಲನ ಮಗನಾದ ಆರ್ಯಕನು ರಾಜನಾಗುವನೆಂಬ ಸಿದ್ಧರ ಆದೇಶವನ್ನು ಕೇಳಿ ಉದ್ವಿಗ್ನನಾದ ಪಾಲಕಮಹಾರಾಜನು ಅವನನ್ನು ಗೊಲ್ಲರ ಹಳ್ಳಿಯಿಂದ ಹಿಡಿದು ತಂದು ಇಲ್ಲಿ ಸೆರೆಮನೆಯಲ್ಲಿಟ್ಟದ್ದಾನೆ. ಪ್ರತಿಯೊಬ್ಬರೂ ಅವರವರ ಕೆಲಸದಲ್ಲಿ ತುಂಬಾ ಜಾಗರೂಕರಾಗಿರಬೇಕು."

ಶರ್ವಿಲಕ—(ಕೇಳಿ) ಏನು, ಏನು? ನನ್ನ ಪ್ರಿಯಮಿತ್ರನಾದ ಆರ್ಯಕನನ್ನು ಈ ಪಾಲಕರಾಜನು ಸೆರೆಹಾಕಿರುವನೆ? ಹೆಂಡತಿಯನ್ನೂ ಕಟ್ಟಿಕೊಂಡು ಜೇರೆ ಹೊರಟಿರುವೆನಲ್ಲಾ! ಅಯ್ಯೋ ಕಷ್ಟ! ಅಥವಾ—

ಇಳೆಯೊಳ್ ಪ್ರಿಯತಮರಿರ್ವರೆ
ಕೆಳೆಯಂ ಮೇಣ್ ವನಿತೆಯಂತೆ ಪುರುಷರ್ಗೆಂದುಂ
ತೊಳಗುವ ನೂರ್ ವನಿತೆಯರಿಂ
ಬಳಿಕೀಗಳ್ ಕೆಳೆಯನೀತನಿಷ್ಟತಮಂ ತಾಂ ೨೫

ಆದ್ದರಿಂದ ಇಳಿದು ಬಿಡುತ್ತೇನೆ.

ಮದನಿಕೆ—(ಕಣ್ಣೀರಿನೊಡನೆ ಕೈಜೋಡಿಸಿಕೊಂಡು) ಹೀಗೆಯೇ ಸರಿ. ಆದ್ದರಿಂದ ಆರ್ಯಪುತ್ರನು ನನ್ನನ್ನು ಹಿರಿಯರ ಸಮೀಪದಲ್ಲಿ ಬಿಟ್ಟು ಹೋಗಬೇಕು.

ಶರ್ವಿಲಕ—ಪ್ರಿಯೆ, ಒಪ್ಪಿದೆ. ನನ್ನ ಮನಸ್ಸಿಗನುಗುಣವಾಗಿ ಹೇಳಿರುವೆ. (ಚೇಟನನ್ನು ಕುರಿತು) ಅಪ್ಪಾ, ರೇಭಿಲಸೆಂಬ ವರ್ತಕನ ಮನೆ ಗೊತ್ತೇನಪ್ಪಾ ?

ಚೇಟ—ಓ, ಗೊತ್ತು.

ಶರ್ವಿಲಕ—ಈ ಪ್ರಿಯೆಯನ್ನು ಅಲ್ಲಿಗೆ ಕಳುಹಿಸಿಕೊಡು.

ಚೇಟ—ಆರ್ಯನ ಅಪ್ಪಣೆ.

ಮದನಿಕೆ—ಆರ್ಯಪುತ್ರನು ಹೇಳುವಂತೆಯೇ ಆಗಲಿ. ಆರ್ಯಪುತ್ರನು ಬಹಳ ಜಾಗರೂಕನಾಗಿರಬೇಕೆಂದು ಕೋರುತ್ತೇನೆ.(ನಿಷ್ಕ್ರಮ)

ಶರ್ವಿಲಕ—ಈಗ ನಾನು—

ಜ್ಞಾತಿವಿಟಜನರನ್ನು ಭುಜವಿಜಿತವೀರ್ಯರನು
ರಾಜನನ್ಯಾಯದಿಂದೆ ಜೆಂದ ಭೃತ್ಯರನು ;
ಗೆಳೆಯನಾ ಬಿಡುಗಡೆಗೆ ಉತ್ತೇಜನಂಗೊಳಿಪೆ
ಯೌಗಂಧರಾಯಣನವೋಲ್ ವತ್ಸನೃಪನ. ೨೬

ಮತ್ತು

ನೆವಮಿಲ್ಲದೆ ಅರಿನೀಚರ್
ತವೆ ತಮ್ಮಯ ಭಯವೆ ಪಿಡಿದ ವರಮಿತ್ರನನಾಂ
ಪವಣಿಂದೈದುತೆ ವಹಿಲದೆ
ತವೆ ಬಿಡಿಪೆಂ ರಾಹುವದನದಿಂ ಶಶಿಯನೆನಲ್ ೨೭

(ನಿಷ್ಕ್ರಮ—ಶರ್ವಿಲಕ)

(ಪ್ರವೇಶ—ಚೇಟ)

ಚೇಟ—ಆರ್ಯೆ, ನಿನಗೆ ಜಯವಾಗಲಿ. ಆರ್ಯ ಚಾರುದತ್ತನ ಕಡೆಯಿಂದ ಒಬ್ಬ ಬ್ರಾಹ್ಮಣನು ಬಂದಿರುವನು.

ವಸಂತಸೇನೆ—ಇದೆಂತಹ ರಮಣೀಯವಾದ ದಿವಸ! ಅವನನ್ನು ಆದರದಿಂದ ನಮ್ಮ ಚಾರನ ಜತೆಯಲ್ಲಿ ಮನೆಯನ್ನೆಲ್ಲಾ ತೋರಿಸಿ, ಒಳಕ್ಕೆ

ಬರಮಾಡು.

ಚೇಟಿ—ಅಪ್ಪಣೆ. (ನಿಷ್ಕ್ರಮ)

(ಪ್ರವೇಶ—ವಿದೂಷಕ ಮತ್ತು ವಸಂತಸೇನೆಯ ಚಾರ)

ವಿದೂಷಕ—ಅಬ್ಬಾ, ಏನಾಶ್ಚರ್ಯ! ತುಂಬಾ ತಪಸ್ಸಿನ ಕ್ಲೇಶದ ಫಲವಾಗಿ ಮಾತ್ರ ರಾಕ್ಷಸರಾಜನಾದ ರಾವಣನಿಗೆ ಪುಷ್ಪಕವಿಮಾನದಲ್ಲಿ ಹೋಗುವ ಯೋಗ ದೊರೆಯಿತು. ಈ ಬ್ರಾಹ್ಮಣನಿಗೆ ತಪಸ್ಸಿನ ಕ್ಲೇಶವೊಂದೂ ಇಲ್ಲದೆಯೇ ನರನಾರಿಯರೊಡನೆ ಹೋಗುವ ಯೋಗ ಬಂದಿದೆ!

ಚೇಟಿ—ಆರ್ಯನು ನಮ್ಮ ಮನೆಯಬಾಗಿಲನ್ನು ನೋಡಬೇಕು.

ವಿದೂಷಕ—(ನೋಡಿ, ವಿಸ್ಮಯದಿಂದ) ಅಹಾ, ವಸಂತಸೇನೆಯ ಮನೆಬಾಗಿಲು ಎಷ್ಟು ಸುಂದರವಾಗಿದೆ! ನೀರನ್ನು ಚಿಮುಕಿಸಿ, ಉಜ್ಜಿ, ಅನಂತರ ಹಸಿರಿಂದ ಲೇಪಿಸಲಾಗಿದೆ. ನೆಲವೆಲ್ಲ ಬಗೆಬಗೆಯ ಪರಿಮಳ ಪುಷ್ಪೋಪ ಹಾರಗಳಿಂದ ಚಿತ್ರಿತವಾಗಿದೆ. ಗಗನತಲವನ್ನು ನೋಡುವ ಕೌತುಕ ದಿಂದ ತಲೆಯೆತ್ತಿ ಬಾಗಿರುವಂತಿದೆ. ಇಲ್ಲಿ ಅಂದವಾಗಿ ತೂಗಾಡುತ್ತಿ ರುವ ಮಲ್ಲಿಗೆಯ ಮಾಲೆ ಐರಾವತದ ಸೊಂಡಿಲೆಂಬ ಭ್ರಾಂತಿ ಯನ್ನುಂಟುಮಾಡುತ್ತಿದೆ. ಆನೆಯ ದಂತದಿಂದಲೇ ಮಾಡಿದ ಉನ್ನತ ತೋರಣದಿಂದ ಶೋಭಿಸುತ್ತಿದೆ. ಅನೇಕ ಮಂಗಳ ಧ್ವಜಗಳಿಂದ ಅಲಂಕೃತವಾಗಿದೆ. ಈ ಧ್ವಜಗಳು ಮಹಾರತ್ನಗಳ ಕಾಂತಿಯಿಂದ ಹೊಳೆಯುತ್ತಾ, ಗಾಳಿಯಲ್ಲಿ ತೂಗಾಡುತ್ತಿರುವ ಬಟ್ಟೆಗಳ ಮೂಲಕ ತುದಿಗೈಯಿಂದ 'ಇತ್ತಬಾಪ್ಪ' ಎಂದು ನನಗೆ ಸನ್ನೆ ಮಾಡುತ್ತಿರುವಂತೆ ತೋರುತ್ತವೆ. ಎರಡು ಪಕ್ಕಗಳಲ್ಲಿಯೂ ಸ್ಫಟಿಕ ನಿರ್ಮಿತವಾದ ಮಂಗಳಕಲಶಗಳು ತೋರಣದ ಆಧಾರಸ್ತಂಭಗಳ ವೇದಿಕೆಗಳ ಮೇಲೆ ರಾಜಿಸುತ್ತಿವೆ; ಆ ವೇದಿಕೆಗಳಲ್ಲೂ ಹಸಿರು ಮಾವಿನೆಲೆಗಳನ್ನು ಎಷ್ಟು ಅಂದವಾಗಿ ಕೆತ್ತಿ ಬಿಡಿಸಿದ್ದಾರೆ! ಚಿನ್ನದ ಬಾಗಿಲಿನಲ್ಲಿ ವಜ್ರಗಳನ್ನು ಎಡೆಬಿಡದೆ ಮೆಟ್ಟಿರುವುದರಿಂದ ಮಹಾರಾಕ್ಷಸನ ವಕ್ಷಃಸ್ಥಲದಂತೆ ದುರ್ಭೇದ್ಯವಾಗಿದೆ. ಬಡವರ ಆಸೆಯನ್ನು ಪೀಡಿಸುವಂತಿದೆ. ನಿಜ ವಾಗಿಯೂ, ಉದಾಸೀನರಾದ ಜನರ ಕಣ್ಣನ್ನೇ ಬಲವಂತವಾಗಿ

ಸೆಳೆಯುತ್ತದೆ.

ಚೇಟಿ—ಇತ್ತ ಬರಬೇಕು. ಆರ್ಯನು ಈ ಮೊದಲನೆಯ ಅಂಗಳವನ್ನು ಪ್ರವೇಶಿಸಬೇಕು.

ವಿದೂಷಕ—ಅಬ್ಬಾ! ಇದೇ ಮೊದಲನೆಯ ಅಂಗಳ. ಶಶಿ, ಶಂಖ, ಮೃಣಾಲಗಳೇಯೋ ಎನ್ನುವಂತೆ ಬೆಳ್ಳಗೆ ಸುಣ್ಣ ಹಚ್ಚಿರುವ ಈ ಪ್ರಾಸಾದಪಂಕ್ತಿಗಳೇನು! ಬಗೆಬಗೆಯ ರತ್ನಗಳಿಂದ ಮೆಟ್ಟಿದ ಈ ಕಾಂಚನ ಸೋಪಾನಗಳೇನು! ಸ್ಫಟಿಕದ ಕಿಟಕಿಗಳೆಂಬ ಚಂದ್ರಮುಖಗಳಿಂದ ಮಂದಿರಗಳೇ ಉಜ್ಜಯಿನಿಯನ್ನು ನೋಡುತ್ತಿವೆಯೋ ಎನಿಸುತ್ತದೆ. ಶ್ರೋತ್ರಿಯನಂತೆ ಸುಖವಾಗಿ ಕುಳಿತಲ್ಲಿಯೇ ಈ ಬಾಗಿಲುಕಾಯುವವವನು ನಿದ್ದೆ ಮಾಡುತ್ತಿದ್ದಾನೆ. ಅಚ್ಚ ಸಣ್ಣಕ್ಕಿ ಅನ್ನವನ್ನು ಮೊಸರಲ್ಲಿ ಕಲಸಿಟ್ಟದ್ದರೆ, ಸುಣ್ಣದ ಬಣ್ಣದ ಭ್ರಮೆಯಿಂದ ಕಾಗೆಗಳು ತಿನ್ನುತ್ತಿಲ್ಲ! ಮುಂದೆ ತೋರಿಸಮ್ಮಾ!

ಚೇಟಿ—ಇತ್ತ ಬರಬೇಕು. ಇದು ಎರಡನೆಯ ಅಂಗಳ. ಆರ್ಯನು ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡುತ್ತ) ಆಶ್ಚರ್ಯ! ಈ ಎರಡನೆಯ ಅಂಗಳದಲ್ಲಿ ಗಾಡಿ ಎತ್ತುಗಳನ್ನು ಕಟ್ಟಿದ್ದಾರೆ. ಅವೂ ಒಳ್ಳೆಯ ಹುಲ್ಲು ಮೇವುಗಳಿಂದ ಎಷ್ಟು ಕೊಬ್ಬಿವೆ! ಕೋಡಿಗೆಲ್ಲಾ ಎಣ್ಣೆ ತಿಕ್ಕಿರುವುದರಿಂದ ಹೊಳೆಯುತ್ತಿವೆ. ಓ, ಇತ್ತ ಈ ಎಮ್ಮೆ ಅವಮಾನಿತನಾದ ಮಹಾನುಭಾವನಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಿದೆ! ಕಾಳಗ ಮುಗಿದ ಮೇಲೆ ಇತ್ತ ಗಂಡು ಕುರಿಯ ಕುತ್ತಿಗೆಯನ್ನು ಜಟ್ಟಿಯ ಕುತ್ತಿಗೆಯಂತೆಯೇ ಎಣ್ಣೆಯಿಂದ ಮರ್ದಿಸುತ್ತಿದ್ದಾರೆ! ಓ, ಈ ಕಡೆ ಕುದುರೆಗಳ ಕೂದಲನ್ನು ಕತ್ತರಿಸಿ ಅಂದಮಾಡುತ್ತಿದ್ದಾರೆ! ಅರೇ, ಈ ಕೊಟ್ಟಿಗೆಯಲ್ಲಿ ಕಳ್ಳನಂತೆ ಕೋತಿಯನ್ನು ಗಟ್ಟಿಯಾಗಿ ಕಟ್ಟಿಹಾಕಿದ್ದಾರೆ. (ಇನ್ನೊಂದೆಡೆ ನೋಡಿ) ಹೋ, ಇಲ್ಲಿ ಮಾವಟಿಗರು ಆನೆಗೆ ತುಪ್ಪದಲ್ಲಿ ಕಲಸಿದ ಅನ್ನದ ಮುದ್ದೆಯನ್ನು ಕೊಡುತ್ತಿದ್ದಾರೆ. ಮುಂದೆ ತೋರಿಸಮ್ಮಾ!

ಚೇಟಿ—ಇತ್ತ ಇತ್ತ ಬರಬೇಕು. ಇದು ಮೂರನೆಯ ಅಂಗಳ. ಆರ್ಯನು

ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡಿ) ಆಶ್ಚರ್ಯವೇ ಸರಿ! ಈ ಮೂರನೆಯ ಅಂಗಳದಲ್ಲಿ ಕುಲಪುತ್ರರು ಕುಳಿತುಕೊಳ್ಳುವುದಕ್ಕೆ ಇಷ್ಟೆಲ್ಲ ಆಸನ ಗಳನ್ನಿಟ್ಟಿದ್ದಾರೆ. ವ್ಯಾಸಪೀಠದಲ್ಲಿ ಅರ್ಧ ಓದಿದ ಪುಸ್ತಕ ಹಾಗೆಯೇ ಇವೆ. ಅರೇ, ವ್ಯಾಸಂಗಪೀಠಕ್ಕೆ ಪಚ್ಚೆಯ ಗಿಳಿಯನ್ನು ಜೇರಿ ಜೋಡಿ ಸಿದ್ದಾರೆ. ಇಲ್ಲೆಲ್ಲ ಕಾಮತಂತ್ರದ ಸಂಧಿವಿಗ್ರಹ ಚಾತುರ್ಯದ ಗಣಿಕೆಯರೂ ವೃದ್ಧವಿಟರೂ ಬಣ್ಣಬಣ್ಣಗಳಿಂದ ಬರೆದ ಚಿತ್ರ ಗಳನ್ನು ಕೈಯಲ್ಲಿ ಹಿಡಿದು ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದಾರೆ! ಮುಂದೆ ತೋರಿಸಮ್ಮಾ!

ಚೇಟಿ—ಇತ್ತ ಬರಬೇಕು. ಇದೇ ನಾಲ್ಕನೆಯ ಅಂಗಳ. ಆರ್ಯನು ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡುತ್ತ) ಆಶ್ಚರ್ಯ! ಈ ನಾಲ್ಕನೆಯ ಅಂಗಳ ದಲ್ಲಿ ಯುವತಿಯರು ಕೈಯಿಂದ ಮೃದಂಗಗಳನ್ನು ಬಾರಿಸುತ್ತಿದ್ದರೆ, ಮೋಡಗಳು ಗಂಭೀರವಾಗಿ ಗುಡುಗುವಂತಿದೆ. ಪುಣ್ಯ ಕ್ಷೀಣಿಸಿದ ಕಾರಣ ಆಕಾಶದಿಂದ ಕೆಳಕ್ಕೆ ಬೀಳುವ ತಾರೆಗಳಂತೆ ಕಂಚಿನ ತಾಳ ಗಳು 'ಝುಣ್' ಎಂದುಬೀಳುತ್ತಿವೆ. ದುಂಬಿಯ ಝೇಂಕಾರದಂತೆ ಮಧುರವಾಗಿ ಕೊಳಲನ್ನೂದುತ್ತಿದ್ದಾರೆ. ಇತ್ತ ಕಡೆಯೆ ಅಸೂಯೆ ಯಿಂದ ಪ್ರಣಯಕುಪಿತಳಾದ ಕಾಮಿನಿಯನ್ನೋ ಎನ್ನುವಂತೆ ವೀಣೆ ಯನ್ನು ತೊಡೆಯಮೇಲೇರಿಸಿಕೊಂಡು, ಉಗುರುತುದಿಯಿಂದ ನೇವ ರಿಸಿ, ಪ್ರತಿಮಾಡುತ್ತಿದ್ದಾರೆ. ಇತ್ತ ನೋಡಿದರೆ, ಕುಸುಮರಸದಿಂದ ಮತ್ತೇರಿದ ಹೆಣ್ದುಂಬಿಗಳಂತಿರುವ ವೇಶ್ಯಾಂಗನೆಯರನ್ನು ಅತಿ ಮಧುರವಾಗಿ ಹಾಡಿಸುತ್ತಾ, ನರ್ತನ ಮಾಡಿಸುತ್ತಾ, ಶೃಂಗಾರ ನಾಟ್ಯವನ್ನು ಕಲಿಸುತ್ತಾ ಇದ್ದಾರೆ. ಇತ್ತ ಕಿಟಕಿಗಳಲ್ಲಿ ಗಡಿಗೆಗಳನ್ನು ಗಾಳಿ ತುಂಬಿಕೊಳ್ಳುವಂತೆ ನೇತುಬಿಟ್ಟಿದ್ದಾರೆ! ಮುಂದೆ ತೋರಿ ಸಮ್ಮಾ!

ಚೇಟಿ—ಆರ್ಯನು ಇತ್ತ ಬರಬೇಕು. ಇದು ಐದನೆಯ ಅಂಗಳ! ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡಿ) ಅಹಹಾ! ಈ ಐದನೆಯ ಅಂಗಳದಲ್ಲಿ ಬಡವರ ಆಸೆಯನ್ನು ಕೆರಳಿಸುವಂತೆ ಇಂಗು ಎಣ್ಣೆಗಳ ಗಾಢವಾದ ಪರಿಮಳವೆಸಗುತ್ತಿದೆ. ನಿತ್ಯವೂ ಉರಿಯುತ್ತಿರುವ ಅಡಿಗೆಮನೆಯ ಬಾಗಿಲೆಂಬ ಬಾಯಿಂದ ಹೊರಬೀಳುತ್ತಿರುವ ವಿವಿಧಸುಗಂಧಧೂಮ ಗಳಿಂದ ನಿಟ್ಟುಸಿರುಬಿಡುವಂತಿದೆ. ಅಡಿಗೆ ಮಾಡುತ್ತಿರುವ ನಾನಾ ಭಕ್ಷ್ಯಭೋಜ್ಯಗಳ ಪರಿಮಳ ನನ್ನನ್ನು ತುಂಬಾ ಬಾಯಿಬಿಡಿಸುತ್ತಿದೆ. ಓ, ಇಲ್ಲಿ ಕಟುಕರ ಹುಡುಗನು ಹಳೆಯ ಬಟ್ಟೆಯೋ ಎನ್ನುವಂತೆ ಹತಪಶುವಿನ ಮಾಂಸವನ್ನು ತೊಳೆಯುತ್ತಿದ್ದಾನೆ. ಅಡಿಗೆಯವನು ಬಗೆಬಗೆಯ ಮಾದರಿಯ ತಿನಿಸುಗಳನ್ನು ಸಿದ್ಧಮಾಡುತ್ತಿದ್ದಾನೆ. ಸಿಹಿಗಡಬುಗಳನ್ನು ಕೂಡಿಸುತ್ತಿದ್ದಾರೆ! ಬಿಸಿಕಡುಬುಗಳನ್ನು ಬೇಯಿ ಸುತ್ತಿದ್ದಾರೆ. (ಸ್ವಗತ) ಅಹಾ, 'ಇವತ್ತು ಇಲ್ಲಿ ವಿಶೇಷ; ಇಲ್ಲಿಯೇ ಊಟಕ್ಕೇಳು' ಎಂದು ನನಗೂ ಕಾಲ್ತೊಳೆಯಲು ನೀರನ್ನು ಕೊಟ್ಟಾ ರೆಯೇ! (ಇನ್ನೊಂದು ಕಡೆ ನೋಡಿ) ಇತ್ತ ವಿವಿಧಾಲಂಕಾರಗಳಿಂದ ಶೋಭಿಸುವ ಗಣಿಕೆಯರಿಂದಲೂ ಚಾರರಿಂದಲೂ ತುಂಬಿದ ಇದು ಗಂಧರ್ವರಿಂದಲೂ ಅಪ್ಸರೆಯರಿಂದಲೂ ಕೂಡಿದ ಸ್ವರ್ಗವೇ ಎಂದು ನಿಜವಾಗಿಯೂ ಎನಿಸುತ್ತದೆ. ಎಲೈ, ನಿಮಗೆ 'ಬಂಧುಲ' ರೆಂಬ ಹೆಸರೇಕೆ ಬಂದಿದೆ?

ಬಂಧುಲರು—ನಾವೇ?—

ಪರಪುರುಷರ್ಕಳ್‌ ಪುಟ್ಟಿಸೆ
ಪರನಾರಿಯರೊಳಗೆ ಪರರ ಗೃಹದೊಳ್‌ ಬೆಳೆದುಂ
ಪರಿಪೋಷಿಸೆ ಪರರನ್ನಂ
ಪರಧನರತರಾನೆಮರಿಯವೊಲ್‌ ಸಂಪನ್ನರ್ ೨೮

ವಿದೂಷಕ—ಮುಂದೆ ತೋರಿಸಮ್ಮ!

ಚೇಟಿ—ಆರ್ಯನು ಇತ್ತ ಬರಬೇಕು. ಇದು ಆರನೆಯ ಅಂಗಳ. ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡುತ್ತ) ಆಶ್ಚರ್ಯವೇ ಸರಿ. ಈ ಆರನೆಯ ಅಂಗಳದಲ್ಲಿ ಚಿನ್ನ, ವಜ್ರಗಳಿಂದಲೇ ಮಾಡಿದ, ನೀಲರತ್ನಗಳಿಂದ

ಕೆತ್ತಿದ. ಈ ತೋರಣಶಿಲ್ಪಗಳು ಕಾಮನ ಬಿಲ್ಲಿನ ನೆಲೆಯಂತೆ ಕಾಣಿಸುತ್ತವೆ. ವೈಡೂರ್ಯ, ಮುತ್ತು, ಹವಳ, ಪುಷ್ಯರಾಗ, ಇಂದ್ರನೀಲ, ಕರ್ಕೇತರ, ಪದ್ಮರಾಗ, ಮರಕತ ಮುಂತಾದ ವಿವಿಧ ರತ್ನಗಳನ್ನೆಲ್ಲ ಇಲ್ಲಿ ಶಿಲ್ಪಿಗಳು ವಿಮರ್ಶಿಸುತ್ತಿದ್ದಾರೆ. ಮಾಣಿಕ್ಯಗಳನ್ನು ಬಂಗಾರದಲ್ಲಿ ಕುಂದಣವಿಡುತ್ತಿದ್ದಾರೆ. ಚಿನ್ನದ ಒಡವೆಗಳನ್ನು ಮಾಡುತ್ತಿದ್ದಾರೆ. ಕೆಂಪುದಾರಗಳಲ್ಲಿ ಮುತ್ತಿನ ಆಭರಣಗಳನ್ನು ಪೋಣಿಸುತ್ತಿದ್ದಾರೆ. ಮೆಲ್ಲನೆ ವೈಡೂರ್ಯಗಳಿಗೆ ಸಾಣೆ ಕೊಡುತ್ತಿದ್ದಾರೆ. ಶಂಖಗಳನ್ನು ಕತ್ತರಿಸುತ್ತಿದ್ದಾರೆ. ಸಾಣೆಕಲ್ಲುಗಳ ಮೇಲೆ ಹವಳಗಳಿಗೆ ಮಿರುಗು ಕೊಡುತ್ತಿದ್ದಾರೆ. ಹಸಿ ಕುಂಕುಮವನ್ನು ಲೇಪಿಸಿದ ಕಲ್ಲುಗಳನ್ನು ಬಿಸಿಲಲ್ಲಿ ಒಣಗಿಸುತ್ತಿದ್ದಾರೆ. ಕಸ್ತೂರಿಯನ್ನು ನೆನೆಯಿಸುತ್ತಿದ್ದಾರೆ. ಬೇಕಾದಂತೆ ಚಂದನರಸವನ್ನು ಹಿಂಡುತ್ತಿದ್ದಾರೆ. ಬಗೆಬಗೆಯ ಗಂಧಗಳನ್ನು ಕಲಸುತ್ತಿದ್ದಾರೆ. ವೇಶ್ಯಾಕಾಮುಕರಿಗೆ ಕರ್ಪೂರತಾಂಬೂಲವನ್ನು ಕೊಡುತ್ತಿದ್ದಾರೆ. ಕಡೆಗಣ್ಣುಗಳಿಂದ ನೋಟಗಳನ್ನು ಬೀರುತ್ತಿದ್ದಾರೆ. ನಗೆ ಹಬ್ಬುತ್ತಿದೆ. ಹರ್ಷಧ್ವನಿಗಳಿಂದ ಮಧುಪಾನ ಮಾಡುತ್ತಿದ್ದಾರೆ. ಇಲ್ಲಿ ಚೇಟರು, ಇಲ್ಲಿ ಚೇಟಿಯರು, ಇಲ್ಲಿ ಹೆಂಡಿರು, ಮಕ್ಕಳು, ಐಶ್ವರ್ಯ, ಎಲ್ಲವನ್ನೂ ಬಿಟ್ಟು ಬಂದಿರುವ ಮನುಷ್ಯರು, ಇವರೆಲ್ಲರೂ ಗಣಿಕೆಯರು ಕುಡಿದು ಪಾನಪಾತ್ರೆಗಳನ್ನು ಬಿಟ್ಟು ಹೋದೊಡನೆ, ಸ್ವೇಚ್ಛೆಯಾಗಿ ಮಧುವನ್ನು ಸೇವಿಸುತ್ತಿದ್ದಾರೆ. ಮುಂದೆ ತೋರಿಸಮ್ಮಾ!

ಚೇಟಿ—ಆರ್ಯನು ಇತ್ತ ಬರಬೇಕು. ಇದು ಏಳನೆಯ ಅಂಗಳ. ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡುತ್ತ) ಏನಾಶ್ಚರ್ಯ! ಈ ಏಳನೆಯ ಅಂಗಳದಲ್ಲಿ ಪಾರಿವಾಳದ ಜೋಡಿಗಳು ತಮ್ಮ ತಮ್ಮ ಗೂಡುಗಳಲ್ಲಿ ಸುಖವಾಗಿ ಕುಳಿತು ಪರಸ್ಪರ ಚುಂಬನದಲ್ಲಿ ಸೊಗಸಾಗಿ ಕಾಲ ಕಳೆಯುತ್ತಿವೆ. ಹೊಟ್ಟೆತುಂಬ ಮೊಸರನ್ನ ಸಿಕ್ಕಿದ ಬ್ರಾಹ್ಮಣನಂತೆ ಪಂಜರದ ಗಿಳಿ ಸೂಕ್ತಗಳನ್ನು ಪಠಿಸುತ್ತಿವೆ. ಇತ್ತ ಸದರ ಸಿಕ್ಕಿ ಹೆಚ್ಚಿಕೊಂಡ ದಾಸಿಯಂತೆ ಬಹಳ 'ಕುರುಕುರು' ಎಂದು ಕೂಗುತ್ತಿದೆ

ಈ ಸಾರಿಕೆ. ಈ ಕೋಗಿಲೆ ಅನೇಕ ಫಲಗಳ ರಸಾಸ್ವಾದದಿಂದ ಹರ್ಷಗೊಂಡು ಇಂಚರದಿಂದ ಹಾಡುತ್ತಿದೆ-ಕಾಮ ದೂತಿಯಂತೆ. ಆನೆಯ ದಂತಗಳಿಂದ ಅನೇಕ ಪಂಜರಗಳನ್ನು ಇಳಿಯಬಿಟ್ಟಿದ್ದಾರೆ. ಲಾವಕಪಕ್ಷಿಗಳನ್ನು ಯುದ್ಧಮಾಡಿಸುತ್ತಿದ್ದಾರೆ. ಕಪಿಂಜಲಗಳನ್ನು ನುಡಿಸುತ್ತಿದ್ದಾರೆ. ಪಂಜರಕಪೋತಗಳನ್ನು ಹಾರಿಸುತ್ತಿದ್ದಾರೆ. ಅನೇಕ ರತ್ನಗಳಿಂದ ಅಲಂಕೃತವಾದಂತಿರುವ ಈ ಸಾಕುನವಿಲು ಹರ್ಷದಿಂದ ನರ್ತನಮಾಡುತ್ತಾ ಉರಿಬಿಸಿಲಿನಲ್ಲಿ ಬೆಂದ ಮಾಳಿಗೆಗೆ ತನ್ನ ಪಕ್ಕಗಳೆಂಬ ಬೀಸಣಿಗೆಗಳಿಂದ ಗಾಳಿ ಹಾಕುತ್ತಿರುವಂತಿದೆ. (ಮತ್ತೊಂದೆಡೆ ತಿರುಗಿ) ಚಂದ್ರಕಿರಣಗಳನ್ನೇ ರಾಶಿ ಮಾಡಿಟ್ಟಂತಿರುವ ಈ ರಾಜಹಂಸಮಿಥುನಗಳು ಕಾಮಿನಿಯರ ಹಿಂದೆ ಹಿಂದೆಯೇ ಅಡಿಯಿಡುತ್ತಿವೆ, ಅವರ ನಡೆಯನ್ನು ಕಲಿಯುವಾಸೆಯಿಂದಲೋ ಎಂಬಂತೆ. ಇತ್ತ ಮುದಿ ಕಂಚುಕಿಗಳಂತೆ ಸಾರಸಗಳು ಅಲ್ಲಿಂದಿಲ್ಲಿಗೆ ಸುಳಿದಾಡುತ್ತಿವೆ. ಆಶ್ಚರ್ಯವೇ ಇದು! ಈ ನಾನಾ ಪಕ್ಷಿಸಮೂಹಗಳಿಂದ ತುಂಬಿರುವ ಒಂದು ಇಡಿಯ ಅಂತಸ್ತನ್ನೇ ಗಣಿಕೆ ಮಾಡಿಸಿರುವಳಲ್ಲಾ! ನಿಜವಾಗಿಯೂ ಗಣಿಕಾಗೃಹ ನನಗೆ ನಂದನವನವೇ ಎನಿಸುತ್ತಿದೆ. ಮುಂದೆ ತೋರಿಸಮ್ಮಾ!

ಚೇಟಿ—ಆರ್ಯನು ಇತ್ತ ಇರಬೇಕು. ಇದು ಎಂಟನೆಯ ಅಂಗಳ. ಆರ್ಯನು ಒಳಕ್ಕೆ ದಯಮಾಡಿಸಬೇಕು.

ವಿದೂಷಕ—(ಪ್ರವೇಶಿಸಿ, ನೋಡಿ) ಪೂಜ್ಯಳೆ, ಇವನಾರು? ಒಳ್ಳೆಯ ರೇಷ್ಮೆಯನ್ನುಟ್ಟು, ಅತ್ಯದ್ಭುತವೂ ಅತ್ಯಧಿಕವೂ ಆದ ಅಲಂಕಾರಗಳಿಂದ ಶೋಭಿಸುತ್ತಾ, ಅಂಗಭಂಗಿಗಳಿಂದ ತಡವರಿಸಿಕೊಂಡು ಇಲ್ಲಿಂದಲ್ಲಿಗೆ ನಡೆಯುತ್ತಿರುವವನು?

ಚೇಟಿ—ಆರ್ಯ, ಇವನು ಒಡತಿಯ ಸೋದರ.

ವಿದೂಷಕ—ವಸಂತಸೇನೆಯ ಸೋದರನಾಗಲು ಎಷ್ಟು ತಪಸ್ಸು ಮಾಡಬೇಕು! ಅಥವಾ—

ಸರಿಯಲ್ತಿದು ಸುಂದರನಾ
ಗಿರೆಯುಂ ಬಹುಗಂಧಮಾಲ್ಯದಿಂದುಜ್ವಲನುಂ

ಪರಿವರ್ಜಿತನೀತಂ ದಲ್
ನರರಿಂ ಸುಡುಗಾಡೊಳಿರ್ಪ ಸಂಪಿಗೆಮರದೊಲ್ ೨೯

(ಇನ್ನೊಂದೆಡೆ ನೋಡಿ) ಅಮ್ಮಾ, ಈಕೆ ಯಾರು? ಹೂಹೂವಿನ ಸೀರೆಯನ್ನುಟ್ಟು, ಎಣ್ಣೆಯಿಂದ ಹೊಳೆಯುವ ಕಾಲ್ಗಳನ್ನು ಪಾದರಕ್ಷೆಗಳಲ್ಲಿಟ್ಟು, ಉಚ್ಚಾಸನದಲ್ಲಿ ಕುಳಿತಿರುವವಳು?

ಚೇಟಿ—ಈಕೆಯೇ ನಮ್ಮ ಒಡತಿಯ ತಾಯಿ.

ವಿದೂಷಕ—ಅಬ್ಬಬ್ಬಾ, ಈ ಡಾಕಿನಿಯ ಹೊಟ್ಟೆ ಎಷ್ಟು ದೊಡ್ಡದಾಗಿದೆ! ದೊಡ್ಡ ಶಿವಲಿಂಗದಂತೆ ಇವಳನ್ನು ಮೊದಲು ಒಳಗಿರಿಸಿಕೊಂಡು ಆಮೇಲೆ ಬಾಗಿಲುವಾಡವನ್ನು ಕಟ್ಟಿಸಿದರೇನು?

ಚೇಟಿ - ಏ, ನಮ್ಮ ಅಮ್ಮನನ್ನು ಹೀಗೆಲ್ಲಾ ಹಾಸ್ಯಮಾಡಬೇಡ. ಪಾಪ, ಅವಳಿಗೆ ನಾಲ್ಕರ ಚಳಿ ಹಿಡಿಸುತ್ತದೆ.

ವಿದೂಷಕ - (ಹಾಸ್ಯದಿಂದ) ಭಗವಾನ್ ನಾಲ್ಕರ ಚಳಿ! ಈ ಉಪಕಾರವನ್ನು ಈ ಬ್ರಾಹ್ಮಣನ ಮೇಲೂ ಕರುಣಿಸಪ್ಪಾ!

ಚೇಟಿ—ಹಾಳಾದವನೆ, ನೀನು ಸಾಯುವೆ!

ವಿದೂಷಕ—(ಹಾಸ್ಯದಿಂದ) ತೊತ್ತಿನ ಮಗಳೆ, ಇಂಥ ಉಬ್ಬಿ ಕೊಬ್ಬಿದ ಹೊಟ್ಟೆ ಸಾಯುವುದೇ ಮೇಲು—

ಅಮ್ಮಂಗೀ ಸ್ಥಿತಿ ಬಂದುದು
ಸುಮ್ಮನೆ ಮಧು ಹೆಂಡ ಸುರೆಗಳಂ ಪೀರುತ್ತುಂ
ಅಮ್ಮಂ ಮಡಿಯಲ್ಕೀಗಳ್
ಬಿಮ್ಮನೆ ನರಿಸಾವಿರಕ್ಕೆ ಸಾಲ್ವಳ್ ನಿರುತಂ ೩೦

ಪೂಜ್ಯಳೆ, ನಿಮಗೂ (ಹೊನ್ನನ್ನು ಹೇರಿಕೊಂಡು ಬರುವ) ಸಮುದ್ರ ನೌಕೆಗಳುಂಟೋ?

ಚೇಟಿ - ಆರ್ಯ, ಇಲ್ಲ, ಇಲ್ಲ.

ವಿದೂಷಕ—ಕುಂಡದ್ದಕ್ಕೆ ಕೇಳುವುದೇಕೆ? ಮದನಸಮುದ್ರದ ಪ್ರೇಮವೆಂಬ ನಿರ್ಮಲಜಲದಲ್ಲಿ ಸ್ತನನಿತಂಬಜಘನಗಳೇ ನಿಮ್ಮ ಮನೋಹರ ನೌಕೆಗಳು. ಹೀಗೆ ಇಷ್ಟು ಪರಿಪರಿಯಾಗಿರುವ, ಎಂಟು ಅಂಗಳಗಳ, ವಸಂತಸೇನೆಯ ಮನೆಯನ್ನು ಕಂಡು ಒಂದೇ ಕಡೆ ಒಟ್ಟಾದ ಸ್ವರ್ಗ

ವನ್ನೆಲ್ಲ ಕಂಡಂತೆ ನನಗಾಗಿದೆ. ಹೊಗಳುವುದಕ್ಕೆ ಮಾತಿನ ಶಕ್ತಿಯನ್ನು ಮಾತ್ರ ಪಡೆದುಬರಲಿಲ್ಲ. ಇದು ಗಣಿಕೆಯ ಮನೆಯೋ, ಇಲ್ಲವೆ ಕುಬೇರನ ಅರಮನೆಯ ಒಂದು ಭಾಗವೋ? ಇನ್ನು ನಿಮ್ಮ ಒಡತಿಯಿರುವುದೆಲ್ಲಿ?

ಚೇಟಿ—ಅದೋ ಈ ವೃಕ್ಷವಾಟಿಯಲ್ಲಿದ್ದಾಳೆ. ಆರ್ಯನು ಪ್ರವೇಶಿಸಬೇಕು.

ವಿದೂಷಕ—(ಪ್ರವೇಶಿಸಿ ನೋಡಿ) ಆಶ್ಚರ್ಯ! ವೃಕ್ಷವಾಟಿ ಎಷ್ಟು ರಮಣೀಯವಾಗಿದೆ! ಎಷ್ಟು ಬಗೆದು ಹೂ ಗಿಡಗಳನ್ನು ಬೆಳೆಸಿದ್ದಾರೆ! ಯುವತಿಯರ ಜಘನದ ಎತ್ತರಕ್ಕೆ ಸರಿಯಾಗಿ ಗಿಡಗಳ ಬುಡದಲ್ಲಿ ರೇಷ್ಮೆಯ ಉಯ್ಯಾಲೆಗಳೇನು! ಚಿನ್ನದ ಹೂವು, ಜಾಜಿ, ಶೇಫಾಲಿಕೆ, ಮಾಲತಿ, ಮಲ್ಲಿಗೆ, ನವಮಾಲಿಕೆ, ಕುರವಕ, ಅದಿಮುಕ್ತೆ ಮುಂತಾದ ಹೂಗಳೆಲ್ಲ ತಾವೇ ಅರಳಿ ಕೆಳಗೆ ಬಿದ್ದು ನಂದನ ವನದ ಸೊಬಗನ್ನು ಮೀರಿಸುತ್ತಿವೆ. (ಇನ್ನೊಂದು ಕಡೆ ನೋಡಿ)

ಇದಶೋಕಂ ಪೊಸಪೂತಳಿ
ರುದಯದೆ ರಮಣೀಯಮಾಗಿ ಕಂಗೊಳಿಸಿರ್ಕುಂ
ಕದನದ ಮಧ್ಯದೆ ಸುಭಟಂ
ಗುದಿಸಿದ ಘನರಕ್ತಪಂಕಲೇಪಮೊಲೀಗಳ್ ೩೧

ಇರಲಿ, ನಿಮ್ಮ ಒಡತಿಯೆಲ್ಲಿ?

ಚೇಟಿ—ನಿನ್ನ ಕಣ್ಣನ್ನು ಸ್ವಲ್ಪ ಕೆಳಗಿಳಿಸು. ಒಡತಿಯನ್ನು ನೋಡು.

ವಿದೂಷಕ—(ನೋಡಿ, ಸಮೀಪಿಸಿ) ನಿನಗೆ ಮಂಗಳವಾಗಲಿ!

ವಸಂತಸೇನೆ—(ಸಂಸ್ಕೃತ ಭಾಷೆಯಲ್ಲಿಯೇ) ಆರ್ಯ, ಮೈತ್ರೇಯ! (ಎದ್ದು) ಇದೋ ಸ್ವಾಗತ, ಇದೇ ಆಸನ, ಇಲ್ಲಿ ಕುಳಿತುಕೋ.

ವಿದೂಷಕ—ನೀನೂ ಕುಳಿತುಕೊ.

(ಇಬ್ಬರೂ ಕುಳಿತುಕೊಳ್ಳುವರು)

ವಸಂತಸೇನೆ—ವರ್ತಕರ ಪುತ್ರನಿಗೆ ಕುಶಲವಷ್ಟೆ!

ವಿದೂಷಕ—ಕುಶಲವೇ.

ವಸಂತಸೇನೆ—ಆರ್ಯ, ಮೈತ್ರೇಯ, ಈಗಲೂ—

ಗುಣಗಳೆ ಕುಡಿ ವಿನಯಂಗಳ
ಗಣ ಶಾಖೆಯೆ ಮೂಲಮಳ್ತಿಯುನ್ನತಿ ಪೂಗಳ್
ಅಣಮಾ ತರುವೊಳ್ ಸುಖದಿಂ
ಗುಣಫಲಯುತಮೊಳ್ಸಮಂತು ಸಖ ಖಗಮುಂಟೇ ೩೨

ವಿದೂಷಕ—(ಸ್ವಗತ) ದುಷ್ಟಗಣಿಕೆ ಸರಿಯಾಗಿ ಕೇಳುತ್ತಿದ್ದಾಳೆ! (ಪ್ರಕಾಶ) ಹೌದು.

ವಸಂತಸೇನೆ—ನೀನೀಗ ಬಂದ ಕಾರಣವೇನು?

ವಿದೂಷಕ—ಕೇಳು. ಪೂಜ್ಯನಾದ ಚಾರುದತ್ತನು ತಲೆಯ ಮೇಲೆ ಕೈ ಜೋಡಿಸಿ ನಿನಗೆ ಹೀಗೆ ವಿಜ್ಞಾಪಿಸುತ್ತಾನೆ—

ವಸಂತಸೇನೆ—(ಕೈ ಜೋಡಿಸಿ) ಏನೆಂದು ಆಜ್ಞಾಪಿಸುತ್ತಾನೆ?

ವಿದೂಷಕ—'ಆ ನಿನ್ನ ಚಿನ್ನದೊಡವೆಯ ಗಂಟನ್ನು ನನ್ನದೇ ಎಂದು ನಂಬಿ ಜೂಜಿನಲ್ಲಿ ಕಳೆದುಕೊಂಡುಬಿಟ್ಟೆ. ರಾಜನು ನೇಮಿಸಿರುವ ಆ ಜೂಜಿನ ಅಧಿಕಾರಿಯೂ ಎಲ್ಲಿ ಹೋಗಿರುವನೋ ಗೊತ್ತಿಲ್ಲ.'

ಚೇಟಿ—ನಿನ್ನ ಅದೃಷ್ಟಕ್ಕೆ ಪಾರವೇ ಇಲ್ಲ. ಆರ್ಯನೀಗ ಜೂಜುಗಾರನೂ ಆಗಿಬಿಟ್ಟನು.

ವಸಂತಸೇನೆ—(ಸ್ವಗತ) ಕಳ್ಳನು ಕದ್ದುಕೊಂಡು ಹೋದನೆಂದು ಹೇಳುವುದು ಗೌರವಕ್ಕೆ ಕುಂದೆಂದು ಜೂಜಿನಲ್ಲಿ ಕಳೆಯಿತೆನ್ನುವನಲ್ಲವೆ? ಅದರಿಂದಲೇ ನಾನು ಆತನನ್ನು ಪ್ರೀತಿಸುವುದು.

ವಿದೂಷಕ—'ಆದ್ದರಿಂದ ಅದರ ಬದಲಾಗಿ ಈ ರತ್ನಹಾರವನ್ನು ಪೂಜ್ಯೆ ಸ್ವೀಕರಿಸಬೇಕು'

ವಸಂತಸೇನೆ—(ಸ್ವಗತ) ನಿಜವಾದ ಒಡವೆಯನ್ನು ತೋರಿಸಲೇನು? (ಯೋಚಿಸಿ) ಅಥವಾ ಈಗಬೇಡ, ಹಾಗೆಯೇ ಇರಲಿ.

ವಿದೂಷಕ—ಏನು? ಪೂಜ್ಯಳು ಈ ರತ್ನಹಾರವನ್ನು ತೆಗೆದುಕೊಳ್ಳುವುದಿಲ್ಲವೆ?

ವಸಂತಸೇನೆ—(ನಗುತ್ತ ಸಖಿಯ ಮುಖವನ್ನು ನೋಡಿ) ಮೈತ್ರೇಯ, ರತ್ನಹಾರವನ್ನು ಎಲ್ಲಿಯಾದರೂ ತೆಗೆದುಕೊಳ್ಳದೆ ಇರುವೆನೆ? (ತೆಗೆದುಕೊಂಡು ಪಕ್ಕದಲ್ಲಿಟ್ಟುಕೊಳ್ಳುವಳು. ಸ್ವಗತ). ಹೂವಿಲ್ಲದ ಮಾವಿನ ಮರದಿಂದಲೂ ಮಕರಂದ ಬಿಂದುಗಳು ಬೀಳುತ್ತಿವೆ! (ಪ್ರಕಾಶ)

ಆ ಜೂಜುಗಾರನಿಗೆ ನಾನು ಹೀಗೆ ಹೇಳಿದೆನೆಂದು ತಿಳಿಸು—'ಸಂಜೆ ನಿನ್ನನ್ನು ನೋಡಲು ಬರುತ್ತೇನೆ' ಎಂದು.

ವಿದೂಷಕ—(ಸ್ವಗತ) ಅಲ್ಲಿ ಹೋಗಿ ಇನ್ನು ಏನನ್ನು ಸೆಳೆಯುವಳೋ? (ಪ್ರಕಾಶ) ನಾನು ಹೇಳುತ್ತೇನೆ—(ಸ್ವಗತ) ಈ ಗಣಿಕಾಪ್ರಸಂಗವನ್ನೇ ಬಿಟ್ಟುಬಿಡು, ಎಂದು. (ನಿಷ್ಕ್ರಮ)

ವಸಂತಸೇನೆ—ಚೇಟಿ, ಈ ಒಡವೆಯನ್ನು ತೆಗೆದುಕೊ. ಚಾರುದತ್ತನೊಡನೆ ಕ್ರೀಡಿಸಲು ಹೋಗೋಣ.

ಚೇಟಿ—ಆರ್ಯೆ, ನೋಡು. ಅಕಾಲ ಮೊಡಗಳ ಕತ್ತಲೆಯೇರುತ್ತಿದೆ.

ವಸಂತಸೇನೆ—

ಮೂಡಲಿ ಮೋಡಗಳೆಲ್ಲವು
ಕಾಡಲಿ ಮೇಣ್ ರಾತ್ರಿ ಮಳೆಯೆ ಸುರಿಯಲಿ ಭರದಿಂ
ನೋಡೆಂ ನಾನಿದನೊಂದಂ
ನೀಡುಂ ಹೃದಯೇಶನೆಡೆಗೆ ಪೊರಮಟ್ಟಿರ್ದೆಯೊಳ್

ಚೇಟಿ, ಹಾರವನ್ನು ತೆಗೆದುಕೊಂಡು ಬೇಗ ಬಾ.

(ನಿಷ್ಕ್ರಮ—ಎಲ್ಲರೂ)

ಇಲ್ಲಿಗೆ 'ಮದನಿಕಾ ಶರ್ವಿಲಕ' ಎಂಬ ನಾಲ್ಕನೆಯ ಅಂಕ ಮುಗಿದುದು.

---

# ಐದನೆಯ ಅಂಕ

---

(ಪ್ರವೇಶ—ಆಸನದಲ್ಲಿ ಕುಳಿತ ಚಾರುದತ್ತ ; ವಿರಹೋತ್ಕಂಠಿತನಾಗಿದ್ದಾನೆ.)

ಚಾರುದತ್ತ—(ಮೇಲೆ ನೋಡಿ) ಇದೇನು, ಆಕಾಲ ಮೇಘಗಳು ತುಂಬಿ ಕೊಂಡು ದುರ್ದಿನವಾಗಿದೆಯಲ್ಲಾ!—

ಮನೆನವಿಲು ಗರಿಗೆದರಿ ಮುದದಿಂದೆ ನೋಡುತಿರೆ,
ಪಯಣಿಸುವ ಹಂಸಗಣವುಮ್ಮಳಿಸಿ ತೊರೆಯೆ;
ಈ ಅಕಾಲಿಕವಾದ ದುರ್ದಿನವು ಬಾಸೊಡನೆ
ವಿರಹಿಯೆದೆಯನು ಬಿಡದೆ ಕವಿಯುತಿಹುದೊಡನೆ. ೧

ಮತ್ತು

ಮುಗಿಲ ಬಣ್ಣ ದುಂಬಿಯಂತೆ, ನೀರೊಳಿಳಿದ ಕೋಣನ
ಉದರದಂತೆ ಮಿನುಗಿರೆ,
ಎಸೆವ ಮಿಂಚೆ ಪೀತವಸ್ತ್ರದುತ್ತರೀಯವೆನಿಸಿರೆ,
ಬಿಳಿಯ ಹಕ್ಕಿ ಹಾರಿವೆ.
ಕೈಯೊಳಾಂತ ಶಂಖದಂತೆ ಕಣ್ಗೆ ಸೊಬಗ ಬೀರಿರೆ,
ಚೆಲ್ವನಿಂತು ಸೂಸಿರೆ;
ನಭವನೆಲ್ಲ ಗೆಲ್ಲಲೆಂದು ನಿಂದ ಬೇರೆ ಹರಿಯೆನೆ
ಮುಗಿಲು ಬೆಳೆದುದೊಯ್ಯನೆ. ೨

ಮತ್ತು

ಹರಿದೇಹನೀಲವರ್ಣಂ
ವಿರಚಿತವರಶಂಖನಂತೆ ಬೆಳ್ಳಕ್ಕಿಗಳಿಂ
ವರವಿದ್ಯುತ್ ಕೃತವಸ್ತ್ರಂ
ಮೆರೆವಂ ತಾಂ ಮೇಘನಿಂತು ಚಕ್ರಧರಂಬೋಲ್ ೩
ಮೋಡಗಳೆಡೆಯಿಂ ಧಾರೆಗಳಿಳಿವುವು
ಕರಗಿದ ಬೆಳ್ಳಿಯ ದ್ರವವೆನಲು;

ಕೋಲ್ಮಿಂಚಲಿ ಚಣ ಮಿನುಗುತಲಡಗುತೆ
ಬಾನ್ಬಟ್ಟೆಯ ಹರಿದಂಚಿನೊಲು. ೪

ದೊರೆಕೊಂಡಿರ್ಪುದೊ ಚಕ್ರವಾಕಯುಗಳಂ ಹಂಸಾಳಿಯೈತಂದುದೋ
ಭರದಿಂ ಮೇಲ್ನೆಗೆದಿರ್ಪ ಮೀನ್ ಮೊಸಳೆಯೋ ಪ್ರೋತ್ತುಂಗ ಪ್ರಾಸಾದಮೋ
ತರದಿಂದಿಂತುರೆ ರೂಪನಾಂತ ಮುಗಿಲಂ ಜೇರಾಗಿಸಲ್ ಮಾರುತಂ
ವರನಾರೀಮುಖಚಿತ್ರದಂತೆ ಮೆರೆಗುಂ ತಾಂ ಬಾಂದಳಂ ಸುಂದರಂ ೫

ಮುಗಿಲಿಂ ಬಾಂದಳಮಂಧಕಾರಮಯಮಾ ಕೌರವ್ಯಸೈನ್ಯೋಪಮಂ
ಮಿಗೆ ಮತ್ತಂ ಬಲದಿಂದೆ ಕೇಕಿಯುಲಿಗುಂ ದುರ್ಯೋಧನಂ ತಾನೆನಲ್
ಬಗೆಯಲ್ ದ್ಯೂತದೆ ಸೋಲ್ತ ಧರ್ಮಜನವೋಲ್ ಅಧ್ವಾನಯುಕ್ತಂ ಪಿಕಂ
ಮಿಗೆಯಜ್ಞಾತನಿವಾಸಿ ಹಂಸನಿವಹಂ ಪೋಣ್ ಪಾಂಡುಪುತ್ರರ್ಕಳೊಲ್ ೬

(ಚಿಂತಿಸಿ) ವಸಂತಸೇನೆಯ ಬಳಿಗೆ ಮೈತ್ರೇಯನು ಹೋಗಿ ಬಹಳ ಹೊತ್ತಾಯಿತು. ಇನ್ನೂ ಬರಲಿಲ್ಲವಲ್ಲ!

(ಪ್ರವೇಶ-ವಿದೂಷಕ)

ವಿದೂಷಕ—ಅಬ್ಬಾ! ಗಣಿಕೆಯ ಲೋಭವೆಷ್ಟು! ಅವಿನಯವೆಷ್ಟು! ಬೇರೆ ಯಾವ ಮಾತನ್ನೂ ಆಡಲೇ ಇಲ್ಲವಲ್ಲ! ಪ್ರೀತಿಗನುಗುಣವಾಗಿ ಬೇಕಾದಷ್ಟು ನುಡಿದು ಹಾಗೆಹಾಗೆಯೇ ರತ್ನಹಾರವನ್ನು ತೆಗೆದು ಕೊಂಡಳು. ಅಷ್ಟೆಲ್ಲ ಐಶ್ವರ್ಯವಿದ್ದರೂ, 'ಅಯ್ಯಾ. ಮೈತ್ರೇಯ, ವಿಶ್ರಮಿಸಿಕೊ. ಒಂದು ಬಟ್ಟಲು ನೀರನ್ನಾದರೂ ಕುಡಿದು ಹೋಗು' ಎಂದಿಷ್ಟನ್ನೂ ನನಗೆ ಹೇಳಲಿಲ್ಲ. ಆದ್ದರಿಂದ ಆ ಹಾಳಾದವಳ ಮುಖ ವನ್ನೂ ಕೂಡ ಇನ್ನೆಂದೂ ನಾನು ನೋಡುವುದಿಲ್ಲ. (ನಿರ್ವಿಣ್ಣನಾಗಿ) ಹಿರಿಯರು ಸರಿಯಾಗಿಯೇ ಹೇಳಿದ್ದಾರೆ—'ಗೆಡ್ಡೆಯಿಂದ ವೊಳೆಯದ ತಾವರೆ, ಮೋಸಮಾಡದ ವರ್ತಕ, ಕದಿಯದ ಅಕ್ಕಸಾಲೆ, ಜಗಳ ವಿಲ್ಲದ ಹಳ್ಳಿಯ ಜಾತ್ರೆ, ಲೋಭವಿಲ್ಲದ ಸೂಳೆ—ಎಂಬುದು ಊಹಿ ಸುವುದಕ್ಕೂ ಸಾಧ್ಯವಿಲ್ಲ.' ಆದ್ದರಿಂದ ಪ್ರಿಯಮಿತ್ರನ ಬಳಿಗೆ ಹೋಗಿ ಅವನು ಈ ಸೂಳೆಯ ಸಹವಾಸವನ್ನೇ ತೊರೆಯುವಂತೆ ಮಾಡು ತ್ತೇನೆ. (ನಡೆದು ಕಂಡು) ಓ, ಪ್ರಿಯಮಿತ್ರನು ಇಲ್ಲಿಯೇ ಮರಗಳ ತೋಪಿನಲ್ಲಿ ಕುಳಿತಿದ್ದಾನೆ! ಹೋಗಿ ಕಾಣುತ್ತೇನೆ. (ಸಮೀಪಿಸಿ)

ಶುಭವಾಗಲಿ! ನಿನಗೆ ಜಯವಾಗಲಿ!

ಚಾರುದತ್ತ—(ನೋಡಿ) ಓ, ಗೆಳೆಯ ಮೈತ್ರೇಯನು ತಿರುಗಿ ಬಂದಿರುವನು! ಮಿತ್ರ, ನಿನಗೆ ಸ್ವಾಗತ. ಕುಳಿತುಕೊ.

ವಿದೂಷಕ—ಇದೋ, ಕುಳಿತಿದ್ದೇನೆ.

ಚಾರುದತ್ತ—ಗೆಳೆಯ, ಆ ಕೆಲಸವೇನಾಯಿತು, ಹೇಳು.

ವಿದೂಷಕ—ಆ ಕೆಲಸ ಹಾಳಾಯಿತು.

ಚಾರುದತ್ತ—ಏನು ಆಕೆ ರತ್ನಹಾರವನ್ನು ತೆಗೆದುಕೊಳ್ಳಲಿಲ್ಲವೆ?

ವಿದೂಷಕ—ನಮಗೆ ಅಂತಹ ಅದೃಷ್ಟವೆಲ್ಲಿ ಬರಬೇಕು? ಹೊಸ ತಾವರೆಯೆಸಳಿನಂತೆ ಕೋಮಲವಾದ ಕೈಗಳನ್ನು ತಲೆಯ ಮೇಲೆ ಜೋಡಿಸಿಕೊಂಡು ಸ್ವೀಕರಿಸಿದಳು.

ಚಾರುದತ್ತ—ಹಾಗಾದರೆ ಕೆಲಸ ಹಾಳಾಯಿತೆಂದೇಕೆ ಹೇಳುತ್ತಿರುವೆ?

ವಿದೂಷಕ—ಅಯ್ಯೋ, ಹಾಳಾಗಲಿಲ್ಲವೆ? ತಿನ್ನಲಿಲ್ಲ, ಉಣ್ಣಲಿಲ್ಲ; ಕಳ್ಳರು ಕದ್ದುಕೊಂಡ ಹೋದ ಅಗ್ಗದ ಒಡವೆಯ ಸಲುವಾಗಿ ಚತುಸ್ಸಾಗರಗಳ ಸಾರವೆನಿಸುವ ರತ್ನಹಾರವನ್ನೇ ಒಪ್ಪಿಸಿದ್ದಾಯಿತು.

ಚಾರುದತ್ತ—ಮಿತ್ರ, ಹಾಗಲ್ಲ—

ನಂಬಿಕೆಯಾವುದನವಳಾ
ಲಂಬಿಸುತುಂ ನ್ಯಾಸಗೈದಳೆವ್ಮೊಳ್ ವಲಮಾ
ನಂಬಿಕೆ ಪಿರಿದೆನಲದರಾ
ತುಂಬಿದ ಬೆಲೆಯನ್ನೆ ಕೊಡುವೆನ್ಮೆಸಲೆ ನೋಡಲ್ ೭

ವಿದೂಷಕ—ಅಯ್ಯೋ, ನನ್ನ ಸಂತಾಪಕ್ಕೆ ಇನ್ನೊ ಒಂದು ಕಾರಣವಿದೆ. ಸಖಿಯರಿಗೆ ಸನ್ನೆಯಿಂದ ಏನೋ ಸೂಚಿಸಿ ಸೆರಗಿನಿಂದ ಬಾಯನ್ನು ಮುಚ್ಚಿಕೊಂಡು ನನ್ನನ್ನು ನೋಡಿ ನಕ್ಕಳು. ನಾನು ಬ್ರಾಹ್ಮಣನಾದರೂ ನಿನ್ನ ಕಾಲಮೇಲೆ ತಲೆಯಿಟ್ಟು ಬಿನ್ನವಿಸಿಕೊಳ್ಳುತ್ತಿದ್ದೇನೆ— ಅನೇಕ ಅಪಾಯಮಯವಾದ ಈ ವೇಶ್ಯಾಪ್ರಸಂಗವನ್ನು ನೀನು ಬಿಟ್ಟು ಬಿಡು. ಗಣಿಕೆಯೆಂದರೆ ಪಾದರಕ್ಷೆಯಲ್ಲಿ ಸೇರಿಕೊಂಡ ಸಣ್ಣ ಕಲ್ಲಿನಂತೆಯೇ; ಹೊರದೂಡುವುದು ಬಹುಕಷ್ಟ. ಅಲ್ಲದೆ ಗಣಿಕೆ, ಆನೆ, ಗುಮಾಸ್ತ, ಸಂನ್ಯಾಸಿ, ಗೂಢಚಾರ, ಕತ್ತೆ—ಇವರಿದ್ದೆಡೆಯಲ್ಲಿ

ದುಷ್ಟರು ಕೂಡ ಬಾಳಲಾರರು.

ಚಾರುದತ್ತ—ಗೆಳೆಯ, ಎಲ್ಲವನ್ನೂ ನಿಂದಿಸುವುದು ಹಾಗಿರಲಿ. ನನ್ನ ಅವಸ್ಥೆಯೇ ಈಗ ಆ ಪ್ರಸಂಗದಿಂದ ನನ್ನನ್ನು ತಪ್ಪಿಸುತ್ತಿದೆ. ನೋಡು—

ವೇಗವಾಗಿ ಪೋಗಲೆಂದು ತುರಗ ತವಕಗೊಳ್ಳುವುದು
ತ್ರಾಣವುಡುಗಿರಲ್ಕೆ ಕಾಲು ವೇಗದಿಂದೆ ಸಾಗದು;
ಮನುಜನಾಸೆ ಸಹಜಚಪಲವೆನಲು ಪರಿವುದೆಲ್ಲೆಡೆ
ವಿಫಲಗೊಂಡು ಮತ್ತೆ ಪುಗುವುದವನ ಬಗೆಯೆನೇ ಕಿಡೆ. ೮

ಅದೂ ಅಲ್ಲದೆ, ಮಿತ್ರ—

ಆರೊಳಗೈಸಿರಿಯಿರ್ಪುದೊ
ಸೇರುವಳಾತಂಗೆ ಗಣಿಕೆ ಧನಹಾರ್ಯೆಳ್ ತಾಂ

(ಸ್ವಗತ) ಅಲ್ಲ, ಆಕೆ ಮಾತ್ರ ಗುಣಹಾರ್ಯಳೇ ಆಗಿದ್ದಾಳೆ.

ದೂರರ್ ಧನದಿಂ ನಾವೆನೆ
ದೂರಳ್ ವಲಮಾಕೆಯೆಂಬೆನೆನ್ನಯ ಕೆಲದಿಂ ೯

ವಿದೂಷಕ—(ಕೆಳಗೆ ನೋಡಿ, ಸ್ವಗತ) ಇವನು ಮೇಲೆ ನಿಟ್ಟಿಸಿ ನಿಟ್ಟುಸಿರು ಬಿಡುತ್ತಿರುವುದನ್ನು ನೋಡಿದರೆ ನಾನು ಬೇಡವೆಂದುದರ ಪರಿಣಾಮವಾಗಿ ಇವನ ಅನುರಾಗ ಮತ್ತೂ ವೃದ್ಧಿಯಾದಂತಿದೆ. ಅದರಿಂದಲೇ ಜನರಾಡುವ ಗಾದೆ ಸರಿಯಾಗಿದೆ—'ಕಾಮ ಯಾವಾಗಲೂ ವಾಮ'. (ಪ್ರಕಾಶ) ಅಯ್ಯಾ, ಮಿತ್ರ, ಆಕೆ ಇನ್ನೂ ಹೇಳಿದಳು—'ಚಾರುದತ್ತನಿಗೆ ತಿಳಿಸು; ಇಂದು ಮುಚ್ಚಂಜೆ ನಾನೇ ಅಲ್ಲಿಗೆ ಬರುವವಳಿದ್ದೇನೆ' ಎಂದು. ಇದರಿಂದ ನನಗೆ ಹೀಗೆ ತೋರುತ್ತದೆ—ರತ್ನಹಾರ ಸಿಕ್ಕಿದರೂ ತೃಪ್ತಳಾಗದೆ ಮತ್ತೂ ಏನಾದರೂ ಬೇಕೆಂದು ಕೇಳಲು ಬರುತ್ತಿದ್ದಾಳೆ ಎಂದು.

ಚಾರುದತ್ತ—ಗೆಳೆಯ, ಬಂದುಕೊಳ್ಳಲಿ. ಸಂತೋಷಪಟ್ಟುಕೊಂಡು ಹೋಗಲಿ.

ಚೇಟ—(ಪ್ರವೇಶಿಸಿ) ಜನರೇ, ತಿಳಿಯಿರಿ—

ಮುಗಿಲ ಮುರುಕು ಮಳೆಯು ಕರೆಯೆ
ಬೆನ್ನ ಚರ್ಮ ನೆನೆಯಿತು;

ಮತ್ತೆ ಶೀತವಾತ ಬೀಸ-
ಲೆನ್ನ ಎದೆಯೆ ನಡುಗಿತು. ೧೦

(ಗಟ್ಟಿಯಾಗಿ ನಗುತ)

ಏಳು ತೂತ ಕೊಳಲನೂದಬಲ್ಲೆನಿನಿಯ ದನಿಯಲಿ,
ಏಳುತಂತಿ ವೀಣೆಯನ್ನು ನುಡಿಸಬಲ್ಲೆ ಕರದಲಿ ;
ಹಾಡ ಹಾಡಬಲ್ಲೆನಂತೆ ಕತ್ತೆಯನ್ನೆ ಮೀರಿಸಿ
ನನ್ನ ಹಾಡ ಮುಂದೆಯೆಲ್ಲಿ ನಾರದಾದಿ ತುಂಬುರು? ೧೧

ನನಗೆ ವಸಂತಸೇನೆಯ ಅಪ್ಪಣೆಯಾಗಿದೆ—ಕುಂಭೀಲಕ, ನೀನು ಹೋಗಿ ಆರ್ಯಚಾರುದತ್ತನಿಗೆ ನಾನು ಬರುತ್ತಿರುವುದನ್ನು ತಿಳಿಸು ಎಂದು. ಆದ್ದರಿಂದ ಈಗ ಚಾರುದತ್ತನ ಮನೆಗೇ ಹೋಗುತ್ತಿದ್ದೇನೆ. (ನಡೆಯುತ್ತ ಪ್ರವೇಶಿಸಿ, ನೋಡಿ) ಇದೋ, ಚಾರುದತ್ತನು ಈ ಮರದ ತೋಪಿನಲ್ಲೀ ಇದ್ದಾನೆ. ಕೆಟ್ಟ ಬ್ರಾಹ್ಮಣವಟುವೂ ಜತೆಯಲ್ಲಿಯೇ ಇದ್ದಾನೆ. ಸಮೀಪಿಸುತ್ತೇನೆ. ಓ, ತೋಪಿನ ಬಾಗಿಲು ಮುಚ್ಚಿಬಿಟ್ಟಿದೆ. ಇರಲಿ, ಈ ಕೆಟ್ಟವಟುವಿಗೆ ಸನ್ನೆಮಾಡುತ್ತೇನೆ.

(ಮಣ್ಣು ಹೆಂಟೆಗಳನ್ನು ಎಸೆಯುವನು)

ವಿದೂಷಕ—ಅಯ್ಯಯ್ಯೋ! ಬೇಲಿಹಾಕಿರುವ ಜೇಲದ ಮರಕ್ಕೆ ಹೊಡೆಯುವಂತೆ ಮಣ್ಣು ಹೆಂಟೆಗಳಿಂದ ನನ್ನನ್ನು ಹೊಡೆಯುತ್ತಿರುವವನು ಯಾರು?

ಚಾರುದತ್ತ—ಉದ್ಯಾನಸೌಧದ ಮಾಳಿಗೆಯ ಮೇಲೆ ಆಡುತ್ತಿರುವ ಪಾರಿವಾಳಗಳು ಎಲ್ಲಿಯೋ ಕೆಡವಿರಬೇಕು.

ವಿದೂಷಕ—ತೊತ್ತಿನ ಮಗನೆ, ಕೆಟ್ಟ ಪಾರಿವಾಳವೆ, ನಿಲ್ಲು ನಿಲ್ಲು. ಈ ದೊಣ್ಣೆಯಿಂದಲೇ ಕಳಿತಮಾವಿನ ಹಣ್ಣಿನಂತೆ ನಿನ್ನನ್ನು ಮಾಳಿಗೆಯ ಮೇಲಿಂದ ನೆಲಕ್ಕೆ ಕೆಡವುತ್ತೇನೆ. (ದೊಣ್ಣೆಯನ್ನೆತ್ತಿಕೊಂಡು ಓಡುವನು)

ಚಾರುದತ್ತ—(ಜನಿವಾರವನ್ನು ಹಿಡಿದೆಳೆಯುತ್ತ) ಮಿತ್ರ, ಕುಳಿತುಕೊ. ಇದೆಲ್ಲ ಏಕೆ? ಆ ನಿರಪರಾಧಿ ಪಾರಿವಾಳ ಅದರ ಪ್ರೇಯಸಿಯೊಡನೆ ಸುಖವಾಗಿರಲಿ.

ಚೇಟ—ಓ, ಪಾರಿವಾಳವನ್ನು ಮಾತ್ರ ಕಂಡನೇ ಹೊರತು ನನ್ನನ್ನು ಕಾಣ

ಲಿಲ್ಲ. ಇರಲಿ. ಇನ್ನೊಂದು ಮಣ್ಣುಹೆಪ್ಪಿನಿಂದ ಹೊಡೆಯುತ್ತೇನೆ. (ಹಾಗೆಯೇ ಮಾಡುವನು.)

ವಿದೂಷಕ—(ದಿಕ್ಕುದಿಕ್ಕುಗಳಲ್ಲೂ ನೋಡಿ) ಓ, ಕುಂಭೀಲಕ! ಹೋಗಿ ನೋಡುತ್ತೇನೆ. (ಸಮೀಪಿಸಿ, ಬಾಗಿಲನ್ನು ತೆರೆದು) ಬಾ ಕುಂಭೀಲಕ, ಒಳಗೆ ಬಾ. ನಿನಗೆ ಸ್ವಾಗತ.

ಚೇಟ—(ಒಳಗೆ ಬಂದು) ಆರ್ಯ, ನಮಸ್ಕಾರ.

ವಿದೂಷಕ—ಮೋಡ ಮುಚ್ಚಿಕೊಂಡು ಕಗ್ಗತ್ತಲೆಯಾಗಿರುವ ಈ ಹೊತ್ತು ನೀನೆಲ್ಲಿಗೆ ಬಂದಿರುವೆ?

ಚೇಟ—ಅಯ್ಯಾ, ಇದೋ ಈ ಆಕೆ.

ವಿದೂಷಕ—ಯಾವ ಈಕೆ? ಯಾವ ಆಕೆ?

ಚೇಟ—ಇದೇ ಈಕೆ....

ವಿದೂಷಕ—ತೊತ್ತಿನ ಮಗನೆ, ದುರ್ಭಿಕ್ಷದಲ್ಲಿ ನಿಟ್ಟುಸಿರೆಳೆಯುವ ಮುದಿ ಭಿಕ್ಷುಕನಂತೆ ಒಂದೇ ಸಮನೆ 'ಸಾಸಾಸಾ' (ಈಕೆ) ಎನ್ನುತ್ತಿರುವೆ ಯಲ್ಲೋ!

ಚೇಟ—ನೀನಿನ್ನೇನು? ಇಂದ್ರಪೂಜೆಯ ದಿನ ಅನ್ನದ ಗುಳಿಗೆ ಬಾಯಿ ಬಿಡುತ್ತಾ ಕೂಗುವ ಕಾಗೆಯಂತೆ ಒಂದೇ ಸಮನೆ 'ಕಾ ಕಾ ಕಾ' (ಯಾವಾಕೆ) ಎನ್ನುತ್ತಿರುವೆ.

ವಿದೂಷಕ—ಏನು ಹೇಳು.

ಚೇಟ—(ಸ್ವಗತ) ಇರಲಿ. ಹೀಗೆ ಹೇಳುತ್ತೇನೆ. (ಪ್ರಕಾಶ) ನಿನಗೊಂದು ಪ್ರಶ್ನೆ ಹಾಕುತ್ತೇನೆ.

ವಿದೂಷಕ—ಎಲೋ, ನಿನ್ನ ತಲೆಯಮೇಲೆ ನನ್ನ ಕಾಲನ್ನು ಹಾಕುತ್ತೇನೆ.

ಚೇಟ—ಹಾಗಾದರೆ ನಿನಗೆ ಗೊತ್ತಿದೆಯೋ? ಯಾವ ಕಾಲದಲ್ಲಿ ಮಾವು ಗಳು ಮೊಗ್ಗಾಗುವುವು?

ವಿದೂಷಕ—ಅಯ್ಯೋ ತೊತ್ತಿನ ಮಗನೆ, ಬೇಸಗೆಯಲ್ಲಿ.

ಚೇಟ—(ನಗುತ್ತ) ಅಲ್ಲಪ್ಪ, ಅಲ್ಲ.

ವಿದೂಷಕ—(ಸ್ವಗತ) ಈಗೇನು ಹೇಳಲಿ? (ಯೋಚಿಸಿ) ಇರಲಿ. ಚಾರುದತ್ತ ನನ್ನು ಹೋಗಿ ಕೇಳಿಕೊಂಡು ಬರುತ್ತೇನೆ. (ಪ್ರಕಾಶ) ಎಲೋ,

ಒಂದು ಕ್ಷಣನಿಲ್ಲು. (ಚಾರುದತ್ತನ ಬಳಿಗೆ ಬಂದು) ಅಯ್ಯಾ, ಮಿತ್ರ, ಈ ಪ್ರಶ್ನೆಗೆ ಉತ್ತರ ಹೇಳು—ಯಾವ ಕಾಲದಲ್ಲಿ ಮಾವುಗಳು ಮೊಗ್ಗಾಗುವುವು ?

ಚಾರುದತ್ತ—ಮೂರ್ಖ, ವಸಂತದಲ್ಲಿ.

ವಿದೂಷಕ—(ಚೇಟನ ಬಳಿ ಬಂದು) ಮೂರ್ಖ, ವಸಂತದಲ್ಲಿ.

ಚೇಟ—ಈಗ ಎರಡನೆಯ ಪ್ರಶ್ನೆಯನ್ನು ಹಾಕುತ್ತೇನೆ. ಸಮೃದ್ಧಿ ತುಂಬಿರುವ ಊರುಗಳನ್ನು ರಕ್ಷಿಸತಕ್ಕುದು ಯಾವುದು ?

ವಿದೂಷಕ—ಓ, ಬೀದಿ.

ಚೇಟ—(ನಗುತ್ತ) ಅಲ್ಲಪ್ಪಾ, ಅಲ್ಲ.

ವಿದೂಷಕ—ಅಯ್ಯೋ, ಸಂಶಯಕ್ಕಿಟ್ಟುಕೊಂಡಿತಲ್ಲಾ! (ಯೋಚಿಸಿ) ಇರಲಿ, ತಿರುಗಿಯೂ ಚಾರುದತ್ತನನ್ನೇ ಕೇಳಿಬಿಡುತ್ತೇನೆ (ಮತ್ತೆ ಬಂದು ಚಾರುದತ್ತನನ್ನು ಹಾಗೆಯೇ ಕೇಳುತ್ತಾನೆ.)

ಚಾರುದತ್ತ—ಮಿತ್ರ, ಸೇನೆ.

ವಿದೂಷಕ—(ಚೇಟನ ಬಳಿಗೆ ಬಂದು) ಎಲೋ, ತೊತ್ತಿನ ಮಗನೆ, 'ಸೇನೆ.'

ಚೇಟ—ಎಲಾ, ಎರಡನ್ನೂ ಒಟ್ಟುಗೂಡಿಸಿ ಬೇಗ ಹೇಳು.

ವಿದೂಷಕ—'ಸೇನಾವಸಂತ.'

ಚೇಟ—ತಿರುಗುಮುರುಗಾಗಿ ಹೇಳು.

ವಿದೂಷಕ—(ದೇಹವನ್ನು ತಿರುಗಿಸಿ) 'ಸೇನಾವಸಂತ.'

ಚೇಟ—ಅಯ್ಯೋ, ಮೂರ್ಖವಟು, ಪದಗಳನ್ನು ತಿರುಗಿಸು.

ವಿದೂಷಕ—(ಕಾಲುಗಳನ್ನು ತಿರುಗಿಸಿ) 'ಸೇನಾವಸಂತ'.

ಚೇಟ—ಅಯ್ಯೋ ಮೂರ್ಖ, ಅಕ್ಷರಗಳಿಂದಾದ ಪದಗಳನ್ನು ತಿರುಗಿಸು.

ವಿದೂಷಕ—(ಯೋಚಿಸಿ) 'ವಸಂತಸೇನಾ'.

ಚೇಟ—ಆಕೆಯೇ ಬಂದಿರುವವಳು.

ವಿದೂಷಕ—ಚಾರುದತ್ತನಿಗೆ ತಿಳಿಸುತ್ತೇನೆ. (ಸಮೀಪಿಸಿ) ಓ ಚಾರುದತ್ತ, ನಿನ್ನ ಧಣಿ ಬಂದಾಯಿತು.

ಚಾರುದತ್ತ—ನಮ್ಮ ಮನೆಯಲ್ಲಿ ಧಣಿಯೆಲ್ಲಿಂದ ಬರಬೇಕು?

ವಿದೂಷಕ—ಮನೆಯಲ್ಲಿಲ್ಲದಿದ್ದರೆ ಬಾಗಿಲಲ್ಲಿ ಉಂಟು. ಇದೋ ವಸಂತ

ಸೇನೆ ಬಂದಿರುವಳು.

ಚಾರುದತ್ತ—ಮಿತ್ರ, ನನ್ನನ್ನೇಕೆ ಮೋಸಗೊಳಿಸುವೆ ?

ವಿದೂಷಕ—ನನ್ನ ಮಾತನ್ನು ನಂಬದಿದ್ದರೆ ಈ ಕುಂಭೀಲಕನನ್ನೇ ಕೇಳು. ಏ, ತೊತ್ತಿನಮಗನೆ, ಕುಂಭೀಲಕ, ಇಲ್ಲಿ ಬಾ.

ಚೇಟ—(ಸಮೀಪಿಸಿ) ಆರ್ಯ, ನಮಸ್ಕಾರ.

ಚಾರುದತ್ತ—ಶುಭಕರನೆ, ನಿನಗೆ ಸ್ವಾಗತ. ಹೇಳು, ವಸಂತಸೇನೆ ನಿಜವಾಗಿಯೂ ಬಂದಿರುವಳೆ ?

ಚೇಟ—ಇದೋ, ವಸಂತಸೇನೆ ಬರುತ್ತಿರುವಳು.

ಚಾರುದತ್ತ—(ಸಂತೋಷದಿಂದ) ಪ್ರಿಯವಾರ್ತೆಯನ್ನು ಎಂದೂ ನಾನು ನಿಷ್ಫಲನೆನಿಸಿದವನಲ್ಲ. ಈ ಬಹುಮಾನವನ್ನು ತೆಗೆದುಕೊ. (ಉತ್ತರೀಯವನ್ನೇ ಕೊಟ್ಟುಬಿಡುವನು)

ಚೇಟ—(ತೆಗೆದುಕೊಂಡು, ನಮಸ್ಕರಿಸಿ, ಸಂತೋಷದಿಂದ) ಒಡತಿಗೆ ಹೋಗಿ ತಿಳಿಸುತ್ತೇನೆ.

(ನಿಷ್ಕ್ರಮ)

ವಿದೂಷಕ—ಮಿತ್ರ, ಇಂತಹ ದುರ್ದಿನದಲ್ಲಿ ಏತಕ್ಕಾಗಿ ಬರುತ್ತಿರುವಳೆಂಬುದು ನಿನಗೆ ತಿಳಿದಿದೆಯೆ ?

ಚಾರುದತ್ತ—ಸರಿಯಾಗಿ ತಿಳಿದಿಲ್ಲ.

ವಿದೂಷಕ—ನನಗ ತಿಳಿದುಹೋಗಿದೆ; ರತ್ನಹಾರದ ಬೆಲೆ ಕಡಿಮೆ, ಚಿನ್ನದ ಒಡವೆಯ ಬೆಲೆ ಹೆಚ್ಚು ಎಂದುಕೊಂಡು ತೃಪ್ತಿಯಿಲ್ಲದೆ ಇನ್ನೂ ಹೆಚ್ಚಿನ ಪರಿಹಾರವನ್ನು ಕೇಳುವುದಕ್ಕಾಗಿ ಬರುತ್ತಿದ್ದಾಳೆ.

ಚಾರುದತ್ತ—(ಸ್ವಗತ) ಸಂತುಷ್ಟಳಾಗಿ ಹೋಗುತ್ತಾಳೆ.

(ಪ್ರವೇಶ—ಬೆಳಗುವ ಅಭಿಸಾರಿಕೆಯ ವೇಷದಲ್ಲಿರುವ ವಸಂತಸೇನೆ ಪ್ರೇಮಾವಸ್ಥೆಯಲ್ಲಿದ್ದಾಳೆ. ಛತ್ರವನ್ನು ಹಿಡಿಯುವ ದಾಸಿ ಮತ್ತು ವಿಟ)

ವಿಟ—(ವಸಂತಸೇನೆಯನ್ನು ವರ್ಣಿಸುವನು) ಈಕೆ—

ಪದುಮವಿಲ್ಲದ ಲಕ್ಷ್ಮಿ, ಮದನನ । ಮೃದುಲ ಕೈದುವೆ, ಮನೆಯ ಪೆಂಡಿರ
ಹೃದಯ ಶೋಕವು, ಕಾಮವೃಕ್ಷದ ಫುಲ್ಲಕುಸುಮವೆನೆ
ಪದವಿಡಲು ಲೀಲೆಯಲಿ ಸುರತದ । ಪದದ ಲಜ್ಜಾಪ್ರಣಯರಂಗದೆ
ಪದುಳದಿಂ ಪಿಂಬದಿಯೊಳೈತಹರೆಲ್ಲ ವಿಟಜನರು ೧೨

ವಸಂತಸೇನೆ, ನೋಡು—

ಗಿರಿಯ ಶಿಖರಗಳಲ್ಲಿ ಮೋಡಗ। ಳುರವಣಿಸಿ ಗರ್ಜಿಪವು ಜೋಲುತೆ
ವಿರಹಿಣೀ ಹೃದಯಗಳನ್ನೆಸಲೆ ಪ್ರೋಲುತಿರ್ಪವೊಲು
ಭರದೆ ಮೊಳಗನು ಕೇಳಿ ಮೇಲಕೆ। ಗರಿಯ ಕೆದರುತೆ ನವಿಲು ನೆಗೆದಿವೆ
ವರಮಣಿಯ ಬೀಸಣಿಗೆಯಿಂದಲೆ ನಭವ ಬೀಸುವೊಲು ೧೩

ಮತ್ತು

ಕೆಸರಿಂ ಬಾಯ್ ಬರಡಾಗೆ ನೀರ್ಗುಡಿವುದೀ ಧಾರಾಹತಂ ಕಪ್ಪೆಯುಂ
ಉಸಿರಂ ಮೇಲಕಿದೆತ್ತುತಿರ್ಪುದು ನವಿಲ್ ನೀಪಂ ಪ್ರದೀಪೋಪಮಂ
ಸಸಿಯುಂ ಮೇಘದೆ ಸಂವೃತಂ ಕುಜನರಿಂ ಸಂನ್ಯಾಸಿಯೆಂತಂತೆ ತಾಂ
ರಸೆಯೊಳ್ ನೀಚಕುಲೀನೆಯಂತೆ ಚಪಲಳ್ ನಿಲ್ಲಳ್ ಗಡಾ ಮಿಂಚಿವಳ್

ವಸಂತಸೇನೆ—ಭಾವ, ನೀನು ಹೇಳಿದುದು ಸರಿಯಾಗಿದೆ. ಇದೋ—

'ಮೂಢೇ, ನಿರಂತರ ಪಯೋಧರೆಯಾನೆಯೆನ್ನೊಳ್,
ಕಾಂತಂ ವಿಲಾಸವಡೆಗುಂ, ಬರಿದೇನು ನಿನ್ನಿಂ?'—
ಇಂತೆಂದು ಗರ್ಜಿಸುತೆ ಬಾರಿಸುತೆನ್ನನೀಗಳ್
ಮಾರ್ಗಂಗುಡಳ್ ಸವತಿಯ್ಯೆಸಲೆ ರಾತ್ರಿಯೆಂಬಂ ೧೪

ವಿಟ—ಹೌದು, ನಿಜವೇ. ಅವಳನ್ನು ನಿಂದಿಸುವುದೇ ಸರಿ.

ವಸಂತಸೇನೆ—ಭಾವ, ಹೆಣ್ಣಿನ ಸ್ವಭಾವಕ್ಕನಗುಣವಾಗಿ ವಿವೇಕಹೀನಳಾದ ಇವಳನ್ನು ಬೈದಾಗುವುದೇನು? ನೋಡು—

ಸುರಿಯಲಿ ಮಳೆಯಂ ಮೇಘಂ
ಗುರುಗರ್ಜನೆಗೈಯಲಂತೆ ಕೆಡಹಲಿ ಸಿಡಿಲಂ
ಪರಿಗಣಿಸರ್ ಶೀತೋಷ್ಣಮ-
ನುರೆ ಪೆಂಡಿರ್ ಕಾಂತಸಂಗಕಭಿಸಾರಿಕೆಯರ್ ೧೬

ವಿಟ—ವಸಂತಸೇನೆ, ಇತ್ತ ನೋಡು. ಈ ಮೋಡವು—

ಪವನ ಚಪಲವೇಗಂ ಸ್ಥೂಲಧಾರಾಶರೌಘಂ
ಸ್ತನಿತಪಟಹನಾದಂ ಸ್ಪಷ್ಟವಿದ್ಯುತ್ಪತಾಕಂ
ಶಶಿಯ ಕರವ ಮೇಘಂ ಕೊಂಡುದೌ ಬಾನೊಳೀಗಳ್
ಪುರದ ನೃಪನವೋಲ್ತಾಂ ದುರ್ಬಲಾರಾತಿಯಿಂದಂ ೧೭

ವಸಂತಸೇನೆ—ಹೌದು, ನಿಜ. ಇತ್ತ ಈ ಮೋಡಗಳನ್ನೂ ನೋಡು—

ಇವೆ ಮೇಘ್ ಮತ್ತ ಗಜೇಂದ್ರವರ್ಣದಿನಣಂ ಲಂಬೋದರಂಗಳ್ ವಲಂ
ತವೆ ಪೀಡಾಕರಮಾಗೆ ಕೂಟಮೊದಗಲ್ ಮಿಂಚಂತೆ ಬೆಳ್ಳಕ್ಕಿಯಾ
ತವದಿಂತೇತಕೆ ಕೂಗುತಿರ್ಪುದೊ ಬಕಂ 'ಕಾರ್ ಕಾರೆ'ನುತ್ತುಂ ಮನೋ-
ಭವನಿಂ ನೋಯುವ ಪೆಂಡಿರಂ ಕೊಲುವವೋಲ್ ಗಾಯಕ್ಕಮುಪ್ಪಿಕ್ಕುತುಂ

ವಿಟ—ಹೌದು, ವಸಂತಸೇನೆ, ಹೌದು. ಇತ್ತ ಇದನ್ನು ನೋಡು—

ಬಿಳಿಮಕುಟಂ ಬೆಳ್ಳಕ್ಕಿಯೆ
ಬೆಳಗುವ ಸೆಳೆಮಿಂಚೆ ಚಾಮರೋತ್ತಮಮೆನೆ ಬಾನ್-
ದಳಮೀಗಳ್ ಮದ್ದಾನೆಯ
ಕಳೆಯಂ ತಾಂ ತಳೆಯಲಿಚ್ಛಿಪಂದದಿನೆಸೆಗುಂ ೧೯

ವಸಂತಸೇನೆ—ಭಾವ, ನೋಡು, ನೋಡು—

ಇವುಗಳ್ ಹೊಂಗೆಯ ಪತ್ರದಂತೆಸೆಯುತುಂ ನುಂಗಿರ್ಪುವಾ ಸೂರ್ಯನಂ
ಕವಿಯಲ್ ಬಾಣಚಯಂ ಗಡಾನೆ ಕೆಡೆವಂತೀ ಪುತ್ತು ನೀರ್ಘಾತದಿಂ
ನವೆದತ್ತಂತೆಯೆ ಪೊನ್ನ ದೀಪಮೆನಿಸಲ್ ಮಿಂಚುಂ ಗೃಹಾಂತಶ್ಚರಂ
ತವೆ ಬೆಳ್ದಿಂಗಳಶಕ್ತಪತ್ನಿಯೊಲಹಾ ಮೇಘಗಳಿಂಪಾಹೃತಳ್ ೨೦

ವಿಟ—ವಸಂತಸೇನೆ, ನೋಡು, ಧಾರಾವರ್ಷವನ್ನು ಸುರಿಸುತ್ತಿರುವ ಮೋಡಗಳು ಹೇಗೆ ಕಾಣಿಸುತ್ತವೆ!—

ನಡುವಂ ಬಿಗಿದಿರೆ ಮಿಂಚದು
ಬಿಡದಾನೆಗಳೊಲ್ಪರಸ್ಪರಂ ಪಾಯುತ್ತುಂ
ಒಡೆಯಂ ಬೆಸಸಲ್ಕಿಂದ್ರಂ
ಪೊಡವಿಯನಿವು ಬೆಳ್ಳಿಹಗ್ಗದಿಂಪೆತ್ತುವವೋಲ್ ೨೧

ಮತ್ತು

ಜಲದಂ ವಾತವಿಧೂತಮುಂತೆ ಮಹಿಷಪ್ರಸ್ಪರ್ಧಿವರ್ಣಾಂಕಿತಂ
ಚಲವಿದ್ಯುತ್ಪ್ರಕರಂ ವಲಂ ಗರಿಯೆನಲ್ಕಂಭೋಧಿವೋಲ್ ತುಳ್ಕುಗುಂ
ಸಲೆಯೀ ಗಂಧಮನೋಹರಳ್ ಪೊಸಪಸಿರ್ ಪುಲ್ ಚೆಲ್ವಿನಿಂ ಶೋಭಿಪಳ್
ನೆಲವೆಣ್ ಧಾರೆಯ ಪಾಶದಿಂದೆ ಬಿರಿವಳ್ ರತ್ನೇಷುವಿಂದೆಂಬಿನಂ ೨೨

ವಸಂತಸೇನೆ—ಭಾವ, ಇತ್ತ ಮತ್ತೊಂದರ ಸೊಬಗನ್ನು ನೋಡು—

'ಬಾ ಬಾ' ಎಂದು ಶಿಖಂಡಿಕೇಕಿ ಕರೆಯಲ್ ನಾಶಬ್ದಮಂ ಗೆಯ್ಯುತುಂ
ಭೋರೆಂದೊಯ್ಯನೆ ಸಾರಿ ಬಂದು ಕೊರಳಂ ಬೆಳ್ಳಕ್ಕಿಯಾಲಿಂಗಿಸಲ್
ಹಂಸಂ ಪಂಕಜಮಂ ಬಿಸುಟ್ಟತಿಶಯೋದ್ವಿಗ್ನಂ ಸಮಂತೀಕ್ಷಿಸಲ್
ಮೇಘಂ ಮೇಣ್ ದೆಸೆಗಳ್ಗೆ ಕಪ್ಪಿನೊದವಂ ತಿರ್ದುತ್ತೆ ನೀಳ್ದತ್ತಹಾ ೨೩

ವಿಟ—ಸರಿಯಾಗಿ ಹೇಳಿದೆ. ಇದನ್ನು ನೋಡು—

ನಿಷ್ಪಂದೀಕೃತಪದ್ಮಷಂಡನಯನಂ ನಷ್ಟಕ್ಷಪಾವಾಸರಂ
ಮಿಂಚಿಂದಂ ಕ್ಷಣದೃಷ್ಟನಷ್ಟತಿಮಿರಂ ಪ್ರಚ್ಛಾದಿತಾಶಾಮುಖಂ
ನಿಶ್ಚೇಷ್ಟಂ ಮಲಗಿರ್ಪವೋಲೆಸೆವುದೀ ಧಾರಾಗೃಹಾಂತರ್ಗತಂ
ಲೋಕಂ ಕಾರ್ಮುಗಿಲೋಳಿಯಾಗಸವೆ ಮೇಣ್ ಛತ್ರಂಬೊಲಿಂಬಾಗಿರಲ್

ವಸಂತಸೇನೆ—ಭಾವ, ನಿಜವೇ, ನೋಡು, ನೋಡು—

ನಾಯವಾದಳು ತಾರೆ ಕುಜನನಿ। ಕಾಯದೊಳಗುಪಕಾರವೆಂದೆನೆ
ಸ್ತ್ರೀಯರಂತೆಯೆ ಕಾಂತನಗಲಿದ ದೆಸೆಗಳೊಪ್ಪವಲಾ
ಕಾಯುತೊಳಗಡೆಪ್ರೊಯ್ಯುವಿಂದ್ರನ। ಆಯುಧದ ಹತಿಯುರಿಯಲೆಂಬ ವಿ-
ಡಾಯದಲಿ ನೀರಾಗಿ ಕರಗುತೆ ಸುರಿವುದೋ ನಭವು ೨೫

ಮತ್ತು

ಏರುವುದಿಳಿವುದು ಮಳೆಯಂ
ಸೋರಿಸುವುದು ಗರ್ಜಿಸುತ್ತೆ ಮಾಳ್ಪುದು ತಮಮಂ
ಓರಂತೈಸಿರಿ ಮೊದಲೊಳ್
ತೋರಲ್ ನರನಂತೆ ತಳೆದು ನಾನಾಕೃತಿಯಂ ೨೬

ವಿಟ—ಹೌದು, ನಿಜ—

ಮಿಂಚಿಂದಂ ಜ್ವಲಿಸಿರ್ಪವೋಲ್ ನಗುವವೋಲುದ್ದಕ್ಕೆ ಬೆಳ್ಳಕ್ಕಿಯಿಂ
ದೇವೇಂದ್ರಾಯುಧದಿಂದೆ ನರ್ತಿಸುವವೋಲ್ ಧಾರಾಶರೋದ್ಗಾರಿಯಿಂ
ಮೇಘಾಡಂಬರದಿಂದೆ ಕೂಗಿಡುವವೋಲ್ ವಾತಾಳಿಯಿಂ ತೂರುವೋಲ್
ಧೂಮೋದ್ಗಾರಿಯೆನಲ್ಕೆ ತೋರ್ಪುದು ನಭಂ ಮೇಘಾಹಿಸಂಭಾರದಿಂ ೨೭

ವಸಂತಸೇನೆ—

ಜಳಧರ ನೀಂ ನಿರ್ಲಜ್ಜಂ
ಘಳಿಲನೆ ಹೃದಯೇಶಗೃಹಕೆ ಪೊರಮಟ್ಟೆನ್ನಂ

ನೊಳಗಿಂ ಬಿದರಿಸುತಿರ್ಪಯ್
ಮಳೆಗೈಯಿಂ ಮತ್ತೆ ಮತ್ತೆ ಸೋಂಕುತ್ತಿರ್ಪಯ್ ೨೮

ಓ, ಇಂದ್ರನೆ–

ಮುನ್ನೇಂ ರತಿಯೆನಗಿರ್ದುದೆ
ನಿನ್ನೊಳ್ ಮತ್ತೇಕೆ ಗುಡುಗಿನಿಂದಂಜಿಸುವಯ್
ಚೆನ್ನನ ಬಳಿಗೈದುವೆನಾ
ನೆನ್ನಂ ತಡೆಯಲ್ಕೆ ತಗದು ಮಳೆಯಿಂದೀಗಳ್ ೨೯

ಮತ್ತು

ಪುಸಿಯೊರೆದೈ ಗೌತಮನೆಂ
ದಸಿಯಳ್ಗೆ ಅಹಲ್ಯೆಗಂದು ಶಕ್ರನೆ ನೀನೀ-
ಕ್ಷಿಸುತಂತೆನ್ನಯ ಪರಿಯಂ
ಮುಸುಕಿದ ಕಾರ್ಮುಗಿಲನಿಂದು ಪರಿಹರಿಸೆಂಬೆಂ ೩೦

ಅಲ್ಲದೆ—

ಮಳೆಗರೆ ಗರ್ಜಿಸು ಶಕ್ರನೆ
ಕಳುಹಿಸು ಸಿಡಿಲನ್ನೆ ನೂರುಗಟ್ಟಲೆಯೆಂಬೆಂ
ಬಳದಿಂ ತಡೆಯಲಶಕ್ಯಂ
ಘಳಿಲನೆ ಪ್ರಿಯನೆಡೆಗೆ ಪೋಪ ವನಿತಾಜನಮಂ ೩೧

ಪಿರಿದುಂ ಮುಗಿಲಿದು ಗರ್ಜಿಸ-
ಲರಿದೇಂ ಗರ್ಜಿಸಲಿ ನಿಷ್ಠುರರ್ ಪುರುಷರ್ಕಳ್
ಅರಿಯದ ಪೋದೆಯ್ ಮಿಂಚೇ
ಪಿರಿದೆನಿಸುವ ಪೆಣ್ಣ ಶೋಕಮಂ ನೀನುಂ ದಲ್ ೩೨

ವಿಟ—ಒಡತಿಯೆ, ಇವಳನ್ನು ನಿಂದಿಸಬೇಡ. ವಸ್ತುತಃ ಇವಳು ನಿನಗೆ ಉಪಕಾರವನ್ನೇ ಮಾಡುತ್ತಿರುವಳು—

ಇಂದ್ರನಾನೆಯೊಳಿಸೆವ ಪೊನ್ನ ಸರಪಳಿಯಂತೆ
ಶೈಲಶಿಖರದೊಳಿಟ್ಟ ಜೋಳ್ಗುಡಿಯ ತೆರದೆ ;
ಆ ಮಹೇಂದ್ರಗೆ ಮತ್ತೆ ಮನೆದೀಪವೀ ಮಿಂಚು
ನಿನ್ನಿನಿಯನೆಡೆಯನ್ನು ತಾನೆ ತೋರಿಸಿವೆ. ೩೩

ವಸಂತಸೇನೆ—ಭಾವ, ನಿಜ. ಇದೇ ಅವನ ಮನೆ.

ವಿಟ—ಎಲ್ಲ ಕಲೆಗಳಲ್ಲೂ ಚದುರೆಯಾದ ನಿನಗೆ ನಾನು ಹೇಳಿಕೊಡಬೇಕಾದುದೇದೂ ಇಲ್ಲ. ಆದರೂ ವಿಶ್ವಾಸ ನುಡಿಸುತ್ತಿದೆ—ಇಲ್ಲಿ ಒಳಗೆ ಹೋದ ಮೇಲೆ ನೀನು ಮಿತಿಮೀರಿ ಸಿಟ್ಟಾಗಬಾರದು.

ಕೋಪಿಸೆ ರತಿಯಿರದಂತೆಯೆ
ಕೋಪವೆ ಪೋಗಲ್ಕೆ ಕಾಮಮೆತ್ತಲ್ ನಿಲ್ಗುಂ
ಕೋಪಿಸು ಕೋಪಂಗೊಳಿಸು-
ತ್ತೋಪನನಂತೊಲಿದು ನೀನೆಯೊಲಿಯಿಸು ರಮಣೀ ೩೪

ಆಗಲಿ. ಹಾಗೆಯೇ ಸರಿ. ಓ, ಯಾರಲ್ಲಿ? ಆರ್ಯ ಚಾರುದತ್ತನಿಗೆ ಹೋಗಿ ತಿಳಿಸಿರಿ—

ನೋಡಲ್ ಫುಲ್ಲಕದಂಬಗಂಧಮೆಸೆವೀ ಕಾರ್ಗಾಲದೊಳ್ ಬಂದಿಹಳ್
ಕಾಂತಾವಾಸಕೆ ರಾಗದಿಂದೆ ನಲವಿಂ ಕೇಶಂಗಳುಂ ನಾಂದಿರಲ್
ವಿದ್ಯುದ್ವಾರಿತಗರ್ಜಿತಕ್ಕೆ ಬೆದರ್ವಳ್ ತ್ವದ್ದರ್ಶನಕ್ಕಾಟಿಪಳ್
ಪಾದಂ ನೂಪುರಲಗ್ನಕರ್ದಮಮೆನಲ್ ಪ್ರಕ್ಷಾಳನವ್ಯಗ್ರೆಯುಂ ೩೫

ಚಾರುದತ್ತ—(ಕೇಳಿ) ಮಿತ್ರ, ಇದೇನು, ತಿಳಿದುಕೊಂಡು ಬಾ.

ವಿದೂಷಕ—ಅಪ್ಪಣೆ. (ವಸಂತಸೇನೆಯ ಬಳಿಗೆ ಬಂದು, ಆದರದಿಂದ) ನಿನಗೆ ಮಂಗಳವಾಗಲಿ.

ವಸಂತಸೇನೆ—ಆರ್ಯ, ನಮಸ್ಕಾರ; ನಿನಗೆ ಸ್ವಾಗತ. (ವಿಟನನ್ನು ಕುರಿತು) ಭಾವ, ಈ ಕೊಡೆಹಿಡಿಯುವವಳು ನಿನಗೇ ಇನ್ನು ಹಿಡಿಯಲಿ.

ವಿಟ—(ಸ್ವಗತ) ಈ ಉಪಾಯದಿಂದ ನನ್ನನ್ನು ಜಾಣ್ಮೆಯಿಂದಲೇ ಕಳುಹಿಸುತ್ತಿದ್ದಾಳೆ. (ಪ್ರಕಾಶ) ಆಗಲಿ. ವಸಂತಸೇನೆ-

ಸಾಟೋಪ ಕೂಟ ಕಪಟಾನೃತ ಜನ್ಮಗೇಹಂ
ಶಾಠ್ಯಾಲಯಂ ರತಿಕೇಲಿಕಥಾನಿವಾಸಂ
ವೇಶ್ಯಾಪಣಂ ಗಡ ರತೋತ್ಸವಕೆಂದು ಪೇಳರ್
ದಾಕ್ಷಿಣ್ಯಪಣ್ಯಸುಖಮೂಲ್ಯಮೆಯಕ್ಕೆ ನಿಚ್ಚಂ ೩೬

(ನಿಷ್ಕ್ರಮ)

ವಸಂತಸೇನೆ—ಆರ್ಯ, ಮೈತ್ರೇಯ, ನಿಮ್ಮ ಜೂಜುಗಾರನೆಲ್ಲಿ?

ವಿದೂಷಕ—(ಸ್ವಗತ) ಅಚ್ಚರಿಯೇ ಸರಿ. ಈಕೆ ಜೂಜುಗಾರನೆಂದು ದೂರು

ವುದೇ ಗೆಳೆಯನನ್ನು ಹೊಗಳಿದಂತಾಗಿದೆ. (ಪ್ರಕಾಶ) ಪೂಜ್ಯಳೆ, ಇಲ್ಲೇ ಒಣ ಮರಗಳ ತೋಪಿನಲ್ಲಿ.

ವಸಂತಸೇನೆ—ನೀವು ಒಣಮರಗಳ ತೋಪೆನ್ನುವುದು ಯಾವುದು ?

ವಿದೂಷಕ—ಎಲ್ಲಿ ತಿನ್ನಲು, ಕುಡಿಯಲು ಏನೂ ಇಲ್ಲವೋ ಅದೇ.

(ವಸಂತಸೇನೆ ಮುಗುಳ್ನಗೆ ನಗುವಳು)

ವಿದೂಷಕ—ಇನ್ನು ಒಳಕ್ಕೆ ಬಾಮ್ಮ.

ವಸಂತಸೇನೆ—(ಜನಾಂತಿಕ) ಒಳಕ್ಕೆ ಹೋದಕೂಡಲೇ ನಾನೇನು ಹೇಳಬೇಕು?

ಚೇಟಿ—'ಜೂಜುಗಾರ, ನಿನಗೆ ಸುಖಕರವವಷ್ಟೆ' ಎಂದು.

ವಸಂತಸೇನೆ—ಹೇಳುವಷ್ಟು ಧೈರ್ಯ ನನಗುಂಟೆ ?

ಚೇಟಿ—ಸಮಯವೇ ಧೈರ್ಯವನ್ನು ತಂದುಕೊಡುತ್ತದೆ.

ವಿದೂಷಕ—ಒಳಕ್ಕೆ ಬಾಮ್ಮ.

ವಸಂತಸೇನೆ—(ಒಳಕ್ಕೆ ಬಂದು, ಸಮೀಪಿಸಿ, ಹೂಗಳಿಂದ ಹೊಡೆಯುತ್ತ) ಏ ಜೂಜುಗಾರ, ಸಂಜೆ ನಿನಗೆ ಸುಖಕರವಷ್ಟೆ !

ಚಾರುದತ್ತ—(ನೋಡಿ) ಆ, ವಸಂತಸೇನೆ ಬಂದಿರುವಳು (ಹರ್ಷದಿಂದ ಎದ್ದು) ಎಲೌ ಪ್ರಿಯೆ—

ಕಳೆವೆಂ ಸಂಜೆಯನೆಳ್ಚರ
ದೊಳೆ ನಿಚ್ಚಂ ರಾತ್ರಿಯಂತೆ ಕಳೆವುದು ಸುಯ್ಯಿಂ
ಲಲನಾಮಣಿ ನಿನ್ನೊಡನಿರೆ
ಕಳೆವುದು ತಾಂ ದುಃಖಮಿಂದು ಸಂಜೆಯೊಳೀಗಳ್ ೩೭

ನಿನಗೆ ಸುಸ್ವಾಗತ. ಇದೇ ಆಸನ. ಇಲ್ಲಿ ಕುಳಿತುಕೊಳ್ಳಬೇಕು.

ವಿದೂಷಕ—ಇದೋ ಆಸನ. ಪೂಜ್ಯೆ, ಕುಳಿತುಕೊಳ್ಳಬೇಕು.

(ವಸಂತಸೇನೆ ಕುಳಿತುಕೊಳ್ಳುವಳು. ಆಮೇಲೆ ಎಲ್ಲರೂ ಕುಳಿತುಕೊಳ್ಳುವರು.)

ಚಾರುದತ್ತ—ನೋಡು, ನೋಡು—

ಗೆಳೆಯನೆ ಕದಂಬಕುಸುಮಂ
ಮಳೆನೀರಂ ಸೋರಿಸುತ್ತೆ ಕಿವಿಪಿಡೆ ಮೆರೆಗುಂ
ಮೊಲೆಯೊಂದನೆ ನೆನೆಯಿಸುತುಂ
ಸಲೆ ನೃಪತನುಜಂಗೆ ಪಟ್ಟಮಂ ಕಟ್ಟುವವೋಲ್ ೩೮

ಮಿತ್ರ, ವಸಂತಸೇನೆಯ ಬಟ್ಟೆಗಳೆಲ್ಲ ತೊಯ್ದಿವೆ. ಬೇರೆ ಮಡಿಬಟ್ಟೆಯನ್ನು ತಂದುಕೊಡು.

ವಿದೂಷಕ—ಅಪ್ಪಣೆ.

ಚೇಟಿ—ಮೈತ್ರೇಯ, ನೀನು ನಿಲ್ಲು. ನಾನೇ ಒಡತಿಯನ್ನು ಉಪಚರಿಸುತ್ತೇನೆ. (ಹೋಗುವಳು)

ವಿದೂಷಕ—(ಅಪವಾರಿತ) ಅಯ್ಯಾ ಮಿತ್ರ, ಈಕೆಯನ್ನು ಸ್ವಲ್ಪ ಪ್ರಶ್ನೆಮಾಡಬೇಕೆಂದಿದ್ದೇನೆ.

ಚಾರುದತ್ತ—ಆಗಬಹುದು.

ವಿದೂಷಕ—(ಪ್ರಕಾಶ) ಚಂದ್ರನ ಬೆಳ್ದಿಂಗಳೂ ಇಲ್ಲದೆ ಹೀಗೆ ಕಗ್ಗತ್ತಲು ಕವಿದುಕೊಂಡಿರುವ ಈ ದುರ್ದಿನದಲ್ಲಿ ಪೂಜ್ಯಳು ಬಂದ ಕಾರಣವೇನು ?

ಚೇಟಿ—ಆರ್ಯೆ, ಬ್ರಾಹ್ಮಣನು ಏನೂ ಅರಿಯದವನು.

ವಸಂತಸೇನೆ—ಅಲ್ಲ; ನಿಪುಣನೆಂದು ಹೇಳಬೇಕು.

ಚೇಟಿ—ಅಯ್ಯಾ ಆರ್ಯೆ, ಬಂದಿರುವುದು ಕೇಳಿಕೊಂಡು ಹೋಗುವುದಕ್ಕೆ—ಆ ರತ್ನಹಾರದ ಬೆಲೆ ಎಷ್ಟು, ಎಂಬುದನ್ನು.

ವಿದೂಷಕ—(ಜನಾಂತಿಕ) ಅಯ್ಯಾ, ನಾನು ಮೊದಲೇ ಹೇಳಲಿಲ್ಲವೆ—'ರತ್ನಹಾರ ಅಗ್ಗದ್ದು; ಚಿನ್ನದೊಡವೆಯ ಬೆಲೆ ಹೆಚ್ಚು. ಇನ್ನೂ ಕೊಡಬೇಕೆಂದು' ಕೇಳಲು ಅತೃಪ್ತಿಯಿಂದ ಬಂದಿದ್ದಾಳೆ.

ಚೇಟಿ—ಆ ರತ್ನಹಾರವನ್ನು ಆರ್ಯೆ ತನ್ನದೆಂಬ ಭ್ರಮೆಯಿಂದ ಜೂಜಿನಲ್ಲಿ ಸೋತುಬಿಟ್ಟಳು. ರಾಜನ ಕಡೆಯ ಅಧಿಕಾರಿ, ಆ ಸಭಿಕ, ಎಲ್ಲಿ ಹೋದನೋ ತಿಳಿಯಲಿಲ್ಲ.

ವಿದೂಷಕ—ಅಮ್ಮಾ, ಇದೇನು, ಹೇಳಿದ್ದನ್ನೇ ಹೇಳುತ್ತಿರುವೆ.

ಚೇಟಿ—ಆದ್ದರಿಂದ ಅವನು ಸಿಕ್ಕುವವರೆಗೂ ಈ ಚಿನ್ನದೊಡವೆಯನ್ನೇ ತೆಗೆದಿಟ್ಟುಕೊಂಡಿರು. (ತೋರಿಸುವಳು),

(ವಿದೂಷಕನು ವಿಚಾರಮಾಡುವನು)

ಚೇಟಿ—ಆರ್ಯನು ಇಷ್ಟು ವಿಚಾರಿಸುತ್ತಿರುವುದೇಕೆ ? ಇದನ್ನು ಮೊದಲೇನಾದರೂ ನೋಡಿದ್ದಂತಿದೆಯೇ ?

ವಿದೂಷಕ—ಶಿಲ್ಪಿಯ ಕೌಶಲ ಕಣ್ಣನ್ನು ಸೆಳೆಯುತ್ತಿದೆ, ಅಷ್ಟೆ.

ಚೇಟಿ—ನಿನ್ನ ಕಣ್ಣು ನನಗೆ ಮೋಸಮಾಡುತ್ತಿದೆ. ಆ ಚಿನ್ನದೊಡವೆಯೇ ಇದು.

ವಿದೂಷಕ—(ಸಂತೋಷದಿಂದ) ಅಯ್ಯಾ, ಮಿತ್ರ, ನಮ್ಮ ಮನೆಯಿಂದ ಕಳ್ಳರು ಕದ್ದುಕೊಂಡು ಹೋದ ಚಿನ್ನದೊಡವೆಯೇ ಇದು.

ಚಾರುದತ್ತ—ಗೆಳೆಯ—

ಮರಳೀಯಲ್ ನ್ಯಾಸಮನಿದ
ನೊರೆದೆವೊ ನಾವಾವ ನೆವಮನಂತಾ ನೆವಮಂ
ಮರಳೀಗಳ್ ನುಡಿವರೆನಲ್
ಪರಿಕಿಸು ನೀಂ ನಿಜಮೊ ಹಾಸ್ಯಮೋ ಎಂದೀಗಳ್ ೩೯

ವಿದೂಷಕ—ಮಿತ್ರ, ನನ್ನ ಬ್ರಾಹ್ಮಣ್ಯದ ಆಣೆಗೂ ನಿಜ.

ಚಾರುದತ್ತ—ಸಂತೋಷ, ಬಹಳ ಸಂತೋಷ.

ವಿದೂಷಕ—(ಜನಾಂತಿಕ) ಅಯ್ಯಾ, ಇದು ಇವರಿಗೆ ಹೇಗೆ ಸಿಕ್ಕಿತೆಂದು ಕೇಳಬಹುದೆ ?

ಚಾರುದತ್ತ—ತಪ್ಪೇನು ?

ವಿದೂಷಕ—(ಚೇಟಿಯ ಕಿವಿಯಲ್ಲಿ) ಹೀಗೆ ಹೀಗೆ.

ಚೇಟಿ—(ವಿದೂಷಕನ ಕಿವಿಯಲ್ಲಿ) ಹೀಗೆ ಹೀಗೆ.

ಚಾರುದತ್ತ—ಏನು ಮಾತನಾಡುತ್ತಿರುವಿರಿ ? ನಾನೇನು ಹೊರಗಿನವನೆ ?

ವಿದೂಷಕ—(ಚಾರುದತ್ತನ ಕಿವಿಯಲ್ಲಿ) ಹೀಗೆ ಹೀಗೆ.

ಚಾರುದತ್ತ—ಅಮ್ಮಾ, ಚಿನ್ನದೊಡವೆ ಅದೇ ಇದೆಂಬುದು ನಿಜವೇ ?

ಚೇಟಿ—ಆರ್ಯ, ನಿಜ.

ಚಾರುದತ್ತ—ನಾನೆಂದೂ ಪ್ರಿಯವಾರ್ತೆಯನ್ನು ನುಡಿದವರಿಗೆ ಫಲವಿಲ್ಲವೆನಿಸಿಲ್ಲ. ಆದ್ದರಿಂದ ಈ ಉಂಗುರವನ್ನೇ ಬಹುಮಾನವಾಗಿ ತೆಗೆದುಕೊ. (ಉಂಗುರವಿಲ್ಲದ ಕೈಯನ್ನು ಕಂಡು ನಾಚಿಕೆಯಿಂದ ತಲೆತಗ್ಗಿಸುವನು).

ವಸಂತಸೇನೆ—(ಸ್ವಗತ) ಆದ್ದರಿಂದಲೇ ನನಗೆ ನಿನ್ನಲ್ಲಿ ಪ್ರೇಮ.

ಚಾರುದತ್ತ—(ಜನಾಂತಿಕ) ಅಹಾ, ಕಷ್ಟ—

ಧನಹೀನನೆನಿಪ್ಪಾ ಪುರು
ಷನ ಜೀವಿತಮಿರ್ದೊಡೇನು ಪರಿಕಿಸೆ ಮೊದಲೊಳ್
ಮುನಿಸುಂ ಸಂತಸಮೆರಡುಂ
ತನಗೆಂದುಂ ವಿಫಲಮಲ್ತೆ ಕಾರ್ಯಾಶಕ್ತಂ ೪೦

ಮತ್ತು

ಪಕ್ಕವಿಲ್ಲದ ಹಕ್ಕಿ, ಒಣಗಿ ನಿಂತಿಹ ಮರವು,
ನೀರೆಲ್ಲ ಬತ್ತಿರುವ ಕಾಸಾರವು ;
ಹಲ್ಲನೆಲ್ಲವ ಕಳೆದ ವಿಷಸರ್ಪವೆಂಬವಿವು
ಸಮವೆಂಜೆ ಬುವಿಯೊಳಗೆ ಕಡುಬಡವಗೆ. ೪೧

ಮತ್ತು

ಹೋಲುವರು ಕಡುಬಡವರಾ ಶೂನ್ಯ ಗೃಹಗಳನು
ನೀರಿರದ ಕೆರೆಗಳನು, ಮುರಿದ ತರುಗಳನು;
ಪರಿಚಿತರ ಜತೆಯೊಳಗೆ ಬಡತನವ ಮರೆಯಲ್ಕೆ
ಪರಿತೋಷಕಾಲಗಳು ವಿಫಲವಹವಿಂತು. ೪೨

ವಿದೂಷಕ—ಅಯ್ಯಾ, ಇಷ್ಟು ತೀವ್ರವಾಗಿ ಶೋಕಿಸಬೇಡ. (ಪ್ರಕಾಶ—ಹಾಸ್ಯ ಮಾಡುತ್ತ) ಅಮ್ಮಾ, ನನ್ನ ಸ್ನಾನದ ಬಟ್ಟೆಯನ್ನು ಕೊಟ್ಟುಬಿಡು.

ವಸಂತಸೇನೆ—ಆರ್ಯ, ಚಾರುದತ್ತ, ನೀನು ಈ ರತ್ನಹಾರದಿಂದ ನನ್ನನ್ನು ಆಳೆಯಹೊರಟುದು ಸರಿಯೆ ?

ಚಾರುದತ್ತ—(ವೈಲಕ್ಷ್ಯದ ನಗೆಯಿಂದ) ವಸಂತಸೇನೆ, ನೋಡು—

ನಂಬುವರಾರ್ ನಿಜಸಂಗತಿ
ಯಂ ಬುವಿಯೊಳ್ ನನ್ನನೆಲ್ಲರುಂ ನೀಳ್ಕರಿಪರ್
ತಾಂ ಬಡತನಮೆಂಬುದೆ ಅಪ
ನಂಬಿಕೆಗಳ ತಾಣಮಲ್ತೆ ಪೌರುಷಶೂನ್ಯಂ ೪೩

ವಿದೂಷಕ—ಚೇಟಿ, ನೀನು ಇಲ್ಲಿಯೇ ಮಲಗುವೆಯೇನು ?

ಚೇಟಿ—(ನಗುತ್ತ) ಮೈತ್ರೇಯ, ನೀನು ಸ್ವಲ್ಪವೂ ಅರಿಯದವನೆಂಬುದನ್ನು ತೋರಿಸಿಕೊಳ್ಳುತ್ತಿರುವೆ.

ವಿದೂಷಕ—ಅಯ್ಯಾ, ಗೆಳೆಯ, ಸುಖವಾಗಿ ಕುಳಿತ ಜನರನ್ನೆಲ್ಲ ತಳ್ಳಿ

ಹಾಕಿಬಿಡುವಂತೆ ಮತ್ತೆ ಧಾರಾಕಾರವಾಗಿ ಮಳೆ ಸುರಿಯತೊಡಗಿದೆ.

ಚಾರುದತ್ತ—ಸರಿಯಾಗಿ ಹೇಳಿದೆ. ಈ ಧಾರೆಗಳು—

ಒಡೆಯುತೆ ಮೋಡಂಗಳನಿದೊ
ಹುಡಿಯೊಳ್ ಗಡ ನಡೆವ ನೀಳ್ದ ತಾವರೆ ಬೇರೊಲ್
ಕೆಡೆವುವು ಚಂದ್ರನ ಪಾಯದೆ
ಮಿಡಿಯಲ್ ಬಾನ್ ಬಿಡದೆ ಸುರಿವ ಕಣ್ಣೀರೆನಿಸಲ್ ೪೪

ಮತ್ತು

ನೀರ್ಧಾರೆಯಾರ್ಯಜನಮಾನಸಶುದ್ಧಮೆನ್ನಲ್
ಚಂಡಂ ದಲರ್ಜುನಶರಪ್ರತಿರೂಪಮೆನ್ನಲ್
ಮೇಘಂಗಳಿಂತು ಬಲದೇವ ಪಟೋಪಮುಂಗಳ್
ದೇವೇಂದ್ರಮೌಕ್ತಿಕಗಳಂ ಸುರಿಸಿರ್ಪವೆಂಬೆಂ ೪೫

ಪ್ರಿಯೆ, ಇತ್ತ ನೋಡು—

ಇದೋ ತಾಂ ಪಿಷ್ಟತಮಾಲವರ್ಣಸದೃಶಂ ತೀವಿರ್ಪುದಂಭೋಧರಂ
ಇದೊ ತಾಂ ಸಂಜೆಯ ಮಾರುತಂ ಸುರಭಿತಂ ಬೀಸಿರ್ಪುದೌ ಶೀತಲಂ
ಇದೊ ಅಂಭೋದಸಮಾಗಮಪ್ರಣಯದಿಂ ಸ್ವಚ್ಛಂದಮಭ್ಯಾಗತಳ್
ಮುದದಿಂದಾಗಷಮುಂ ಸರಾಗದೊಳೆ ಮಿಂಚಾಲಿಂಗಿಪಳ್ ಕಾಂತನಂ ೪೬

(ವಸಂತಸೇನೆ ಶೃಂಗಾರಭಾವವನ್ನಭಿನಯಿಸಿ ಚಾರುದತ್ತನನ್ನು ಆಲಿಂಗಿಸುವಳು)

ಚಾರುದತ್ತ—(ಸ್ಪರ್ಶಸುಖವನ್ನು ತೋರಿಸಿ ಪ್ರತ್ಯಾಲಿಂಗಿಸಿ)

ಪಿರಿದುಂ ಗುಡುಗಯ್ ಮೋಡವೆ
ಸ್ಮರಪೀಡಿತನಾಗಿಂಲ್ಕೆ ನಿನ್ನಯ ವರದಿಂ-
ದುರುರೋಮಾಂಚಿತದೇಹಂ
ಕರಮಾದುದು ದಲ್ ಕದಂಬ ಕುಸುಮಸಮಾನಂ ೪೭

ವಿದೂಷಕ—ಹಾಳು ತೊತ್ತಿನ ಮಗನೆ, ದುರ್ದಿನ! ಈಕೆಯನ್ನು ಮಿಂಚಿಂದ ಬೆದರಿಸುತ್ತಿರುವ ನೀನು ಈಗ ಅನಾರ್ಯನಾದೆ.

ಚಾರುದತ್ತ—ಮಿತ್ರ, ಬಯ್ಯುವುದು ಸರಿಯಲ್ಲ—

ಬದುಕಲಿ ನೂರ್ಕಾಲಂ ತಾಂ
ದುರ್ದಿನಮಿದು ಮಿಂಚು ಬೆಳಗಲಂತೆಯಜಸ್ರಂ

ಇದೊ ದುರ್ಲಭ ಕಾದಲೆಯಿಂ
ದೊದಗಿರಲಿಂವೆನಗೆ ನಿರ್ಭರಾಲಿಂಗನಮುಂ ೪೮

ಮತ್ತು, ಮಿತ್ರ–

ಅವರಾ ಬಾಳ್ಗಡ ಧನ್ಯಂ
ತವೆ ಮನೆಗೈತಂದ ಕಾಮಿನೀವರತನುವಂ
ಮಳೆನೀರಿಂ ನೆನೆದಿರಲದು
ಕುಳಿರಸೆಯಲ್ ಗಾಢಮಪ್ಪಿ ಸೊಗವಡೆವವರಾ ೪೯

ಪ್ರಿಯೆ, ವಸಂತಸೇನೆ–

ಸಡಿಲ್ದಿರೆ ಕಂಬದ ವೇದಿಕೆ
ತಡೆದಿರ್ಪುದು ನಾಡೆಯೆಂತೊ ಮೇಲಣ ಶಿಲ್ಪಂ
ಒಡೆದಿರೆ ಸುಣ್ಣದ ಲೇಪಂ
ಕುಡಿದುದು ನೀರನ್ನೆ ಚಿತ್ರಭಿತ್ತಿಯುಮೀಗಳ್ ೫೦

(ಮೇಲೆ ನೋಡಿ) ಅಹಾ ಕಾಮನ ಬಿಲ್ಲು! ಪ್ರಿಯೆ, ನೋಡು—

ಮಿಂಚಿದೆ ನಾಲಗೆಯೆನಿಸಲ್
ಸ್ವಂಚಿತ ಸುತ್ರಾಮಚಾಪಮುನ್ನತಭುಜಮುಂ
ಜಳಧರವರ್ಧಿತಹನು ಬಾ-
ನ್ನಳಮಾಕಳಿಸುತ್ತುಮಿರ್ಪುದೈಸಲೆಯೀಗಳ್ ೫೧

ಆದ್ದರಿಂದ ಬಾ, ಒಳಕ್ಕೆ ಹೋಗೋಣ. (ಎದ್ದು ಹೊರಡುವನು)

ತಾಳೆಗರಿಯೊಳು ತಾರ, ತರುಗಳೊಳು ತಾ ಮಂದ್ರ,
ಶಿಲೆಗಳೊಳು ರೂಕ್ಷವೆನೆ ನೀರೊಳಗೆ ಚಂಡ;
ಸಂಗೀತಕಾಲದಲಿ ನುಡಿಸುವಾ ವೀಣೆಯೆನೆ
ಧಾರೆಗಳು ಬೀಳುವುವು ತಾಳಾನುಸಾರ. ೫೨

(ನಿಷ್ಕ್ರಮ—ಎಲ್ಲರೂ)

ಇಲ್ಲಿಗೆ 'ದುರ್ದಿನ' ಎಂಬ ಐದನೆಯ ಅಂಕ ಮುಗಿದುದು.

---

# ಆರನೆಯ ಅಂಕ

(ಪ್ರವೇಶ—ಚೇಟಿ)

ಚೇಟಿ—ಇನ್ನೂ ಒಡತಿ ಏಳಲಿಲ್ಲವೆ? ಇರಲಿ. ಒಳಗೆ ಹೋಗಿ ನೋಡುತ್ತೇನೆ. (ಹೋಗುವಳು)

(ಪ್ರವೇಶ—ಮುಸುಕುಹಾಕಿಕೊಂಡು ಮಲಗಿರುವ ವಸಂತಸೇನೆ)

ವಸಂತಸೇನೆ—(ಎದ್ದು) ಇದೇನು, ರಾತ್ರಿಯೇ ಬೆಳಗಾಗಿಬಿಟ್ಟಿರುವುದೆ?

ಚೇಟಿ—ನಮಗೀಗ ಬೆಳಗಾಗಿದೆ; ಒಡತಿಗೆ ಮಾತ್ರ ಇನ್ನೂ ರಾತ್ರಿಯೇ.

ವಸಂತಸೇನೆ—ಚೇಟಿ, ನಿಮ್ಮ ಜೂಜುಗಾರನೆಲ್ಲಿ?

ಚೇಟಿ—ವರ್ಧಮಾನಕನಿಗೆ ಅಪ್ಪಣೆ ಮಾಡಿ ಪುಷ್ಪಕರಂಡಕವೆಂಬ ಜೀರ್ಣೋದ್ಯಾನಕ್ಕೆ ಆರ್ಯ ಚಾರುದತ್ತನು ಹೋಗಿರುವನು.

ವಸಂತಸೇನೆ—ಅಪ್ಪಣೆ ಮಾಡಿರುವುದೇನು?

ಚೇಟಿ—'ರಾತ್ರಿಯೇ ಗಾಡಿಯನ್ನು ಹೂಡಿರು. ವಸಂತಸೇನೆ ಅದರಲ್ಲಿ ಹೋಗಲಿ' ಎಂದು.

ವಸಂತಸೇನೆ—ಚೇಟಿ, ನಾನು ಹೋಗಬೇಕಾದ್ದೆಲ್ಲಿಗೆ?

ಚೇಟಿ—ಆರ್ಯೆ, ಚಾರುದತ್ತನೆಲ್ಲಿರುವನೋ ಅಲ್ಲಿಗೆ.

ವಸಂತಸೇನೆ—(ಚೇಟಿಯನ್ನಪ್ಪಿಕೊಂಡು) ಚೇಟಿ, ರಾತ್ರೆ ಅವನನ್ನು ಸರಿಯಾಗಿ ನೋಡುವುದಕ್ಕಾಗಲಿಲ್ಲ. ಆದ್ದರಿಂದ ಈಗ ಕಣ್ತುಂಬ ನೋಡುತ್ತೇನೆ. ಚೇಟಿ, ಮನೆಯ ಒಳ ಅಂಗಳಕ್ಕೇನಾದರೂ ಬಂದುಬಿಟ್ಟೆನೆ?

ಚೇಟಿ—ಒಳಮನೆಯನ್ನಷ್ಟೇ ಅಲ್ಲ, ಇಲ್ಲಿಯ ಜನರೆಲ್ಲರ ಹೃದಯವನ್ನೂ ಪ್ರವೇಶಿಸಿಬಿಟ್ಟಿರುವೆ.

ವಸಂತಸೇನೆ—ಚಾರುದತ್ತನ ಪರಿಜನರೇನಾದರೂ ಸಂತಾಪಗೊಳ್ಳುತ್ತಿರುವರೆ?

ಚೇಟಿ—ಮುಂದೆ ಸಂತಾಪಗೊಳ್ಳುವರು.

ವಸಂತಸೇನೆ—ಯಾವಾಗ?

ಚೇಟಿ—ಆರ್ಯೆ ಇಲ್ಲಿಂದ ಹೋದಾಗ.

ವಸಂತಸೇನೆ—ಎಂದ ಮೇಲೆ ಮೊದಲು ನಾನು ಸಂತಾಪಪಡಬೇಕು. (ಅನುನಯದಿಂದ) ಈ ರತ್ನಹಾರವನ್ನು ಹಿಡಿ. ನನ್ನ ಸೋದರಿಯಾದ ಧೂತಾದೇವಿಗೆ ಹೋಗಿ ಕೊಡು. ನಾನು ಹೀಗೆಂದೆನೆಂದು ಹೇಳು—'ಚಾರುದತ್ತನ ಗುಣಗಳಿಗೆ ಸೋತ ಈ ದಾಸಿ ತಮಗೂ ಹಾಗೆಯೇ ಸರಿ. ಆದ್ದರಿಂದ ಈ ರತ್ನಹಾರ ತಮ್ಮ ಕತ್ತಿನ ಆಭರಣವಾಗಿಯೇ ಉಳಿಯಬೇಕು.'

ಚೇಟಿ—ಇದರಿಂದ ಚಾರುದತ್ತನು ಆರ್ಯೆಯ ಮೇಲೆ ಸಿಟ್ಟಾಗಬಹುದಲ್ಲವೆ?

ವಸಂತಸೇನೆ—ಹೋಗು. ಸಿಟ್ಟಾಗುವುದಿಲ್ಲ.

ಚೇಟಿ—(ತೆಗೆದುಕೊಂಡು) ಆರ್ಯೆಯ ಅಪ್ಪಣೆ.

(ಹೋಗಿ ತಿರುಗಿ ಬಂದು) ಆರ್ಯೆ, ಧೂತಾದೇವಿ ಹೇಳುತ್ತಾಳೆ–ಆರ್ಯಪುತ್ರನು ನಿಮಗೆಂದು ಇದನ್ನು ಉಡುಗೊರೆಯಿತ್ತಾಗಿದೆ. ಇದನ್ನು ನಾನು ತೆಗೆದುಕೊಳ್ಳುವುದು ಸರಿಯಲ್ಲ. ಆರ್ಯಪುತ್ರನೇ ನನ್ನ ಪರಮಾಭರಣವೆಂಬುದನ್ನು ಆರ್ಯೆ ತಿಳಿದುಕೊಳ್ಳಲಿ.

(ಪ್ರವೇಶ ಹುಡುಗನನ್ನೆತ್ತಿಕೊಂಡ ರದನಿಕೆ)

ರದನಿಕೆ—ಬಾ, ಮಗು, ಕಿರುಬಂಡಿಯೊಡನೆ ಆಡೋಣ.

ಹುಡುಗ—(ದುಃಖದಿಂದ) ರದನಿಕೆ, ಈ ಮಣ್ಣಿನ ಕಿರುಬಂಡಿ ನನಗೇಕೆ? ಆ ಚಿನ್ನದ ಕಿರುಬಂಡಿಯನ್ನೇ ಕೊಡು.

ರದನಿಕೆ—(ಶೋಕದಿಂದ ನಿಟ್ಟುಸಿರಿಡುತ್ತ) ಕಂದ, ನಮಗೆ ಚಿನ್ನದ ಮಾತೆಲ್ಲಿಯದು? ಅಪ್ಪನಿಗೆ ಮತ್ತೆ ಐಶ್ವರ್ಯ ಬಂದ ಮೇಲೆ ನೀನೂ ಚಿನ್ನದ ಕಿರುಬಂಡಿಯೊಡನೆಯೇ ಆಡುವೆಯಂತೆ! ಇವನ ಮನಸ್ಸನ್ನು ತಿರುಗಿಸಬೇಕು. ಆರ್ಯೆ ವಸಂತಸೇನೆಯ ಬಳಿಗೆ ಕರೆದುಕೊಂಡು ಹೋಗುತ್ತೇನೆ. (ಸಮೀಪಿಸಿ) ಆರ್ಯೆ, ನಮಸ್ಕಾರ.

ವಸಂತಸೇನೆ—ರದನಿಕೆ, ನಿನಗೆ ಸ್ವಾಗತ. ಇವನು ಯಾರ ಹುಡುಗ? ಮೈಗೆ ಒಡವೆಗಳಿಲ್ಲದಿದ್ದರೂ ಚಂದ್ರವದನನಾಗಿ ನನ್ನ ಹೃದಯಕ್ಕೆ ಆನಂದವನ್ನು ಬೀರುತ್ತಿರುವನು!

ರದನಿಕೆ—ಇವನೇ ಆರ್ಯ ಚಾರುದತ್ತನ ಕುಮಾರ—ರೋಹಸೇನ.

ವಸಂತಸೇನೆ—(ತೋಳನ್ನು ನೀಡಿ) ಬಾ ಕಂದ, ಆಲಿಂಗಿಸು. (ತೊಡೆಯ ಮೇಲೆ ಕೂರಿಸಿಕೊಂಡು) ತಂದೆಯ ರೂಪವನ್ನೇ ಇವನು ಅನುಕರಣ ಮಾಡುವಂತಿದೆ.

ರದನಿಕೆ—ರೂಪವನ್ನಷ್ಟೇ ಅಲ್ಲ; ಶೀಲವನ್ನೂ ಎಂದು ನಂಬುತ್ತೇನೆ. ಇವನಿಂದಲೇ ಆರ್ಯ ಚಾರುದತ್ತನಿಗೆ ಎಷ್ಟೋ ಆನಂದವಾಗುತ್ತದೆ.

ವಸಂತಸೇನೆ—ಈಗ ಇವನು ಅಳುತ್ತಿರುವುದೇಕೆ?

ರದನಿಕೆ—ನೆರೆಮನೆಯ ಹುಡುಗನ ಚಿನ್ನದ ಕಿರುಬಂಡಿಯನ್ನಿಟ್ಟುಕೊಂಡು ಇವನಾಡುತ್ತಿದ್ದನು. ಅವನು ಅದನ್ನು ತೆಗೆದುಕೊಂಡು ಹೋಗಿಬಿಟ್ಟನು. ಅದು ಬೇಕೆಂದು ಇವನು ಕೇಳಲಾರಂಭಿಸಿದ್ದರಿಂದ ನಾನೇ ಈ ಮಣ್ಣಿನ ಕಿರುಬಂಡಿಯನ್ನು .ಇವನಿಗೆ ಮಾಡಿಕೊಟ್ಟಿದ್ದೇನೆ. ಈಗೆನ್ನುತ್ತಾನೆ—'ರದನಿಕೆ, ಈ ಮಣ್ಣಿನ ಕಿರುಬಂಡಿ ನನಗೇಕೆ? ಆ ಚಿನ್ನದ ಕಿರುಬಂಡಿಯನ್ನೇ ಕೊಡು' ಎಂದು.

ವಸಂತಸೇನೆ—ಅಯ್ಯೋ, ಕಷ್ಟ. ಈ ಮಗುವೂ ಕೂಡ ಕಂಡವರ ಐಶ್ವರ್ಯವನ್ನು ಕಂಡು ಶೋಕಿಸುವಂತಾಗಿದೆ. ಓ, ಭಾಗ್ಯದೇವತೆ, ನೀನು ಪದ್ಮಪತ್ರದ ಜಲಬಿಂದುಗಳಂತಿರುವ, ಪುರುಷರ ಅದೃಷ್ಟಗಳೊಡನೆಯೇ ಆಟವಾಡುವೆ. (ಕಣ್ಣೀರು ಬಿಡುತ್ತ) ಮಗು, ಅಳಬೇಡವಪ್ಪಾ. ಚಿನ್ನದ ಕಿರುಬಂಡಿಯಿಂದಲೇ ಆಡುವೆಯಂತೆ.

ಹುಡುಗ—ರದನಿಕೆ, ಇವಳು ಯಾರು!

ವಸಂತಸೇನೆ—ಮಗು, ಈಕೆಯೂ ನಿನಗೆ ತಾಯಿಯಾಗಬೇಕು.

ಹುಡುಗ—ರದನಿಕೆ, ನೀನು ಸುಳ್ಳಾಡುತ್ತಿರುವೆ. ನನ್ನ ತಾಯಿಯಾದರೆ ಇವಳಿಗೆ ಒಡವೆಯೆಲ್ಲಿಂದ ಬರಬೇಕು?

ವಸಂತಸೇನೆ—ಮಗು, ಅರಿಯದ ಬಾಯಿಂದ ಎದೆಗರಗುವಂತಹ ಮಾತುಗಳನ್ನಾಡುತ್ತಿರುವೆ. (ಒಡವೆಗಳನ್ನು ಕಳಚಿಟ್ಟು, ಅಳುತ್ತ) ಇದೋ, ಈಗ ನಿಜವಾಗಿಯೂ ನಿನ್ನ ತಾಯಿಯಾದೆ. ಆದ್ದರಿಂದ ಈ ಒಡವೆಗಳನ್ನು ನೀನೇ ತೆಗೆದುಕೊ. ಚಿನ್ನದ ಕಿರುಬಂಡಿಯನ್ನು ಮಾಡಿಸಿಕೊ.

ಹುಡುಗ—ಹೊರಟು ಹೋಗು. ನಾನು ತೆಗೆದುಕೊಳ್ಳುವುದಿಲ್ಲ. ನೀನು ಅಳುತ್ತಿರುವೆ.

ವಸಂತಸೇನೆ—(ಕಣ್ಣೀರನ್ನೊರಸಿಕೊಂಡು) ಕಂದ, ನಾನು ಅಳುವುದಿಲ್ಲ. ಹೋಗು, ಆಟವಾಡು. (ಒಡವೆಗಳಿಂದ ಮಣ್ಣಿನ ಕಿರುಬಂಡಿಯನ್ನು ತುಂಬಿ) ಮಗು, ಚಿನ್ನದ ಕಿರುಬಂಡಿಯನ್ನು ಮಾಡಿಸಿಕೊ.

(ನಿಷ್ಕ್ರಮ—ಹುಡುಗನೊಡನೆ ರದನಿಕೆ)

(ಪ್ರವೇಶ—ರಥದಲ್ಲಿ ಕುಳಿತ ಚೇಟ)

ಚೇಟ—ರದನಿಕೆ, ರದನಿಕೆ, ಆರ್ಯೆ ವಸಂತಸೇನೆಗೆ ಹೋಗಿ ಹೇಳು—ಪಕ್ಕದ ಬಾಗಿಲಿನಲ್ಲಿ ಮುಸುಕು ಹಾಕಿರುವ ರಥ ಸಿದ್ಧವಾಗಿದೆ.

(ಪ್ರವೇಶ—ರದನಿಕೆ)

ರದನಿಕೆ—ಆರ್ಯೆ, ಈ ವರ್ಧಮಾನಕನು ಹೇಳುತ್ತಾನೆ—'ಪಕ್ಕದ ಬಾಗಿಲಿನಲ್ಲಿ ರಥ ಸಿದ್ಧವಾಗಿದೆ' ಎಂದು.

ವಸಂತಸೇನೆ—ಒಂದು ಕ್ಷಣ ಅಲ್ಲೇ ನಿಲ್ಲಲಿ. ನಾನು ಅಲಂಕಾರಮಾಡಿಕೊಂಡು ಹೊರಡುತ್ತೇನೆ.

ರದನಿಕೆ—(ಹೋಗಿ ಬಂದು) ವರ್ಧಮಾನಕ, ಒಂದು ಕ್ಷಣ ನಿಲ್ಲು; ಆರ್ಯೆ ಅಲಂಕರಿಸಿಕೊಳ್ಳುತ್ತಿದ್ದಾಳೆ.

ಚೇಟ—ಓಹೋ, ಹೋ, ನಾನೂ ರಥದ ಹಾಸಿಗೆಯನ್ನು ಮರೆತು ಬಂದೆನಲ್ಲಾ! ಇರಲಿ, ಹೋಗಿ ತೆಗೆದುಕೊಂಡು ಬರುತ್ತೇನೆ. ಈ ಎತ್ತುಗಳೂ ಮೂಗುದಾರ ಹಾಕಿರುವುದರಿಂದ ತಂಟೆ ಮಾಡುತ್ತಿವೆ. ಇರಲಿ. ರಥದಲ್ಲೇ ಹೋಗಿ ಬರುತ್ತೇನೆ. (ಹೋಗುವನು)

ವಸಂತಸೇನೆ—ಚೇಟಿ, ಒಡವೆಗಳನ್ನು ತೆಗೆದುಕೊಂಡು ಬಾ; ಅಲಂಕರಿಸಿಕೊಳ್ಳುತ್ತೇನೆ. (ಸಿಂಗರಿಸಿಕೊಳ್ಳುತ್ತ ಇರುವಳು)

(ಪ್ರವೇಶ—ರಥದಲ್ಲಿ ಸ್ಥಾವರಕನೆಂಬ ಚೇಟ)

ಸ್ಥಾವರಕ—ರಾಜನ ಭಾವಮೈದುನನಾದ ಸಂಸ್ಥಾನಕನು ನನಗೆ ಹೀಗೆ ಅಪ್ಪಣೆಮಾಡಿದ್ದಾನೆ—'ಸ್ಥಾವರಕ, ರಥವನ್ನು ತೆಗೆದುಕೊಂಡು ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಬೇಗ ಬಾ' ಎಂದು. ಆದ್ದರಿಂದ ಅಲ್ಲಿಗೇ ಹೋಗುತ್ತೇನೆ.—'ಏ, ಎತ್ತುಗಳೇ. ಓಡಿರಿ, ಓಡಿರಿ'—(ಆಟೋಪದಿಂದ)ಅರೇ, ರೇ, ಸರಿಯಿರಿ, ಸರಿಯಿರಿ. (ಆಲಿಸಿ) ಏನೆಂದಿರಿ? 'ಇದು ಯಾರ ರಥ' ವೆನ್ನುವಿರಾ? ಇದು ರಾಜನ ಭಾವಮೈದುನ

ನಾದ ಸಂಸ್ಥಾನಕನ ರಥ. ಆದ್ದರಿಂದ ಬೇಗಬೇಗ ಸರಿಯಿರಿ.(ನೋಡಿ) ....ಯಾರಿವನು? ನನ್ನನ್ನು ಕಂಡೊಡನೆ ಸಭಿಕನನ್ನು ಕಂಡ ಸಾಲವುಳ್ಳ ಜೂಜುಗಾರನಂತೆ ಮರೆಯಾಗಿ ತಪ್ಪಿಸಿಕೊಳ್ಳುತ್ತಿರುವನಲ್ಲಾ ! ಯಾರಿರಬಹುದು? ಆ, ಯಾರಾದರೆ ನನಗೇನು ? ಬೇಗ ಹೋಗುವೆನು. ಅರೇ, ರೇ, ಹಳ್ಳಿಗರೇ, ಸರಿಯಿರಿ ; ಸರಿಯಿರಿ. ಏನೆಂದಿರಿ?– 'ಒಂದು ಕ್ಷಣ ನಿಲ್ಲು. ಚಕ್ರವನ್ನು ಸ್ವಲ್ಪ ಉರುಳಿಸಿಕೊಡು' ಎಂದಿರಾ ? ಅರೇ, ರೇ, ರಾಜನ ಭಾವಮೈದುನನ ಕಡೆಯವನಾದ ಈ ಶೂರನು ಚಕ್ರವನ್ನೆತ್ತಲು ಬರುವುದೆಂದರೇನು ? ಅಥವಾ ಈ ಬಡಪಾಯಿ ಏಕಾಕಿಯಾಗಿದ್ದಂತಿದೆ. ಹೋಗಲಿ, ಇಷ್ಟು ನೂಕಿಕೊಡುತ್ತೇನೆ. ಈ ರಥವನ್ನು ಆರ್ಯ ಚಾರುದತ್ತನ ತೋಪಿನ ಪಕ್ಕದ ಬಾಗಿಲಿನಲ್ಲಿ ನಿಲ್ಲಿಸುತ್ತೇನೆ. (ರಥವನ್ನು ನಿಲ್ಲಿಸಿ) ಇದೋ, ಬಂದೆ. (ಹೋಗುವನು)

ಚೇಟಿ—ಆರ್ಯೆ, ಚಕ್ರದ ಅರೆಗಳ ಸದ್ದಿನಂತಿದೆ. ರಥ ಬಂದಾಯಿತು.

ವಸಂತಸೇನೆ—ಚೇಟಿ, ಹೋಗು. ನನ್ನ ಹೃದಯವು ತ್ವರೆಗೊಂಡಿದೆ. ಪಕ್ಕದ ಬಾಗಿಲನ್ನು ತೋರಿಸು.

ಚೇಟಿ—ಆರ್ಯೆ ಇತ್ತ ಬರಬೇಕು.

ವಸಂತಸೇನೆ—(ಬಲಗಣ್ಣು ಅದುರುವುದನ್ನು ನೋಡಿ, ರಥವನ್ನು ಏರಿ) ಇದೇಕೆ ಬಲಗಣ್ಣು ಅದಿರುತ್ತಿದೆ? ಅಥವಾ ಚಾರುದತ್ತನ ದರ್ಶನವೇ ಎಲ್ಲ ಅಶುಭಗಳನ್ನೂ ನಿವಾರಣೆ ಮಾಡುತ್ತದೆ.

(ಪ್ರವೇಶ–ಸ್ಥಾವರಕ)

ಸ್ಥಾವರಕ—ಅಡ್ಡವಾಗಿದ್ದ ಗಾಡಿಗಳನ್ನೆಲ್ಲ ಪಕ್ಕಕ್ಕೆ ಸರಿಸಿಯಾಯಿತು. ಇನ್ನು ಮುಂದಕ್ಕೆ ಹೊಡೆಯುತ್ತೇನೆ. (ಗಾಡಿಯನ್ನೋಡಿಸುತ್ತ, ಸ್ವಗತ) ರಥ ಭಾರವಾಗಿರುವಂತಿದೆ! ಅಥವಾ ಚಕ್ರವನ್ನು ನೂಕಿ ಆಯಾಸವಾಗಿರುವ ನನಗೆ ರಥ ಭಾರವಾಗಿರುವಂತೆ ಕಾಣುತ್ತದೆಯೇನೋ ! ಇರಲಿ. ಹೋಗುವೆನು—ನಡೆಯಿರಿ, ಎತ್ತುಗಳೆ, ನಡೆಯಿರಿ.

(ನೇಪಥ್ಯದಲ್ಲಿ)

ಅರೇ, ರೇ, ಕಾವಲಿನವರೆ, ನಿಮ್ಮ ನಿಮ್ಮ ಸ್ಥಾನಗಳಲ್ಲಿ ಎಚ್ಚರದಿಂದಿರಿ.

ಇದೋ ಈ ಗೋಪಾಲನ ಮಗನು ಸೆರೆಮನೆಯ ಪಾಲಕನನ್ನು ಕೊಂದು, ಬಂಧನವನ್ನು ಮುರಿದು, ಸೆರೆಯಿಂದ ಬಿಡಿಸಿಕೊಂಡೋಡುತ್ತಿದ್ದಾನೆ. ಅವನನ್ನು ಹಿಡಿಯಿರಿ, ಹಿಡಿಯಿರಿ.

(ತೆರೆಯನ್ನು ಎತ್ತಿ, ಗಾಬರಿಯಿಂದ ಆರ್ಯಕನ ಪ್ರವೇಶ. ಒಂದು ಕಾಲಿನಲ್ಲಿ ಸರಪಳಿಯಿದೆ. ಮುಖಕ್ಕೆ ಮುಸುಕು ಹಾಕಿಕೊಂಡಿದ್ದಾನೆ.)

ಸ್ಥಾವರಕ—(ಸ್ವಗತ) ಪಟ್ಟಣದಲ್ಲಿ ದೊಡ್ಡ ಕೋಲಾಹಲವೇ ಉಂಟಾಗಿದೆ. ನಾನು ಬೇಗ ಬೇಗ ಹೋಗುವೆನು. (ನಿಷ್ಕ್ರಮ)

ಆರ್ಯಕ—

ದೊರೆಯ ಸೆರೆಯು ಕುತ್ತವೆಂಬ
ಪಿರಿಯ ಶೋಕಜಲಧಿಯ,
ದಾಂಟಿ ಸುಳಿವೆ ಕಾಲ ಕಡೆಗೆ
ನಿಗಡವೆಳೆಯಲತಿಶಯ;
ಗೂಟವನ್ನು ಕಿತ್ತು ನಡೆವ
ಕರಿಯೆನಲ್ಕೆ ನಿಶ್ಚಯ. ೧

ನೋಡಿರಿ! ಸಿದ್ಧಾದೇಶದಿಂದ ಭೀತಿಗೊಂಡ ಪಾಲಕ ದೊರೆ ನನ್ನನು ಗೊಲ್ಲರಹಳ್ಳಿಯಿಂದ ಕರೆತಂದು ಸಾಯುವಂತೆ ಗೂಢ ಬಂಧನಾಗಾರದಲ್ಲಿ ನನ್ನನ್ನು ಸೆರೆಯಿಟ್ಟಿದ್ದನು. ನನ್ನ ಪ್ರಿಯಮಿತ್ರ ಶರ್ವಿಲಕನ ಅನುಗ್ರಹದಿಂದ ಆ ಸೆರೆಯಿಂದ ತಪ್ಪಿಸಿಕೊಂಡೀಗ ಹೊರಬಿದ್ದಿದ್ದೇನೆ. (ಕಣ್ಣೀರೊರೆಸಿಕೊಳ್ಳುತ್ತ)

ಭಾಗ್ಯ ನನ್ನದಾಗೆ ತಪ್ಪು ನನ್ನದೇನು ಬಂದಿತು?
ವನದ ಕರಿಯ ತೆರದೊಳೇಕೆ ಸೆರೆಯೊಳಿಡುವುದೆನ್ನನು?
ದೈವಸಿದ್ಧಿಯನ್ನು ನೋಡೆ ಮೀರಲಾರಿಗಪ್ಪುದು?
ಅವನೆ ರಾಜ, ಬಲದೊಳಧಿಕ, ಅವನೊಳೇನು ವೈರವು? ೨

ಮಂದಭಾಗ್ಯನಾದ ನಾನು ಈಗೆಲ್ಲಿ ಹೋಗಲಿ? (ನೋಡಿ) ಇಲ್ಲಿ ಯಾರೋ ಪುಣ್ಯಾತ್ಮರ ಮನೆಯ ಪಕ್ಕದ ಬಾಗಿಲು ತೆಗೆದಿದೆ.

ಮನೆಯಿದು ಮುರಿದಿದೆ ಹೋಗಿದೆಯಗುಳಿಯು
ಇಗೊ ಪೆರ್ಬಾಗಿಲಿಗೆಂದೆನಲು;

ಮನೆಯೊಡೆಯನು ದುರ್ದೆಸೆಗೀಡೆಂಬೆನು
ಭಾಗ್ಯವು ಪೋಗಿರಲೆನ್ನವೊಲು. ೩

ಇಲ್ಲೇ ಒಳಕ್ಕೆ ಹೋಗಿ ನಿಲ್ಲುವೆನು.

(ನೇಪಥ್ಯದಲ್ಲಿ)

'ನಡೆಯಿರಿ, ಎತ್ತುಗಳೇ, ನಡೆಯಿರಿ.'

ಆರ್ಯಕ—(ಆಲಿಸಿ) ಓ, ರಥವೊಂದು ಇತ್ತ ಕಡೆಗೇ ಬರುತ್ತಿದೆ.

ಬಹುಜನರ ಯಾನವಿದೊ ಹೀನಜನರಿಲ್ಲದಿಹ?
ಹೆಣ್ಣನುಯ್ಯಲು ಬಂದ ಕಿರುಬಂಡಿಯಹುದೊ?
ಪ್ರಮುಖಜನರಿಂಗುಚಿತವೆನೆ ಹೊರಗೆ ಪೋಪುದಿದೊ?
ಶೂನ್ಯವಿದ ಕಳುಹಿಸಿತೊ ದೈವವೆನಗೆಂದು? ೪

(ರಥದೊಡನೆ ಪ್ರವೇಶ—ವರ್ಧಮಾನಕ)

ವರ್ಧಮಾನಕ—ಆಶ್ಚರ್ಯ. ನಾನು ರಥದ ಹಾಸಿಗೆಯನ್ನು ತಂದಾಯಿತು. ರದನಿಕೆ, ಆರ್ಯೆ ವಸಂತಸೇನೆಗೆ ಹೋಗಿ ಹೇಳು—'ಸಿದ್ಧವಾಗಿ ರಥ ಬಂದಿದೆ. ಅದನ್ನು ಹತ್ತಿ ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಆರ್ಯೆ ಹೋಗಬೇಕು' ಎಂದು.

ಆರ್ಯಕ—(ಆಲಿಸಿ) ಓ, ಇದು ಗಣಿಕೆಯ ರಥ. ಹೊರಗೆ ಹೋಗುವುದೂ ಆಗಿದೆ. ಆಗಲಿ. ಹತ್ತಿಕೊಳ್ಳುವೆನು. (ಹತ್ತಿರ ಬರುವನು)

ಚೇಟ—(ಕೇಳಿ) ಓ, ಕಾಲಂದಿಗೆಯ ಸದ್ದಾಗುತ್ತಿದೆ. ಆರ್ಯೆ ಬಂದಾಗಿರಬೇಕು. ಆರ್ಯೆ, ಈ ಎತ್ತುಗಳು ಮೂಗದಾರ ಹೊಸದಾದ್ದರಿಂದ ತಂಟೆ ಮಾಡುತ್ತವೆ. ಆದ್ದರಿಂದ ಹಿಂದಿನಿಂದಲೇ ರಥವನ್ನು ಹತ್ತಿಕೊಳ್ಳಮ್ಮ.

(ಆರ್ಯಕನು ಹಿಂದಿನಿಂದ ರಥವನ್ನು ಹತ್ತುವನು)

ಚೇಟ—ಹೆಜ್ಜೆಯಿಡುವಾಗ ಬಂದ ಕಾಲಂದುಗೆಯ ಸದ್ದು ನಿಂತಿದೆ. ರಥವೂ ಭಾರವಾಗಿದೆ. ಆದ್ದರಿಂದ ಈಗ ಆರ್ಯೆ ಹತ್ತಿಕೊಂಡಾಗಿದೆಯೆಂದು ತಿಳಿಯುತ್ತೇನೆ. ಇನ್ನು ಹೋಗುವೆನು.—'ನಡೆಯಿರಿ. ಎತ್ತುಗಳೇ, ನಡೆಯಿರಿ.

(ಪ್ರವೇಶ–ವೀರಕ)

ವೀರಕ—ಅರೇ, ರೇ, ಎಲೇ! ಜಯ, ಜಯಮಾನ, ಚಂದನಕ, ಮಂಗಲ, ಪುಷ್ಪಭದ್ರ, ಮುಂತಾದವರೇ—

ಅರೆ ಸುಮ್ಮನೆಯೇಂ ನಡೆವಿರಿ
ಯುರವಣೆಯಿಂ ಗೋಪದಾರಕಂ ನಿರ್ಬದ್ಧಂ
ಮುರಿಯುತೆ ಗಮಿಸಿದನೈಸಲೆ
ನರಪತಿಯೆದೆಯಂತೆ ಸೆರೆಯುಮಂ ತಾನೀಗಳ್ ೫

ಏ, ರಾಜಬೀದಿಯ ಪೂರ್ವದ ಹೆಬ್ಬಾಗಿಲಿನಲ್ಲಿ ನೀನು ಹೋಗಿ ನಿಲ್ಲು. ನೀನು ಪಶ್ಚಿಮದ ಬಾಗಿಲಲ್ಲಿ ನಿಲ್ಲು. ನೀನು ದಕ್ಷಿಣದ ಬಾಗಿಲಿನಲ್ಲಿ ನಿಲ್ಲು. ನೀನು ಉತ್ತರದ ಬಾಗಿಲಲ್ಲಿ ನಿಲ್ಲು. ಈ ಕೋಟೆಯ ಗೋಡೆಯ ಮೇಲೆ ನಾನು ಚಂದನಕನೊಡನೆ ಹತ್ತಿ ನಿಂತು ನೋಡುತ್ತೇನೆ. ಬಾ, ಚಂದನಕ, ಬಾ. ಇತ್ತ ಹೋಗೋಣ.

(ಸಂಭ್ರಮದಿಂದ ಪ್ರವೇಶ–ಚಂದನಕ)

ಚಂದನಕ—ಅರೇ, ರೇ! ವೀರಕ, ವಿಶಲ್ಯ, ಭೀಮಾಂಗದ, ದಂಡಕಾಲಕ, ದಂಡಶೂರ ಮುಂತಾದವರೇ!—

ನಡೆಯಿರಿ ಧೈರ್ಯದಿನೀಗಳ್
ಹುಡುಕಿರಿ ಮೇಣ್ ಬೇಗದಿಂದೆ ಸತ್ವರಮೀಗಳ್
ನಡೆಯುಳ್ ಸಿರಿ ದೊರೆಯತ್ತಣಿ-
ನೊಡನೆಯೆ ತಾಂ ಬೇರೆ ವಂಶಕೆಂಬವೊಲನಿಶಂ ೬

ಮತ್ತು

ತೋಟಗಳಲಿ ಜೂಜುಮನೆಯೊಳಂತೆ ದಾರಿಯಲ್ಲಿ
ಊರಿನಲ್ಲಿ ಪೇಟೆಯಲ್ಲಿ ದನದ ಗೊತ್ತಿನಲ್ಲಿ;
ಎಲ್ಲ ಎಲ್ಲ ಕಡೆಗಳಲ್ಲಿ ಬೇಗ ಬೇಗ ಹುಡುಕಿರಿ
ಎಲ್ಲಿ ಎಲ್ಲಿ ಶಂಕೆಯುಂಟೊ ಅಲ್ಲಿ ಎಲ್ಲ ನಡೆಯಿರಿ. ೭

ಎಲೆ ಎಲೆ ವೀರಕ, ತೋರುವೆಯೇನನು
ನುಡಿಯುವೆಯಳುಕದೆ ಭರದಿಂದೆ;

ಬಂಧನವೊಡೆಯುತೆ ಗೋಪಕುಮಾರನ-
ನಾವನೊ ಬಿಡಿಸುವನೀ ತೆರದೆ? ೮

ಯಾವನ ಜಾತಕದೊಳು ರವಿಯಷ್ಟಮ
ಯಾವನಿಗಿಂದುವು ನಾಲ್ಕನೆಯ;
ಯಾವನಿಗಾರನೆಯೆನಿಪನೊ ಶುಕ್ರನು
ಯಾವನಿಗೈದಂಗಾರಕನು? ೯

ಯಾವನ ಜನ್ಮದೆ ಗುರುವಾರನೆಯನೊ
ನವಮನೊ ಪರಿಕಿಪೆ ರವಿಸುತನು;
ಆತನೆ ಗೋಪಕುಮಾರನನುಯ್ವನು
ಬದುಕಿರಲಿನ್ನೂ ಚಂದನಕ. ೧೦

ವೀರಕ—ಭಟ, ಚಂದನಕ,

ಯಾರೋ ಮಹಿಲದಿನುಯ್ವರು ನಿಜವಿದು
ನಿನ್ನೆದೆಯಾಣೆಯು, ಚಂದನಕ;
ರವಿಯರೆಯುದಿಸಿದ ಸಮಯದಿನಾತನು
ಗೋಪಕುಮಾರನು ಕಾಣದಿಹ. ೧೧

ವರ್ಧಮಾನಕ—ನಡೆಯಿರಿ, ಎತ್ತುಗಳೇ, ನಡೆಯಿರಿ.

ಚಂದನಕ—(ನೋಡಿ) ಅರೇ, ರೇ, ನೋಡು—

ಮುಸುಕಿನ ರಥವಿದು ಪೋಗುತಲಿರುವುದು
ನರಪತಿಮಾರ್ಗದ ಮಧ್ಯದಲಿ;
ಮೊದಲು ವಿಚಾರಿಸು ಯಾರದು ಎಲ್ಲಿಗೆ
ಪೋಗುತಲಿರುವುದು ರಥವೆಂದು? ೧೨

ವೀರಕ—(ನೋಡಿ) ಎಲಾ ಗಾಡಿಯವನೆ, ರಥವನ್ನು ಮುಂದೆ ಬಿಡಬೇಡ. ಈ ರಥ ಯಾರದು? ಇದರಲ್ಲಿ ಇರುವವರಾರು? ಎಲ್ಲಿಗೆ ಹೋಗುತ್ತಿರುವೆ?

ವರ್ಧಮಾನಕ—ಇದು ಆರ್ಯ ಚಾರುದತ್ತನ ರಥ. ಇದರಲ್ಲಿ ಆರ್ಯೆ ವಸಂತಸೇನೆಯಿದ್ದಾಳೆ. ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿ

ಚಾರುದತ್ತನ ವಿಹಾರಾರ್ಥನಾಗಿ ತೆಗೆದುಕೊಂಡು ಹೋಗುತ್ತಿದ್ದೇನೆ.

ವೀರಕ—(ಚಂದಕನ ಹತ್ತಿರ ಬಂದು) ಈ ಗಾಡಿಯವನು ಹೇಳುತ್ತಾನೆ—'ರಥ ಆರ್ಯ ಚಾರುದತ್ತನದು. ಒಳಗಿರುವವಳು ವಸಂತಸೇನೆ. ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಹೋಗುತ್ತಿದೆ' ಎಂದು.

ಚಂದನಕ—ಹಾಗಾದರೆ ಹೋಗಲಿ.

ವೀರಕ—ನೋಡವೆಯೇ!

ಚಂದನಕ—ಹೌದು.

ವೀರಕ—ಯಾರ ವಿಶ್ವಾಸದ ಮೇಲಿಂದ?

ಚಂದನಕ—ಆರ್ಯ ಚಾರುದತ್ತನ.

ವೀರಕ—ಚಾರುದತ್ತ ಯಾರೋ, ವಸಂತಸೇನೆ ಯಾರೋ, ನೋಡದೆಯೇ ಕಳುಹಿಸುವುದೆಂದರೇನು?

ಚಂದನಕ—ಏನು, ಆರ್ಯ ಚಾರುದತ್ತ, ವಸಂತಸೇನೆ, ಒಬ್ಬರನ್ನೂ ಕಾಣೆಯಾ? ಚಾರುದತ್ತನನ್ನೂ ವಸಂತಸೇನೆಯನ್ನೂ ನೀನು ಅರಿಯೆಯೆಂದ ಮೇಲೆ ಗಗನದಲ್ಲಿ ಚಂದ್ರಿಕಾಸಮೇತನಾದ ಚಂದ್ರನನ್ನೂ ಅರಿಯೆಯೆಂದೇ ಆಯಿತು.

ಆ ಗುಣಾರವಿಂದನಂ, ಶೀಲಗಣಕೆ ಸೋಮನಂ,
ದೀನದುಃಖಹಾರಿಯಂ, ಚತುಸ್ಸಮುದ್ರರತ್ನನಂ,
ಕಾಣದಿರ್ಪರುಂಟೆ?
ಅರಿಯದಿರ್ಪರುಂಟೆ? ೧೩

ಊರಿನಲ್ಲಿ ಪೂಜೆಗರ್ಹರಿಬ್ಬರೈಸೆ ತಿಲಕರು;
ಆ ವಸಂತಸೇನೆಯಾರ್ಯೆಯಂತೆ ಚಾರುದತ್ತನು-
ಧರ್ಮಮಾರ್ಗನಿರತನು. ೧೪

ವೀರಕ—ಅರೇ, ಚಂದನಕ—

ಬಲ್ಲೆ ಚಾರುದತ್ತನನ್ನು
ಬಲ್ಲೆನಾ ವಸಂತಸೇನೆ-
ಯನ್ನು ಪೂರ್ಣವಾಗಿಯೂ;

ರಾಜಕಾರ್ಯವೊದಗಿ ಬರಲು
ನನ್ನ ತಂದೆಯನ್ನೆ ನಾನು
ಅರಿವನಲ್ಲವೆಂದಿಗೂ. ೧೫

ಆರ್ಯಕ—(ಸ್ವಗತ) ಇವರಲ್ಲಿ ಒಬ್ಬನು ನನ್ನ ಪೂರ್ವಜನ್ಮದ ವೈರಿ; ಇನ್ನೊಬ್ಬನು ನನ್ನ ಪೂರ್ವಜನ್ಮದ ಬಂಧು. ಏಕೆಂದರೆ—

ಒಂದೆ ಕೆಲಸವ ಗೈಯುವಾಗಲು
ಒಂದೆ ಶೀಲವು ಕಾಣದು ;
ಮದುವೆ ಚಿತೆಗಳ ಬೆಂಕಿಯೆರಡೂ
ಬೇರೆಬೇರೆಯೆ ಎಂಬೊಲು. ೧೬

ಚಂದನಕ—ರಾಜನಿಗೆ ನಂಬಿಕೆಯಿರುವ ನಿಪುಣ ಸೇನಾಪತಿಯೆಂದರೆ ನೀನು. ಇದೋ, ಎತ್ತುಗಳನ್ನು ಹಿಡಿದಿದ್ದೇನೆ. ನೀನೇ ಪರೀಕ್ಷಿಸಿ ನೋಡು.

ವೀರಕ—ನೀನೂ ರಾಜನಿಗೆ ನಂಬಿಕೆಯಿರುವ ಸೇನಾಪತಿಯೇ. ಆದ್ದರಿಂದ ನೀನೇ ನೋಡು.

ಚಂದನಕ—ನಾನು ನೋಡಿದರೆ ನೀನು ನೋಡಿದಂತಾಗುವುದೇ?

ವೀರಕ—ನೀನು ನೋಡಿದರೆ ಪಾಲಕರಾಜನೇ ನೋಡಿದಂತಾಗುತ್ತದೆ.

ಚಂದನಕ—ಅರೇ, ನೊಗವನ್ನು ಇಳಿಸು.

(ಚೇಟನು ಇಳಿಸುವನು)

ಆರ್ಯಕ—(ಸ್ವಗತ) ಅಯ್ಯೋ, ಕಾವಲಿನವರು ನನ್ನನ್ನು ನೋಡಿಬಿಡುವರಲ್ಲಾ. ಮಂದಭಾಗ್ಯನಾದ ನನ್ನ ಹತ್ತಿರ ಆಯುಧವೂ ಇಲ್ಲ. ಅಥವಾ—

ಭೀಮನ ಹಾಗೆಯೆ ಮಾಡುವೆನೊಡನೆಯೆ,
ಬಾಹುಗಳಪ್ಪವು ಶಸ್ತ್ರಗಳು ;
ಕದನಂಗೈಯುತೆ ಬರುವಾ ಮರಣವು
ಲೇಸದು ಸೆರೆಯೊಳು ಸಾವುದಕೆ. ೧೭

ಅಥವಾ ಇದು ಸಾಹಸಕ್ಕೆ ಸಮಯವಲ್ಲ.

(ಚಂದನಕನು ರಥವನ್ನು ಹತ್ತಿ ನೋಡುವನು)

ಆರ್ಯಕ—ಶರಣಾಗತನಾಗಿದ್ದೇನೆ.

ಚಂದನಕ—ಶರಣಾಗತನಿಗೆ ಅಭಯವೀಯುತ್ತೇನೆ.

ಆರ್ಯಕ—

ಬಿಡುವಳ್ ಜಯಸಿರಿಯವನಂ
ಬಿಡುವರ್ ಕೆಳೆಯರ್ಕಳಂತೆ ಬಾಂಧವಜನರುಂ
ಎಡೆಯಪ್ಪಂ ಹಾಸ್ಯಕವಂ
ಕಡುವೈನ್ಯದೆ ಶರಣು ಬಂದನಂ ಕಾಯದವಂ ೧೮

ಚಂದನಕ—ಓ, ಗೋಪಾಲನ ಮಗ ಆರ್ಯಕನು ಗಿಡಗನಿಂದ ತಪ್ಪಿಸಿಕೊಂಡ ಹಕ್ಕಿಯಂತೆ ಬೇಡನ ಕೈಗೆ ಸಿಕ್ಕಿಬಿದ್ದನಲ್ಲಾ! (ಯೋಚಿಸಿ) ಇವನು ನಿರಪರಾಧಿ; ಅಲ್ಲದೆ ಶರಣಾಗತ. ಆರ್ಯಚಾರುದತ್ತನ ರಥದಲ್ಲಿದ್ದಾನೆ; ಪ್ರಾಣರಕ್ಷಕನಾದ ಆರ್ಯ ಶರ್ವಿಲಕನ ಮಿತ್ರ ಬೇರೆ. ಅತ್ತ ನೋಡಿದರೆ ರಾಜಾಜ್ಞೆ. ಈಗ ಏನು ಮಾಡುವುದು ಯೋಗ್ಯ? ಏನಾಗುವುದೋ ಆಗಿ ಕೊಳ್ಳಲಿ. ಇವನಿಗೆ ಮೊದಲೇ ಅಭಯವನ್ನಿತ್ತಾಯಿತು—

ಭೀತಂಗಭಯಮನೀಯುತೆ
ಸಾತಿಶಯಪರೋಪಕಾರನಿರತಂಗೆನಗಂ
ಬರ್ಪೊಡೆ ನಾಶಂ ಬರಲಿಂ
ಮತ್ತದೆ ತಾಂ ಗುಣಮೆನಿಪ್ಪುದೈಸಲೆ ಬುವಿಯೊಳ್ ೧೯

(ಭಯದಿಂದಿಳಿದು) ಆರ್ಯನನ್ನು—(ಅರ್ಧೋಕ್ತಿಯಲ್ಲೇ ತಿದ್ದಿಕೊಂಡು) ಇಲ್ಲ, ಆರ್ಯೆ ವಸಂತಸೇನೆಯನ್ನು–ನೋಡಿದೆ. ಅವಳು ಹೇಳುತ್ತಾಳೆ 'ಇದು ಯೋಗ್ಯವೆ? ಇದು ಸರಿಯೆ? ನಾನು ಆರ್ಯಚಾರುದತ್ತನನ್ನು ಹಿಂಬಾಲಿಸಿ ಹೋಗುತ್ತಿರುವಾಗ ರಾಜಮಾರ್ಗದಲ್ಲಿ ತೊಂದರೆ ಮಾಡಬಹುದೇ?' ಎಂದು

ವೀರಕ—ಚಂದನಕ, ನನಗೆ ಈಗ ಸಂದೇಹ ಹುಟ್ಟಿದೆ.

ಚಂದನಕ—ನಿನಗೆ ಯಾವ ಸಂದೇಹ?

ವೀರಕ—
ಸೆರೆ ಬಿಗಿದಿರ್ಪುದು ಕಂಠದ
ಘುರಘುರ ದನಿಯಂತೆ ಪೊಣ್ಮುಗುಂ ನಿನಗೀಗಳ್

ಒರೆವಯ್ ಕಂಡವೊಲಾರ್ಯನ
ಮರಳಿಯುನೊರೆವಯ್ ವಸಂತಸೇನೆಯನೆಂದ. ೨೦

ಆದ್ದರಿಂದ ಇದನ್ನು ನಾನು ನಂಬುವಂತಿಲ್ಲ.

ಚಂದನಕ—ಅರೇ, ನಿನಗೆಂತಹ ಅಪನಂಬಿಕೆ? ನಾವು ದಾಕ್ಷಿಣಾತ್ಯರು ಮಾತನಾಡುವುದೇ ಅಸ್ಪಷ್ಟವಾಗಿ. ಅಲ್ಲದೆ 'ಖಶ', 'ಖತ್ತಿ', 'ಖಡ', 'ಖಡಟ್ಠ', 'ವಿಡ', 'ಕರ್ಣಾಟ', 'ಕರ್ಣ', 'ಪ್ರಾವರಣ', 'ದ್ರಾವಿಡ', 'ಚೋಲ', 'ಚೀನ', 'ಬರ್ಬರ', 'ಖೇರ', 'ಖಾನ', 'ಮುಖ', 'ಮಧುಘಾತ', ಮುಂತಾದ ಅನೇಕ ಮ್ಲೇಚ್ಛಭಾಷಾಭೇದಗಳನ್ನು ತಿಳಿದ ನಾವು ಮನಸ್ಸಿಗೆ ಬಂದಂತೆ ಹೇಳುತ್ತೇವೆ-'ಆರ್ಯ ಅಥವಾ ಆರ್ಯೆ, ಕಂಡ ಅಥವಾ ಕಂಡಳು' ಎಂದು.

ವೀರಕ—ಆಗಲಿ, ನಾನೂ ನೋಡಿಬರುತ್ತೇನೆ. ಇದು ರಾಜಾಜ್ಞೆ. ನಾನು ರಾಜನಿಗೆ ವಿಶ್ವಾಸಪಾತ್ರ.

ಚಂದನಕ—ನಾನೇನು ರಾಜನಿಗೆ ಅವಿಶ್ವಾಸಪಾತ್ರನಾಗಿಬಿಟ್ಟೆನೋ?

ವೀರಕ—ಅಲ್ಲ, ಸ್ವಾಮಿಯ ಅಪ್ಪಣೆ.

ಚಂದನಕ—(ಸ್ವಗತ) ಆರ್ಯ ಗೋಪಾಲನ ಮಗ ಆರ್ಯ ಚಾರದತ್ತನ ರಥದಲ್ಲಿ ಕುಳಿತು ತಪ್ಪಿಸಿಕೊಳ್ಳುವನೆಂದರೆ ಆಗ ಚಾರುದತ್ತನನ್ನು ರಾಜನು ದಂಡಿಸುವನು. ಇದಕ್ಕೇನು ಉಪಾಯ ಮಾಡಲಿ? (ಯೋಚಿಸಿ) ಕರ್ಣಾಟಕ ಕಲಹದ ಪ್ರಯೋಗ ಮಾಡುತ್ತೇನೆ. (ಪ್ರಕಾಶ) ಅರೇ ವೀರಕ! ನಾನು–ಚಂದನಕ–ನೋಡಿಯಾದುದನ್ನು ಮತ್ತೆ ನೀನು ನೋಡುವೆಯಲ್ಲವೆ? ನೀನು ಯಾರೋ?

ವೀರಕ—ಅರೇ, ನೀನು ಯಾರು ಕೇಳುವುದಕ್ಕೆ?

ಚಂದನಕ—ಗೌರವಸ್ಥನೂ ಮರ್ಯಾದಸ್ಥನೂ, ಆದ ನೀನು ನಿನ್ನ ಜಾತಿ ಯಾವುದೆಂಬುದನ್ನೂ ಮರೆತಿರುವೆ.

ವೀರಕ—(ಕೋಪದಿಂದ) ಅರೇ, ನನ್ನ ಜಾತಿ ಯಾವುದು?

ಚಂದನಕ—ಯಾರು ಹೇಳಬೇಕು?

ವೀರಕ—ನೀನೇ ಹೇಳು.

ಚಂದನಕ—ಅಥವಾ ನಾನು ಹೇಳುವುದಿಲ್ಲ.

ನಿನ್ನಯ ಜಾತಿಯನರಿತಿರ್ದರು ನಾ-
ನೊರೆಯೆನು ಎನ್ನಯ ಶೀಲದೊಳು ;
ಮನದೊಳಗುಳಿಯಲಿ ತಾನದು, ಬೇಲದ
ಕಾಯನ್ನೊಡೆಯಲು ಫಲವೇನು ? ೨೧

ವೀರಕ—ಇಲ್ಲ, ಹೇಳು, ಹೇಳು.

(ಚಂದನಕನು ಸನ್ನೆ ಮಾಡುವನು)

ವೀರಕ—ಆ, ಏನದು ?

ಚಂದನಕ—

ಮುರುಕು ಸಾಣೆಕಲ್ಲು ಕೈಲಿ
ಜನರ ಗಡ್ಡ ಬೋಳಿಸೆ,
ಕತ್ತಿ ಹಿಡಿದ ಕೆಲಸಿ ನೀನು
ಆದೆ ಸೇನೆಗಧಿಪತಿ. ೨೨

ವೀರಕ—ಎಲೋ, ಚಂದನಕ, ಗೌರವಸ್ಥನಾದ ನೀನು ಕೂಡ ನಿನ್ನ ಜಾತಿಯನ್ನು ಮರೆತಿರುವೆ.

ಚಂದನಕ—ಎಲಾ, ಚಂದ್ರವಿಶುದ್ಧನಾದ ಈ ಚಂದನಕನ ಜಾತಿಯನ್ನು ಎತ್ತಿ ಆಡಲೇನಿದೆ ?

ವೀರಕ—ಯಾರು ಹೇಳಬೇಕು ?

ಚಂದನಕ—ನೀನೇ ಹೇಳು, ಹೇಳು.

(ವೀರಕನು ಸನ್ನೆ ಮಾಡುವನು)

ಚಂದನಕ—ಎಲೋ, ಏನದು ?

ವೀರಕ—ಎಲೋ, ಕೇಳು, ಕೇಳು—

ನಿನ್ನ ಜಾತಿ ಬಹಳ ಶುದ್ಧ—
ತಂದೆ ಭೇರಿ, ತಾಯಿ ಪಟಹ, ಅಣ್ಣ ನೋಡೆ ಕರಡಿಗೆ ;
ಆದೊಡೀಗ ಸೇನೆಗೆ, ನೀನೆಯಿರುವೆಯಧಿಪತಿ ! ೨೩

ಚಂದನಕ—(ಕೋಪದಿಂದ) ನಾನು, ಚಂದನಕ, ಚಮ್ಮಾರನಲ್ಲವೆ ! ರಥವನ್ನು ನೋಡು, ತೋರಿಸುತ್ತೇನೆ.

ವೀರಕ—ಎಲೋ ಗಾಡಿಯವನೆ, ಗಾಡಿಯನ್ನು ತಿರುಗಿಸು. ನೋಡುವೆನು.

(ಚೇಟನು ತಿರುಗಿಸುವನು. ವೀರಕನು ಗಾಡಿಯನ್ನು ಏರಲಾರಂಭಿಸುವನು. ಹಿಂದಿನಿಂದ ಚಂದನಕನು ಕೂದಲನ್ನೆಳೆದು ಕೆಡಹುವನು; ವೀರಕನನ್ನು ಕಾಲಿಂದೊದೆಯುವನು.)

ವೀರಕ—(ಕೋಪದಿಂದ ಎದ್ದು) ಎಲೋ, ನನ್ನಷ್ಟಕ್ಕೆ ನಾನು ರಾಜಾಜ್ಞೆಯನ್ನು ನಡೆಸುತ್ತಿರುವಾಗ, ನೀನು ಕೂದಲೆಳೆದು ಕೆಡವಿ ಕಾಲಿಂದ ಒದ್ದಿರುವೆ. ಲೋ, ಕೇಳು. ನ್ಯಾಯಾಲಯದಲ್ಲಿ ನಿನ್ನನ್ನೆಳೆಸಿ ಕೈ ಕಾಲುಗಳನ್ನು ಕಡಿಸದಿದ್ದರೆ ನಾನು ವೀರಕನೇ ಅಲ್ಲ.

ಚಂದನಕ—ಎಲೋ, ರಾಜಾಲಯಕ್ಕಾದರೂ ಹೋಗು, ನ್ಯಾಯಾಲಯಕ್ಕಾದರೂ ಹೋಗು. ನಿನ್ನಂತಹ ಕುನ್ನಿಯಿಂದೇನಾದೀತು!

ವೀರಕ—ಹಾಗೆಯೇ ಆಗಲಿ. (ಹೋಗುವನು)

ಚಂದನಕ—(ಸುತ್ತಲೂ ನೋಡಿ) ಲೋ, ಗಾಡಿಯವನೆ, ನೀನು ಹೋಗು. ಯಾರಾದರೂ ಕೇಳಿದರೆ ಹೇಳು—'ಚಂದನಕ ವೀರಕರಿಬ್ಬರೂ ರಥವನ್ನು ನೋಡಿಯಾಗಿರುವುದರಿಂದ ಹೋಗುತ್ತಿದೆ' ಎಂದು. ಆರ್ಯೆ, ವಸಂತಸೇನೆ, ನನ್ನ ಗುರುತಾಗಿ ನಿನಗೆ ಇದನ್ನು ಕೊಟ್ಟಿರುತ್ತೇನೆ. (ಎಂದು ಕತ್ತಿಯನ್ನು ಕೊಡುವನು.)

ಆರ್ಯಕ—(ಕತ್ತಿಯನ್ನು ತೆಗೆದುಕೊಂಡು, ಸಂತೋಷದಿಂದ, ಸ್ವಗತ)—

ಮುತ್ತೊದಗಿತು ವರಶಸ್ತ್ರಂ
ಕೆತ್ತುವುದೀ ಬಲದ ಭುಜವೆ ಮೇಲಿಂ ಮೇಲಿಂ
ಮತ್ತೆಲ್ಲಂ ಅನುಕೂಲಂ
ಮಿತ್ರಂ ತಾಂ ರಕ್ಷಿಸಿರ್ಪನೆನ್ನಂ ನೋಡಲ್ ೨೪

ಚಂದನಕ—ಆರ್ಯೆ—

ಎನ್ನೊಳ್ ನಂಬಿಕೆಯಾದುದೆ
ಬಿನ್ನಹಮಿದು ಚಂದನಕನ ನೆನೆವುದು ನೀನುಂ
ಎನ್ನಂ ಲೋಭಮೊಳಿದನಾ-
ನಿನ್ನೇನನುರಾಗದಿಂವೆ ನುಡಿಯುತ್ತಿರ್ಪೆಂ ೨೫

ಆರ್ಯಕ—

ಚಂದ್ರನ ಶೀಲಸಮಾನಂ
ಚಂದನಕಂ ದೈವದಿಂದೆ ಯೆನ್ನಯ ಮಿತ್ರಂ

ಇಂದಾಗಿರೆ ನೆನೆವೆನಣಂ
ಚಂದನನಂ ಸಿದ್ಧವಾಕ್ಯದಂತೆಯೆ ಫಲಿಸಲ್ ೨೬

ಚಂದನಕ—

ಹರನುಂ ಹರಿಯುಂ ಬ್ರಹ್ಮನು
ಮುರೆ ರವಿಯುಂ ಶಶಿಯುಮುಭಯಮುಂ ನೀಡುತ್ತಂ
ಪೊರೆಯಲಿ ನಿನ್ನಂ ತರಿಯು-
ತ್ತರಿಗಣವ ನಿಶುಂಭಶುಂಭರಂ ದೇವಿಯವೊಲ್ ೨೭

(ರಥಸೊಡನೆ ವರ್ಧಮಾನಕನ ನಿಷ್ಕ್ರಮ.)

ಚಂದನಕ—(ನೇಪಥ್ಯವನ್ನು ನೋಡಿ) ಅರೇ, ನಾನು ಹೊರಡುವ ಹೊತ್ತಿಗೆ ಹಿಂದಿನಿಂದ ಮೈತಾಗುವಂತೆ ಪ್ರಿಯಮಿತ್ರನಾದ ಶರ್ವಿಲಕನೇ ಹೋಗುತ್ತಿದ್ದಾನೆ. ಇರಲಿ. ಈಗಂತೂ ರಾಜನಿಗೆ ವಿಶ್ವಾಸಪಾತ್ರನೂ ಮುಖ್ಯ ಸೇನಾಧಿಕಾರಿಯೂ ಆದ ವೀರಕನ ವೈರವನ್ನು ಕಟ್ಟಿಕೊಂಡಾಯಿತು. ಆದ್ದರಿಂದ ಇನ್ನು ನಾನೂ ಕೂಡ ಮಕ್ಕಳು ಮತ್ತು ಸೋದರರೊಡನೆ ಇವನನ್ನೇ ಹಿಂಬಾಲಿಸುವೆನು. (ನಿಷ್ಕ್ರಮ)

ಇಲ್ಲಿಗೆ 'ರಥಗಳ ಪರಿವರ್ತನ' ಎಂಬ ಆರನೆಯ ಅಂಕ ಮುಗಿದುದು.

---

# ಏಳನೆಯ ಅಂಕ

(ಪ್ರವೇಶ—ಚಾರುದತ್ತ ಮತ್ತು ವಿದೂಷಕ)

ವಿದೂಷಕ—ಅಹಾ, ನೋಡು, ಪುಷ್ಪಕರಂಡಕ ಜೀರ್ಣೋದ್ಯಾನದ ಸೊಬಗನ್ನು ನೋಡು.

ಚಾರುದತ್ತ—ಹೌದು. ಇದರ ಸೊಬಗು ಬಹಳ ರಮ್ಯವಾಗಿದೆ—

ತರುಗಳ್ ವರ್ತಕರೆನಿಸಲ್
ವರಸುಮಗಳ್ ಪಣ್ಯದಂತೆ ಕಣ್ಗೊಳಿಸಿರ್ಕುಂ!
ಕರಮುಂ ಕೊಳ್ಳುವವೊಲ್ ಮಧು-
ಕರಪುರುಷರ್ ಮತ್ತೆ ಸುತ್ತಿ ಸುಳಿಯುತ್ತಿರ್ದರ್ ೧

ವಿದೂಷಕ—ಮಿತ್ರ, ಯಾವ ಅಲಂಕಾರವೂ ಇಲ್ಲದೆ ರಮಣೀಯವಾಗಿರುವ ಈ ಶಿಲಾಸನದ ಮೇಲೆ ಕುಳಿತುಕೊ.

ಚಾರುದತ್ತ—(ಕುಳಿತು) ಗೆಳೆಯ, ವರ್ಧಮಾನಕನು ತಡಮಾಡುತ್ತಿರುವನು!

ವಿದೂಷಕ—ನಾನು ವರ್ಧಮಾನಕನಿಗೆ ಹೇಳಿದ್ದೆ—'ವಸಂತಸೇನೆಯನ್ನು ಕರೆದುಕೊಂಡು ಬೇಗ ಬಾ' ಎಂದು.

ಚಾರುದತ್ತ—ಹಾಗಾದರೆ ತಡಮಾಡುತ್ತಿರುವುದೇಕೆ ?

ಮುಂದೊಂದಿರ್ಪುದೊ ಮೆಲ್ಲನೈದುವ ರಥಂ ತನ್ಮಾರ್ಗಮಂ ಕಾಯ್ವನೋ
ಭಂಗಂಗೊಂಡಿರಲಚ್ಚು ನೇರ್ಪಡಿಪನೋ ಕಿತ್ತಿರ್ಪುದೋ ಕಣ್ಣಿಯೋ
ಮಾರ್ಗಾಂತಸ್ಥಿತಮಾಗಿ ದಿಮ್ಮಿಗಳಿರಲ್ ತಾಂ ಕಾಯ್ವನೋ ದಾರಿಯಂ
ನೋಡಲ್ ಮೆಲ್ಲನೆ ಎತ್ತನೋಡಿಸುತವಂ ಸ್ವಚ್ಛಂದವೇಂ ಬರ್ಪನೋ ೨

(ಪ್ರವೇಶ—ಆರ್ಯಕನಡಗಿರುವ ರಥಸೊಡನೆ ವರ್ಧಮಾನಕ)

ವರ್ಧಮಾನಕ—ನಡೆಯಿರಿ, ಎತ್ತುಗಳೇ, ನಡೆಯಿರಿ.

ಆರ್ಯಕ—(ಸ್ವಗತ)

ನರಪತಿಜನರಂ ಮೇಣ್ ಕಾಣುತುಂ ಭೀತಭೀತಂ
ಚರಣನಿಗಡದಿಂದಂ ಸಾವಕಾಶಪ್ರಚಾರಂ
ಪರಿವೆಸಿವನ ರಥದೊಳ್ ಗುಪ್ತರೂಪಂ ಗಡಾನುಂ
ಪರಭೃತಮೆನೆ ಗೂಡೊಳ್ ರಕ್ಷಿತಂ ಕಾಗೆಯಿಂದಂ ೭

ಓ, ಊರಿಂದ ತುಂಬಾ ದೂರ ಹೊರಗೆ ಬಂದಂತಾಯಿತು. ಈಗ ಈ ರಥದಿಂದಿಳಿದು ಮರಗಳ ತೋಪಿನಲ್ಲಿ ಅಡಗಲೋ? ಅಥವಾ ರಥದ ಒಡೆಯನನ್ನು ನೋಡಲೋ? ಬೇಡ, ಮರದ ತೋಪಿಗೆ ಹೋಗುವುದು ಬೇಡ. ಪೂಜ್ಯ ಚಾರುದತ್ತನು ಆಶ್ರಿತವತ್ಸಲನೆಂದು ಕೇಳಿದ್ದೇನೆ. ಅದನ್ನು ಪ್ರತ್ಯಕ್ಷವಾಗಿ ಕಂಡು ಹೋಗುವೆನು—

ಕಡುದುಃಖದಿಂ ನೊಂದು ಪಾರಾಗಿ ಬಂದೆನ್ನ-
ನಾ ಸುಜನ ನೋಡಲ್ಕೆ ಮುದವನಾನುವನು;
ಈ ದೆಸೆಗೆ ತಾನಿಳಿದ ತನುವೆನ್ನ ನಿಂತಿಹುದು
ಆ ಮಹಾತ್ಮನ ಗುಣದ ಮಹಿಮೆಯಿಂದೆನಲು. ೮

ವರ್ಧಮಾನಕ—ಇದೇ ಆ ಉದ್ಯಾನನ. ಹತ್ತಿರಕ್ಕೆ ಹೋಗುವೆನು. (ಸಮೀಪಿಸಿ) ಆರ್ಯ, ಮೈತ್ರೇಯ!

ವಿದೂಷಕ—ಓ, ಒಳ್ಳೆಯ ಸುದ್ದಿಯನ್ನು ಹೇಳುತ್ತೇನೆ. ವರ್ಧಮಾನಕನು ಮಾತಾಡುತ್ತಿದ್ದಾನೆ. ವಸಂತಸೇನೆ ಬಂದಿರಬೇಕು.

ಚಾರುದತ್ತ—ಸಂತೋಷ. ಬಹಳ ಸಂತೋಷ.

ವಿದೂಷಕ—ತೊತ್ತಿನ ಮಗನೆ, ಇಷ್ಟೇಕೆ ತಡಮಾಡಿದೆ?

ಚೇಟ—ಆರ್ಯ, ಮೈತ್ರೇಯ, ಕೋಪಿಸಬೇಡ. ರಥದ ಹಾಸಿಗೆಯನ್ನು ಮರೆತ ಕಾರಣ, ಹೋಗಿ ಬರುವುದರಲ್ಲಿ ತಡವಾಗಿಬಿಟ್ಟಿತು.

ಚಾರುದತ್ತ—ವರ್ಧಮಾನಕ, ರಥವನ್ನು ತಿರುಗಿಸು. ಗೆಳೆಯ, ಮೈತ್ರೇಯ, ವಸಂತಸೇನೆಯನ್ನು ಇಳಿಸಿಕೊ.

ವಿದೂಷಕ—ತಾನೇ ಇಳಿಯದೆ ಇರುವುದಕ್ಕೆ ಇವಳ ಕಾಲಿಗೇನಾದರೂ ಸರಪಳಿ ಹಾಕಿದೆಯೇ? (ಎಂದು ರಥದ ಬಾಗಿಲನ್ನು ತೆರೆದು) ಅಯ್ಯಯ್ಯೋ ವಸಂತಸೇನೆಯಿಲ್ಲ; ಇವನು ವಸಂತಸೇನ, ಅಷ್ಟೆ.

ಚಾರದತ್ತ—ಮಿತ್ರ, ಹಾಸ್ಯ ಸಾಕು. ಪ್ರೇಮ ವಿಳಂಬವನ್ನು ತಡೆಯದು.

ಅಥವಾ ನಾನೇ ಇಳಿಸಿಕೊಳ್ಳುತ್ತೇನೆ. (ಏಳುವನು)

ಆರ್ಯಕ (ನೋಡಿ) ಓ, ಇವನೇ ರಥದೊಡೆಯು. ಕೇಳುವಾಗ ರಮಣೀಯನಷ್ಟೇ ಅಲ್ಲ, ನೋಡುವಾಗಲೂ ರಮಣೀಯನಾಗಿರುವನು. ನನಗೆ ಒಳ್ಳೆಯ ರಕ್ಷಣೆ ದೊರೆತಂತೆಯೇ.

ಚಾರುದತ್ತ—(ರಥವನ್ನೇರಿ ನೋಡಿ) ಅರೇ, ಇವನಾರು ?

ಕರಿಕರಸದೃಶಂ ತೋಳ್ ಸಿಂಹಪೀನೋನ್ನತಾಂಸಂ
ಪೃಥುತರ ಸಮವಕ್ಷಂ ತಾಮ್ರಲೋಲಾಯತಾಕ್ಷಂ
ಅಸಮಮೆನಿಪ ದುಃಖಂ ಬಂದುದೆಂತೀ ಮಹಾತ್ಮಂ-
ಗಿದೊ ಸರಪಳಿ ಕಾಲೊಳ್ ಕಾಣ್ಬುದೇನೆಂಬೆನೀಗಳ್ ೫

ಅಯ್ಯಾ, ನೀನು ಯಾರು ?

ಆರ್ಯಕ—ಶರಣಾಗತನಾಗಿದ್ದೇನೆ. ಗೋಪಾಲನ ಮಗ ಆರ್ಯಕನೇ ನಾನು.

ಚಾರುದತ್ತ—ಏನು, ಗೊಲ್ಲಹಳ್ಳಿಯಿಂದ ಕರೆತಂದು ಪಾಲಕ ಮೊರೆ ಸೆರೆಯಲ್ಲಿಟ್ಟಾತನೇ ಅಲ್ಲವೆ ?

ಆರ್ಯಕ—ಹೌದು.

ಚಾರುದತ್ತ— ನಿನ್ನಂ ಬಿದಿಯೇ ತಂದ-
ತ್ತೆನ್ನಯ ಕಣ್ಣಿಂಗೆ ಕಾಣ್ಬ ತೆರದಿಂದೀಗಳ್
ಎನ್ನಯ ಹರಣಂದೊರೆವೆಂ
ನಿನ್ನಂ ಮೇಣ್ ತೊರೆಯೆನಕ್ಕೆ ಶರಣಾಗತನಂ ೬

(ಆರ್ಯಕನು ಸಂತೋಷವನ್ನು ಸೂಚಿಸುವನು)

ಚಾರುದತ್ತ—ವರ್ಧಮಾನಕ, ಇವನ ಕಾಲಿಂದ ಸರಪಳಿಯನ್ನು ತೆಗೆದು ಹಾಕು.

ವರ್ಧಮಾನಕ—ಒಡೆಯನ ಅಪ್ಪಣೆ. (ತೆಗೆದು ಹಾಕಿ) ಒಡೆಯ, ಸರಪಳಿಗಳನ್ನು ತೆಗೆದುದಾಯಿತು.

ಆರ್ಯಕ—ಇನ್ನೂ ದೃಢತರವಾದ ಸ್ನೇಹದ ಸರಪಳಿಗಳನ್ನು ಕೂಡಿಸಿದಂತಾಯಿತು.

ವಿದೂಷಕ—ಆ (ಸ್ನೇಹದ) ಸರಪಳಿಗಳನ್ನು ಎಂದಿಗೂ ಹೊಂದಿರು. ಇವ

ನನ್ನು ಬಿಡಿಸಿದುದಾಯಿತು. ನಾವೂ ಇನ್ನು ಹೋಗೋಣ.

ಚಾರುದತ್ತ—ಇರಲಿ, ಸ್ವಲ್ಪ ಸುಮ್ಮನಿರು.

ಆರ್ಯಕ—ಮಿತ್ರ, ಚಾರುದತ್ತ, ನಿನ್ನ ಮೇಲಿನ ಪ್ರೀತಿಯಿಂದಲೇ ನಾನು ಈ ರಥವನ್ನು ಹತ್ತಿಬಿಟ್ಟೆ. ಅದನ್ನು ಕ್ಷಮಿಸಬೇಕು.

ಚಾರುದತ್ತ—ಸ್ವಯಂಪ್ರೇರಿತನಾದ ನಿನ್ನ ಪ್ರೀತಿ ನನಗೆ ಭೂಷಣವಾಯಿತು.

ಆರ್ಯಕ—ಅಪ್ಪಣೆಕೊಟ್ಟರೆ ಹೋಗಿಬರುತ್ತೇನೆ.

ಚಾರುದತ್ತ—ಹೋಗಬಹುದು.

ಆರ್ಯಕ—ಆಗಲಿ, ಇಳಿಯುತ್ತೇನೆ.

ಚಾರುದತ್ತ—ಮಿತ್ರ, ಇಳಿಯುವುದು ಬೇಡ. ಈಗ ತಾನೆ ಸರಪಳಿಯನ್ನು ತೆಗೆದಿರುವ ನಿನ್ನ ಕಾಲ್ನಡೆ ವೇಗವಾಗಿರಲಾರದು. ಜನಸಂಚಾರ ಹೆಚ್ಚಾಗಿರುವ ಈ ಸ್ಥಳದಲ್ಲಿ ರಥವಿದ್ದರೆ ನಂಬಿಕೆಯನ್ನೂ ತರುತ್ತದೆ. ಆದ್ದರಿಂದ ರಥದಲ್ಲಿಯೇ ಹೋಗು.

ಆರ್ಯಕ—ನೀನೆಂದಂತೆಯೇ ಆಗಲಿ.

ಚಾರುದತ್ತ— ಸೊಗದಿಂ ನಂಟರ ಕೂಡು ಪೋಗು
ಆರ್ಯಕ— ದೊಱೆತಯ್ ನೀನೇ ವಲಂ ಬಾಂಧವಂ
ಚಾರುದತ್ತ— ನೆನೆಯುಯ್ ಕಾಲವು ಬಂದಿರಲ್ಕೆ
ಆರ್ಯಕ— ಮಱೆಯಲ್ಕೇನಕ್ಕುಮೇ ಜೀವಮುಂ
ಚಾರುದತ್ತ— ಪಯಣಂಗೈವೆಡೆ ನಿನ್ನ ಕಾಯ್ಗೆ ಸುರರುಂ
ಆರ್ಯಕ— ಕಾಯ್ದಿರ್ಪೆ ನೀನೇ ದಿಟಂ
ಚಾರುದತ್ತ— ನಿನತೀ ಭಾಗ್ಯಮೆ ನಿನ್ನ ಕಾಯ್ದುದು ಗಡಾ
ಆರ್ಯಕ— ನೀನೇ ನಿಮಿತ್ತಂ ವಲಂ ೭

ಚಾರುದತ್ತ—ಪಾಲಕನು ಕಾರ್ಯೋದ್ಯುಕ್ತನಾಗಿರುವಾಗ ಸರಿಯಾದ ರಕ್ಷಣೆ ಎಂಬುವೇ ಇಲ್ಲ. ಆದ್ದರಿಂದ ನೀನು ಬೇಗ ತಪ್ಪಿಸಿಕೊಳ್ಳಬೇಕು.

ಆರ್ಯಕ—ಆಗಲಿ. ಮತ್ತೆ ದರ್ಶನ ದೊಱೆಯಲಿ! (ನಿಷ್ಕ್ರಾಮಃ)

ಚಾರುದತ್ತ—

ಈ ಪರಿಯಪ್ರಿಯವೆಸಗಿರೆ ನೃಪನಿಗೆ
ನಿಲ್ವುದು ಚಣವೂ ತರವಲ್ಲ;

ಸರಪಳಿಯನ್ನೊಗೆ ಬಾವಿಯೊಳರಸರು
ಚಾರರ ಕಣ್ಣಿಂ ಕಾಣದೊಲು. ೮

(ಎಡಗಣ್ಣು ಅದಿರುವುದನ್ನು ಕಂಡು) ಮಿತ್ರ, ಮೈತ್ರೇಯ, ವಸಂತಸೇನೆಯನ್ನು ನೋಡಲು ಕಾತರನಾಗಿದ್ದೇನೆ. ನೋಡು—

ಆಕೆಯನೀದಿನ ನೋಡದೆಯಿರುತಿರೆ;
ಎಡಗಣ್ಣಿದು ತಾನದಿರುತಿದೆ;
ಕಾರಣವಿಲ್ಲದೆ ತಲ್ಲಣಿಸಿತ್ತಿದೆ
ಪಿರಿದೆನೆ ಪೀಡೆಯನಾನುತಿದೆ. ೯

ಆದ್ದರಿಂದ ಬಾ. ಹೋಗೋಣ. (ಹೋಗುತ್ತ) ಅಯ್ಯೋ, ಹೊರಡುವಾಗಲೇ ಅಮಂಗಳವನ್ನು ಸೂಚಿಸುವ ಸಂನ್ಯಾಸಿಯ ದರ್ಶನವೇ! (ಯೋಚಿಸಿ) ಇವನು ಈ ದಾರಿಯಲ್ಲಿ ಬಂದುಕೊಳ್ಳಲಿ. ನಾವು ಆ ದಾರಿಯನ್ನು ಹಿಡಿದು ಹೋಗೋಣ. (ನಿಷ್ಕ್ರಮ)

ಇಲ್ಲಿಗೆ 'ಆರ್ಯಕನ ಬಿಡುಗಡೆ' ಎಂಬ ಏಳನೆಯ ಅಂಕ ಮುಗಿದುದು.

---

# ಎಂಟನೆಯ ಅಂಕ

(ಪ್ರವೇಶ ಕೈಯಲ್ಲಿ ಒದ್ದೆ ಬಟ್ಟೆಯನ್ನು ಹಿಡಿದ ಭಿಕ್ಷು)

ಭಿಕ್ಷು—ಅಜ್ಞರಿರಾ, ಧರ್ಮಸಂಗ್ರಹ ಮಾಡಿರಿ—

ತಡೆಯಿರಿ ಹೊಟ್ಟೆಯ ಕಡುಪಂ
ನಡೆಯಿಂ ನೀವೆಚ್ಚರಿಂವೆ ಜಾನದ ಢೋಲಿಂ
ಬಿಡದಿಂದ್ರಿಯಗಣಚೋರರ್
ಗಡ ಚಿರಸಂಪ್ರಾಪ್ತ ಧರ್ಮಮಂ ಕಳ್ದುಯ್ವರ್ ೧

ಮತ್ತು ಎಲ್ಲವೂ ಅನಿತ್ಯವೇ ಎಂಬುದನ್ನು ಮನಗಂಡು ಈಗ ಬೌದ್ಧರ ಧರ್ಮವನ್ನೇ ಶರಣುಹೊಕ್ಕಿದ್ದೇನೆ—

ಕೊಲ್ಲುತ್ತೈವರನದಾವಂ
ಕೊಲ್ಲುತ್ತುಂ ಪೆಣ್ಣನಂತೆ ಪೊರೆಮಂ ಪುರವಂ
ಕೊಲ್ಲುತೆ ಹೊಲೆಯುನನಂತೆಯೆ
ಸಲ್ಲುವನಯ್ ಸ್ವರ್ಗಪದವಿಗಾತನೆ ನಿರುತಂ ೨

ತಲೆ ಬೋಳಿಸಿ ಮುಖ ಬೋಳಿಸಿ ಮನಬೋಳಿಸದಿರಲು,
ಬರಿಬೋಳಿಸಿ ಫಲವೇನದು ತಾನೊದಗುವುದೋ ?
ಯಾವಾತನ ಮನಸ್ಸೈಸಲೆ ತಾ ಬೋಳೆನಲಹುದೋ
ದಿಟಮಾತನ ತಲೆಯಲ್ಲವೆ ಸರಿ ಬೋಳೆನಲಹುದು? ೩

ಈ ಕಾವಿಯಲ್ಲದ್ದಿರುವ ಬಟ್ಟೆಯನ್ನು ರಾಜಶ್ಯಾಲಕನ ಉದ್ಯಾನದ ಪುಷ್ಕರಿಣಿಯಲ್ಲಿ ಬೇಗ ಒಗೆದುಕೊಂಡು ಹೋಗುವೆನು. (ಹೆಜ್ಜೆಯಿಡುವನು).

ಶಕಾರ—ಎಲೋ ದುಷ್ಟ ಸಂನ್ಯಾಸಿ, ನಿಲ್ಲು, ನಿಲ್ಲು.

ಭಿಕ್ಷು—(ಭಯದಿಂದ ನೋಡಿ) ಅಯ್ಯಯ್ಯೋ, ರಾಜಶ್ಯಾಲ ಸಂಸ್ಥಾನಕನೇ ಬಂದನಲ್ಲಾ ! ಯಾವನೋ ಒಬ್ಬ ಭಿಕ್ಷು ಅವನಿಗೆ ತಪ್ಪುಮಾಡಿದ್ದನ್ನೇ ಮನಸ್ಸಿನಲ್ಲಿಟ್ಟುಕೊಂಡು, ಎಲ್ಲೆಲ್ಲಿ ಭಿಕ್ಷು ಕಂಡರೂ ಅವನ ಮೂಗಿಗೆ

ಎತ್ತಿ ನಂತೆ ದಾರ ಹಾಕಿ ಓಡಿಸುತ್ತಾನೆ! ಅರಕ್ಷಿತನಾದ ನಾನು ಯಾರ ರಕ್ಷಣೆಗೆ ಈಗ ಹೋಗಲಿ? ಅಥವಾ ಭಗವಾನ್ ಬುದ್ಧನೇ ನನ್ನನ್ನು ಈಗ ರಕ್ಷಿಸಬೇಕಾಗಿದೆ!

(ಕತ್ತಿ ಹಿಡಿದ ವಿಟನೊಡನೆ ಶಕಾರನ ಪ್ರವೇಶ)

ಶಕಾರ—ನಿಲ್ಲು, ದುಷ್ಟಸಂನ್ಯಾಸಿ, ನಿಲ್ಲು. ಹೆಂಡದಂಗಡಿಯಲ್ಲಿ ನಡುವೆ ಬಂದ ಕೆಂಪುಮೂಲಂಗಿಯಂತೆ ನಿನ್ನ ತಲೆಯನ್ನೊಡೆಯುವೆನು! (ಹೊಡೆಯುವನು)

ವಿಟ—ಕಾಣೇಲೀಕುಮಾರ, ವೈರಾಗ್ಯದಿಂದ ಕಾವಿಯುಟ್ಟ ಭಿಕ್ಷುವನ್ನು ಹೊಡೆಯುವುದು ತರವಲ್ಲ. ಇವನನ್ನು ಕಟ್ಟಿಕೊಂಡೇನು? ಇತ್ತ ಸುಖದಾಯಕವಾಗಿರುವ ಈ ಉದ್ಯಾನವನದ ಸೊಬಗನ್ನು ನೋಡು—

ನೆಲೆಯಿಲ್ಲದರಿಂಗೊದಗಿಸಿ
ನೆಲೆಯಂ ತರುಗಳಿವು ಗೈವುವೊಳ್ಪಿನ ಕೃತಿಯಂ
ಖಲಹೃದಯದವೊಲ್ ಪ್ರಕಟಂ
ಸಲೆ ನೂತನ ರಾಜ್ಯದಂತನಿರ್ಜಿತಭೋಗ್ಯಂ ೪

ಭಿಕ್ಷು—ನಿನಗೆ ಸ್ವಾಗತ. ಉಪಾಸಕನು ಪ್ರಸನ್ನನಾಗಬೇಕು.

ಶಕಾರ—ಭಾವ, ನೀನೇ ನೋಡು. ನನ್ನನ್ನು ಬಯ್ಯುತ್ತಿದ್ದಾನೆ.

ವಿಟ—ಏನೆಂದು ಬಯ್ಯುತ್ತಾನೆ?

ಶಕಾರ—ನಾನು 'ಉಪಾಸಕ'ನಂತೆ. ನಾನೇನು ಹಜಾಮನೆ?

ವಿಟ—ಅಲ್ಲ, 'ಬುದ್ಧನ ಉಪಾಸಕ' ಎಂದು ನಿನ್ನನ್ನು ಹೊಗಳುತ್ತಿದ್ದಾನೆ.

ಶಕಾರ—ಆಗಲಿ, ಸಂನ್ಯಾಸಿ! ಹೊಗಳು, ಹೊಗಳು.

ಭಿಕ್ಷು—ನೀನೇ ಧನ್ಯ, ನೀನೇ ಪುಣ್ಯಶಾಲಿ.

ಶಕಾರ—ಭಾವ, ನನ್ನನ್ನು 'ಧನ್ಯ', 'ಪುಣ್ಯ' ಎಂದೆಲ್ಲಾ ಕರೆಯುತ್ತಾನೆ. ನಾನೇನು ಧನಕ್ಕೆ ಬದುಕಿರುವ ಚಾರ್ವಾಕನೋ, ಧಾನ್ಯದ ಕಣಜವೋ, ಪೂರ್ಣಕುಂಭವನ್ನು ಮಾಡುವ ಕುಂಬಾರನೋ?

ವಿಟ—ಅಲ್ಲಪ್ಪ ಕಾಣೇಲೀಪುತ್ರ, 'ನೀನೇ ಧನ್ಯ, ನೀನೇ ಪುಣ್ಯವಂತ' ಎಂದು ಪರಿಪರಿಯಿಂದ ನಿನ್ನನ್ನೇ ಹೊಗಳುತ್ತಿದ್ದಾನೆ.

ಶಕಾರ—ಭಾವ, ಇವನು ಇಲ್ಲಿಗೆ ಬಂದುದೇಕೆ?

ಭಿಕ್ಷು—ಈ ಕಾವಿಬಟ್ಟೆಯನ್ನು ಒಗೆದುಕೊಂಡು ಹೋಗುವುದಕ್ಕೆ.

ಶಕಾರ—ಎಲಾ ದುಷ್ಟ ಸಂನ್ಯಾಸಿ, ಎಲ್ಲ ಉದ್ಯಾನಗಳಲ್ಲೂ ಉತ್ತಮವಾದ ಈ ಪುಷ್ಪಕರಂಡೋದ್ಯಾನವನ್ನು ನನ್ನಕ್ಕನ ಗಂಡ ನನಗೆ ಕೊಟ್ಟಿದ್ದಾನೆ. ಇಲ್ಲಿ ನಾಯಿ ನರಿಗಳು ಮಾತ್ರ ನೀರನ್ನು ಕುಡಿಯುತ್ತವೆ. ಇಷ್ಟು ದೊಡ್ಡ ಮನುಷ್ಯನಾದ ನಾನೇ ಸ್ನಾನ ಮಾಡುವುದಿಲ್ಲ. ಅಂಥ ಈ ಪುಷ್ಕರಿಣಿಯಲ್ಲಿ ಬಂದು ಹಳಸಿದ ಕೇಸಕ್ಕೆ ಗಂಜಿಯಂತೆ ದುರ್ವಾಸನೆ ಹೊಡೆಯುತ್ತಿರುವ ಬಟ್ಟೆಗಳನ್ನು ತೊಳೆಯುವೆಯಲ್ಲವೆ? ಒಂದೇ ಏಟಿಗೆ ನಿನ್ನನ್ನೀಗ ತೀರಿಸಿಬಿಡುತ್ತೇನೆ.

ವಿಟ—ಕಾಣೇಲೀಕುಮಾರ, ಇವನು ಎಲ್ಲೋ ಇತ್ತೀಚೆಗೆ ಸಂನ್ಯಾಸಿಯಾಗಿರುವನೆಂದು ಕಾಣುತ್ತದೆ.

ಶಕಾರ—ನಿನಗೆ ಹೇಗೆ ಗೊತ್ತು ?

ವಿಟ—ಇಲ್ಲಿ ಗೊತ್ತಾಗಬೇಕಾದ್ದೇನಿದೆ? ನೋಡು, ಇನ್ನೂ—

ತಲೆಯ ಬಣ್ಣವು ಬೆಳ್ಳಗಿರುವುದು ಕೇಶವಿಲ್ಲದೆ ಪೋಗೆಯೂ,
ಹೆಗಲೊಳಿಲ್ಲವು ಕಾವಿ ಬಟ್ಟೆಯ ಗಂಟೆ ಗುರುತುಗಳೀಗಲೂ ;
ಕಾವಿಯುಡುವುದನಿನ್ನುಮರಿಯನು ನೈಯೆ ಕಾಣುತಿರಲ್ಕವಂ
ಮೇಲಕಾದುದು ಸೆರಗು ಸಡಿಲವೆನಲ್ಕೆ ಹೆಗಲೊಳು ನಿಲ್ಲದು. ೫

ಭಿಕ್ಷು—ಹೌದು, ಉಪಾಸಕ. ನಾನು ಇತ್ತೀಚೆಗೆ ಸಂನ್ಯಾಸಿಯಾದೆ.

ಶಕಾರ—ಎಲಾ, ಹುಟ್ಟಿದೊಡನೆಯೇ ನೀನೇಕೆ ಸಂನ್ಯಾಸಿಯಾಗಲಿಲ್ಲ? (ಎಂದು ಹೊಡೆಯುವನು)

ಭಿಕ್ಷು—ಬುದ್ಧನಿಗೆ ನಮೋನಮಃ.

ವಿಟ—ಈ ಬಡಪಾಯಿಯನ್ನು ಹೊಡೆದು ಆಗುವುದೇನು? ಬಿಟ್ಟುಬಿಡು. ಹೋಗಿಕೊಳ್ಳಲಿ.

ಶಕಾರ—ಎಲೋ, ನಿಲ್ಲು, ಸ್ವಲ್ಪ ಚರ್ಚಿಸಿ ತೀರ್ಮಾನಿಸುವೆನು:

ವಿಟ—ಯಾರೊಡನೆ?

ಶಕಾರ—ನನ್ನ ಹೃದಯದೊಡನೆ.

ವಿಟ—ಓ, ಇನ್ನೂ ಹೋಗಲಿಲ್ಲ!

ಶಕಾರ—ಮಗು, ಹೃದಯ, ಕಂದ, ಒಡೆಯ, ಈ ಸಂನ್ಯಾಸಿ ಹೋಗಲೋ

ಅಥವಾ ನಿಲ್ಲಲೋ ? (ಸ್ವಗತ) ಹೋಗುವುದೂ ಬೇಡ, ನಿಲ್ಲುವುದೂ ಬೇಡ. (ಪ್ರಕಾಶ) ಭಾವ, ನಾನು ಹೃದಯದೊಡನೆ ಚರ್ಚಿಸಿ ತೀರ್ಮಾನಿಸಿಯಾಯಿತು. ನನ್ನ ಹೃದಯ ಹೀಗೆನ್ನುತ್ತದೆ . . .

ವಿಟ—ಏನೆನ್ನುತ್ತದೆ ?

ಶಕಾರ—ಹೋಗುವುದೂ ಬೇಡ, ನಿಲ್ಲುವುದೂ ಬೇಡ. ಇವನು ಉಚ್ಛ್ವಾಸ ಮಾಡುವುದೂ ಬೇಡ, ನಿಃಶ್ವಾಸ ಬಿಡುವುದೂ ಬೇಡ. ಇಲ್ಲಿಯೇ ತಟ್ಟನೆ ಬಿದ್ದು ಸಾಯಲಿ.

ವಿಟ—ಬಿಡು, ಹೋಗಲಿ.

ಶಕಾರ—ಒಂದು ನಿಬಂಧನೆಗೊಪ್ಪುವುದಾದರೆ.

ವಿಟ—ನಿಬಂಧನೆಯೇನು ?

ಶಕಾರ—ನೀರು ಕೆಸರಾಗದಂತೆ ಮಣ್ಣನ್ನು ನೀರೊಳಗೆ ಹಾಕಬೇಕು ಅಥವಾ ನೀರನ್ನೆಲ್ಲ ಒಟ್ಟಾಗಿ ಕೂಡಿಸಿ ಮಣ್ಣಿನೊಳಕ್ಕೆಸೆಯಬೇಕು.

ವಿಟ—ಅಯ್ಯೋ, ಮಂಕುತನವೇ—

ಮನಮುಂ ಕ್ರಿಯೆಯುಂ ವಿಪರೀ
ತಮೆನಲ್ ಪಾಷಾಣಶಕಲ ಸದೃಶರೆನಿಪ್ಪೀ
ಮಾಂಸತರೂಪಮ ಮೂರ್ಖರ
ಭಾರದಿನೀ ನೆಲಮೆ ನಾಡೆ ಕುಸಿಯುತಿರ್ಕುಂ ೬

(ಭಿಕ್ಷು ಮೊರೆಯಿಡುವನು)

ಶಕಾರ—ಏನೆನ್ನುವನು ?

ವಿಟ—ನಿನ್ನನ್ನು ಹೊಗಳುತ್ತಿರುವನು.

ಶಕಾರ—ಹೊಗಳು, ಹೊಗಳು. ಮತ್ತೂ ಹೊಗಳು.

(ಮೊರೆಯಿಡುತ್ತಲೇ ಭಿಕ್ಷು ಓಡುವನು)

ವಿಟ—ಕಾಣೇಲೀಕುಮಾರ, ಉದ್ಯಾನದ ಸೊಬಗನ್ನು ನೋಡು—

ತರುಗಳ್ ಪಣ್ಣಿಂ ಪೂವಿಂ
ಭರಿತಂಗಳ್ ದೊಡ್ಡ ಬಳ್ಳಿ ಬಳಸಿರಲನಿಶಂ
ಮೆರೆವುವು ದೊರೆಯಾಣತಿಯಿಂ
ಪೊರೆವವರಿರೆ ಪೆಂಡಿರೊಡನೆ ನಲಿಯುವ ನರರೊಲ್ ೭

ಶಕಾರ—ಭಾವ ಹೇಳುವುದು ಸರಿಯಾಗಿದೆ—

ನೆಲಮಂ ಚಿತ್ರಿಸೆ ಪೂಗಳ್
ಸಲೆ ಪೂವಿಂ ಬಳ್ಕುತಿರ್ಪುವೀ ವೃಕ್ಷಂಗಳ್
ಹಲಸಿನ ಪಣ್ಗಳ್ ತರುಗಳ
ತುದಿಬಳ್ಳಿಯಿನಿಳಿಯುವಂತೆ ಜೋಲ್ವುವು ಕಪಿಗಳ್ ೮

ವಿಟ—ಕಾಣೇಲೀಕುಮಾರ, ಈ ಶಿಲಾತಲದಲ್ಲಿ ಕುಳಿತುಕೊ.

ಶಕಾರ—ಇದೋ ಕುಳಿತೆ. (ವಿಟನೊಡನೆ ಕುಳಿತುಕೊಳ್ಳುವನು) ಭಾವ, ಈಗಲೂ ಆ ವಸಂತಸೇನೆಯನ್ನೇ ನೆನೆಯುತ್ತೇನೆ. ದುರ್ಜನರ ಮಾತಿನಂತೆ ಹೃದಯದಿಂದ ಅವಳು ದೂರವಾಗುವುದೇ ಇಲ್ಲ.

ವಿಟ—(ಸ್ವಗತ) ಹಾಗೆ ಅವಳಿಂದ ತಿರಸ್ಕೃತನಾದ ಮೇಲೂ ಇನ್ನೂ ಅವಳನ್ನು ನೆನೆಯುತ್ತಾನಲ್ಲ! ಅಥವಾ—

ಸುದತಿಯರೊಲ್ಲದ ಕುಜನರ
ಮದನಂ ಗಡ ವೃದ್ಧಿವಡೆವುದೈಸಲೆ ನೋಡಲ್
ಅದೆ ಮೇಣ್ ಸುಜನರ ವಿಷಯದೆ
ಮೃದುವಪ್ಪುದು ಅಲ್ಲದಿರ್ದೊಡಳಿವುದು ನಿರುತಂ ೯

ಶಕಾರ—ಭಾವ, ಆ ಚೇಟ ಸ್ಥಾವರಕನಿಗೆ ಬೇಗ ಬೇಗ ರಥವನ್ನು ತೆಗೆದುಕೊಂಡು ಬಾ ಎಂದು ಹೇಳಿ ಎಷ್ಟೋ ಹೊತ್ತಾಯಿತು. ಇನ್ನೂ ಬರಲಿಲ್ಲವಲ್ಲಾ! ನನಗೋ ತುಂಬಾ ಹಸಿವಾಗಿದೆ. ಮಧ್ಯಾಹ್ನ ಕಾಲಿಂದ ನಡೆದುಕೊಂಡು ಹೋಗುವುದೂ ಶಕ್ಯವಿಲ್ಲ. ನೋಡು—

ರವಿಯುಡರ್ದಂ ನಭಮಧ್ಯಮ
ನಿವನೀಗಳ್ ಕುಪಿತಕಪಿಯೆನಲ್ ದುಷ್ಪ್ರೇಕ್ಷಂ
ಬುವಿಯುಂ ದೃಢಸಂತಪ್ತಂ
ತವೆ ನಾಶಿತಪುತ್ರಶತಳ ಗಾಂಧಾರಿಯವೋಲ್ ೧೦

ವಿಟ—ಹೌದು, ನಿಜ—

ನೆಳಲೊಳ್ ಪುಲ್ಲನೆ ಮೇವುದನ್ನುಳಿಯುತುಂ ನಿದ್ರಾವಶಂ ಗೋಗಣಂ
ಕೊಳನೊಳ್ ಬೆಚ್ಚನೆ ನೀರನೀಂಟಿವೆ ಮೃಗಂ ತೃಷ್ಣಾರ್ತಮೀ
ತೋಂಟದೊಳ್

ಮಳಲುಂ ಕಾದಿರೆ ಜೇಗೆಗಂಜುತೆ ನರರ್ ಪೋಗರ್ ಪುರೀಮಾರ್ಗದೊಳ್
ಉಳಿದೀದಳ್ಳಿಪ ಭೂಮಿಯಂ ರಥಮದುಂ ತಾನೆಲ್ಲಿಯೋ ನಿಂದುದಯ್

ಶಕಾರ—ಭಾವ,

ತಲೆಯ ಮೇಲೆಯೆ ಪಾದವಿಡುವನು ನೋಡು ರವಿ ತಾನೆನ್ನಯ,
ಹಕ್ಕಿಪಕ್ಷಿವಿಹಂಗಮುಂಗಳು ಮರದ ತುದಿಯೊಳಗಡಗಿವೆ;
ಪುರುಷಮಾನವಮರ್ತ್ಯಜನಗಳು ಬಿಸಿಯ ನಿಟ್ಟುಸಿರೆಳೆಯುತೆ
ಮನೆಯ ಬೀಡಿನೊಳೀಗ ಕುಳ್ಳಿರುತೆಂತೊ ಕಳೆವರು ಬಿಸಿಲನು. ೧೨

ಭಾವ, ಹಾಳು ಚೇಟ ಇನ್ನೂ ಬರಲಿಲ್ಲ. ಮನಸ್ಸಿಗೆ ನೆಮ್ಮದಿಯಾಗುವಂತೆ ಏನಾದರೂ ಹಾಡುತ್ತೇನೆ. (ಹಾಡುವನು) ಭಾವ ನನ್ನ ಗಾನವನ್ನು ಕೇಳಿದೆಯಾ?

ವಿಟ—ಏನು ಹೇಳುವುದು! ನೀನು ಗಂಧರ್ವನೇ ಸರಿ!

ಶಕಾರ—ನಾನು ಗಂಧರ್ವನಲ್ಲದಿರುವುದು ಶಕ್ಯವೆ?—

ಇಂಗಿಂದೊಗ್ಗರಿಸಿರುವಾ ಜೀರಿಗೆ
ಕೊನ್ನಾರಿಯು ವಾಸನೆ ಗೆಡ್ಡೆಗಳ;
ಬಳ್ಳುಳ್ಳಿಯ ನಾನಲ್ಲವ ಬೆಲ್ಲವ
ನೆಲ್ಲವ ಗಂಧನ ಮೆದ್ದಿರುವೆ;
ಎಂದೊಡೆ ದನಿಯೊಳು ಬಾರದೆಯಿರ್ಪುದೆ
ಗಂಧರ್ವಸಮಂ ಸುಸ್ವರವೆ? ೧೩

ಭಾವ, ಮತ್ತೂ ಹಾಡುವೆನು. (ಹಾಡುವನು) ಭಾವ, ಭಾವ, ನನ್ನ ಗಾನವನ್ನು ಕೇಳಿದೆಯಾ?

ವಿಟ—ಏನು ಹೇಳಲಿ! ನೀನು ಸಾಕ್ಷಾತ್ ಗಂಧರ್ವನೇ!

ಶಕಾರ—ನಾನು ಗಂಧರ್ವನಲ್ಲದೆ ಹೋಗುವುದೆಂತು?—

ಇಂಗಿಂದೊಗ್ಗರಿಸಿರುವಾ ಮೆಣಸಿನ
ಪುಡಿಯನೆ ಕೂಡಿಸಿ ಕರಿದಿರುವ,
ಎಣ್ಣೆಯ ತುಪ್ಪವ ಸೇರಿಸುತಟ್ಟಿಹ
ಕೋಗಿಲೆಹಕ್ಕಿಯ ಮಾಂಸವನೆ,

ಮೆದ್ದಿ ಹೆನೆನ್ನೊಳು ಬಾರದೆಯಿರ್ಪುದೆ
ಗಂಧರ್ವಸಮಂ ಸುಸ್ವರವೆ? ೧೪

ಭಾವ, ಇನ್ನೂ ಚೇಟ ಬರಲಿಲ್ಲವಲ್ಲಾ!

ವಿಟ—ಸ್ವಲ್ಪ ತಾಳಿಕೊಳ್ಳಪ್ಪಾ, ಇನ್ನೇನು ಬರುತ್ತಾನೆ.

(ಪ್ರವೇಶ—ರಥದಲ್ಲಿ ವಸಂತಸೇನೆ ಮತ್ತು ಸ್ಥಾವರಕನೆಂಬ ಚೇಟ)

ಸ್ಥಾವರಕ—ಭಯವೇ ಆಗುತ್ತಿದೆ. ಆಗಲೇ ಸೂರ್ಯನು ನೆತ್ತಿಯ ಮೇಲಿದ್ದಾನೆ. ರಾಜಶ್ಯಾಲನಾದ ಸಂಸ್ಥಾನಕನು ನನ್ನ ಮೇಲೆ ಸಿಟ್ಟಾಗಿ ಬಿಡುವನೋ ಏನೋ! ಬೇಗ ಬೇಗ ಹೋಗುವೆನು—ನಡೆಯಿರಿ, ಎತ್ತುಗಳೆ, ನಡೆಯಿರಿ.

ವಸಂತಸೇನೆ—ಅಯ್ಯೋ, ಕೇಡೆ! ಇದು ವರ್ಧಮಾನಕನ ದನಿಯೇ ಅಲ್ಲ. ಇದೇನಾಗಿಬಿಟ್ಟಿತು! ಆರ್ಯ ಚಾರುದತ್ತನೇ ಏನಾದರೂ ತನ್ನ ರಥಕ್ಕೆ ಆಯಾಸ ಹೆಚ್ಚಾಗಬಾರದೆಂದು ಇನ್ನೊಂದು ರಥವನ್ನೂ ಇನ್ನೊಬ್ಬ ಮನುಷ್ಯನನ್ನೂ ಕಳುಹಿಸಿರಬಹುದೆ? ಬಲಗಣ್ಣು ಜೇರೆ ಹಾರುತ್ತಿದೆ. ಎದೆ ನಡುಗುತ್ತಿದೆ. ದಿಕ್ಕೆಲ್ಲ ಶೂನ್ಯವಾಗಿ ಕಾಣುತ್ತಿದೆ. ಎಲ್ಲವೂ ತಲೆಕೆಳಗಾದಂತಿದೆಯಲ್ಲಾ!

ಶಕಾರ—(ಚಕ್ರದ ಸದ್ದನ್ನು ಕೇಳಿ) ಭಾವ, ಭಾವ, ರಥ ಬಂದಿತು.

ವಿಟ—ನಿನಗೆ ಹೇಗೆ ಗೊತ್ತಾಯಿತು?.

ಶಕಾರ—ಭಾವನಿಗೆ ಕಾಣುವುದಿಲ್ಲವೆ? ಮುದಿಹಂದಿಯಂತೆ ಅದು ಗುರ್ ಗುರ್ ಎನ್ನುತ್ತಿರುವುದು?

ವಿಟ—(ನೋಡಿ) ನೀನು ಸರಿಯಾಗಿ ನೋಡಿದೆ. ಇದೋ ಬಂದಿತು.

ಶಕಾರ—ಕಂದ, ಸ್ಥಾವರಕ, ಚೇಟ, ಬಂದೆಯೇನಪ್ಪಾ!

ಸ್ಥಾವರಕ—ಹೌದು.

ಶಕಾರ—ರಥವೂ ಬಂದಿತೇನಪ್ಪಾ!

ಸ್ಥಾವರಕ—ಹೌದು.

ಶಕಾರ—ಎತ್ತುಗಳೂ ಬಂದುವೇನಪ್ಪಾ!

ಸ್ಥಾವರಕ—ಹೌದು.

ಶಕಾರ—ನೀನೂ ಬಂದೆಯೇನಪ್ಪಾ!

ಸ್ಥಾವರಕ—(ನಗುತ್ತ) ಹೌದು ಒಡೆಯ, ನಾನೂ ಬಂದಿದ್ದೇನೆ.
ಶಕಾರ—ಸರಿ, ರಥವನ್ನು ಒಳಕ್ಕೆ ಹೊಡೆ.
ಸ್ಥಾವರಕ—ಯಾವ ದಾರಿಯಿಂದ?
ಶಕಾರ—ಇದೋ ಈ ಮುರಿದ ಗೋಡೆಯ ಕಡೆಯಿಂದ.
ಸ್ಥಾವರಕ—ಒಡೆಯ, ಹಾಗೆ ಮಾಡಿದರೆ ಎತ್ತುಗಳು ಸಾಯುತ್ತವೆ. ರಥ ಮುರಿದು ಹೋಗುತ್ತದೆ. ಚೇಟನಾದ ನಾನೂ ಸಾಯುತ್ತೇನೆ.
ಶಕಾರ—ಎಲೋ, ನಾನು ಮಹಾರಾಜನ ಭಾವಮೈದುನ. ಎತ್ತು ಸತ್ತರೆ ಹೊಸವನ್ನು ಕೊಳ್ಳುತ್ತೇನೆ. ರಥ ಮುರಿದರೆ ಹೊಸದನ್ನು ಮಾಡಿಸುತ್ತೇನೆ. ನೀನು ಸತ್ತರೆ ಮತ್ತೊಬ್ಬ ಗಾಡಿ ಹೊಡೆಯುವವನು ಬರುತ್ತಾನೆ.
ಸ್ಥಾವರಕ—ಎಲ್ಲವೂ ಸರಿಯಾದೀತು. ಆದರೆ ಆತ್ಮೀಯನೆನಿಸಿದ ನಾನು ಇರುವುದಿಲ್ಲ!
ಶಕಾರ—ಎಲೋ, ಎಲ್ಲವೂ ಹಾಳಾಗಲಿ. ಮುರಿದ ಗೋಡೆಯ ಕಡೆಯಿಂದ ರಥವನ್ನು ಒಳಕ್ಕೆ ತುಂದುಬಿಡು.
ಸ್ಥಾವರಕ—ರಥವೇ ಮುರಿ, ಒಡೆಯನೊಂದಿಗೇ ಮುರಿ. ಬೇರೆ ರಥ ಬರಲಿ. ಒಡೆಯನಿಗೆ ಹೋಗಿ ಹೇಳುತ್ತೇನೆ. (ಬಂದು) ಏನು ಮುರಿಯಲೇ ಇಲ್ಲವೆ? ಒಡೆಯ, ಇದೋ ರಥ ಬಂದಿದೆ.
ಶಕಾರ—ಎತ್ತುಗಳು ತುಂಡಾಗಲಿಲ್ಲ? ಹಗ್ಗಗಳು ಸಾಯಲಿಲ್ಲ? ನೀನೂ ಸಾಯಲಿಲ್ಲ?
ಸ್ಥಾವರಕ–ಹೌದು.
ಶಕಾರ—ಭಾವ, ಬಾಪ್ಪಾ, ರಥವನ್ನು ನೋಡೋಣ. ಭಾವ, ನೀನೇ ನನಗೆ ಗುರು, ಪರಮಗುರು. ನೀನೆಂದರೆ ಒಳಗಿನವನೆಂದೂ ಪುರಸ್ಕರಣೀಯನೆಂದೂ ನಾನು ಯಾವಾಗಲೂ ಆದರದಿಂದ ಗೌರವಿಸುತ್ತೇನೆ. ಆದ್ದರಿಂದ ನೀನೇ ಮೊದಲು ರಥವನ್ನು ಹತ್ತು.
ವಿಟ—ಆಗಲಿ (ಹತ್ತುವನು).
ಶಕಾರ—ಅಥವಾ ನಿಲ್ಲು ನೀನೇ ಮುಂಚೆ ಹತ್ತುವುದಕ್ಕೆ ರಥವೇನು ನಿಮ್ಮಪ್ಪನದ್ದೋ? ನಾನು ರಥದೊಡೆಯ. ನಾನೇ ಮೊದಲು ರಥವನ್ನು

ಹತ್ತುವೆನು.

ವಿಟ—ನೀನೆ ನನಗೆ ಮುಂಚೆ ಹತ್ತೆಂದೆಯಲ್ಲ!

ಶಕಾರ—ನಾನು ಹಾಗೆ ಹೇಳಿದರೂ 'ಇಲ್ಲ ಒಡೆಯ, ನೀನೆ ಮುಂಚೆ ಹತ್ತು' ಎನ್ನುವುದು ನಿನ್ನ ಕರ್ತವ್ಯವಲ್ಲವೇ?

ವಿಟ—ಆಗಲಿ. ನೀನೇ ಹತ್ತು.

ಶಕಾರ—ಇನೋ ಈಗ ಹತ್ತುವೆನು. ಕಂದ, ಸ್ಥಾವರಕ, ಚೇಟ, ಗಾಡಿಯನ್ನು ತಿರುಗಿಸಪ್ಪಾ!

ಚೇಟ—(ತಿರುಗಿಸಿ) ಒಡೆಯನು ಹತ್ತಬಹುದು.

ಶಕಾರ—(ಹತ್ತಿ ನೋಡಿ, ಅಂಜಿಕೆಯನ್ನು ತೋರಿಸುತ್ತ, ಬೇಗ ಇಳಿದು, ವಿಟನ ಕೊರಳನ್ನು ಹಿಡಿದುಕೊಂಡು) ಭಾವ, ಭಾವ, ಸತ್ತೆ, ಸತ್ತೆ. ಗಾಡಿಯೊಳಗೆ ರಾಕ್ಷಸಿಯೋ ಕಳ್ಳನೋ ಹತ್ತಿಕೊಂಡಾಗಿದೆ. ರಾಕ್ಷಸಿಯಾಗಿದ್ದರೆ ಇಬ್ಬರೂ ಅಪಹೃತರಾದಂತೆಯೇ; ಕಳ್ಳನಾಗಿದ್ದರೆ ಇಬ್ಬರೂ ತಿನ್ನಲ್ಪಟ್ಟಂತೆಯೇ!

ವಿಟ—ಹೆದರಬೇಡ. ಈ ಎತ್ತಿನ ಬಂಡಿಯಲ್ಲಿ ರಾಕ್ಷಸಿಯ ಸಂಚಾರವೆಲ್ಲಿಂದ ಬರಬೇಕು! ನೋಡು. ಮಧ್ಯಾಹ್ನದ ಉರಿಬಿಸಿಲಿನಿಂದ ಮಂದವಾದ ನಿನ್ನ ದೃಷ್ಟಿಗೆ ಎಲ್ಲಿಯೋ ಸ್ಥಾವರಕನ ವೇಷದ ನೆರಳು ಬಿದ್ದು ಈ ಭ್ರಾಂತಿ ಹುಟ್ಟಿರಬೇಕು!

ಶಕಾರ—ಮಗು, ಸ್ಥಾವರಕ, ಚೇಟ, ಜೀವಂತವಾಗಿದ್ದೀಯೇನಪ್ಪಾ!

ಚೇಟ—ಇದ್ದೇನೆ, ಒಡೆಯ.

ಶಕಾರ—ಭಾವ, ಗಾಡಿಯನ್ನು ಹತ್ತಿರುವ ಹೆಂಗಸೊಬ್ಬಳಿದ್ದಾಳೆ. ನೀನೇ ನೋಡು.

ವಿಟ—ಏನು, ಹೆಂಗಸೇ?

ತಲೆಯ ಬಗ್ಗಿಸಿ ಬೇಗನಡಿಯಿಡುತಾವು ಮಾರ್ಗದೆ ನಡೆವುವು
ಹೊಡೆವ ಮಳೆಯಲಿ ಕಣ್ಣು ಕಾಣದೆ ಸುಳಿವ ಗೂಳಿಯ ತೆರದೊಳು;
ಜನರ ನೆರವಿಯೊಳಧಿಕಗೌರವವನ್ನೆ ಬಯಸುವೆನೆನ್ನಲು
ಕಣ್ಣು ಕುಲವಧುವನ್ನು ಕಾಣಲು ತಾನು ಕಾತರಿಸಿರ್ಪುದು. ೧೫

ವಸಂತಸೇನೆ—(ವಿಸ್ಮಯದಿಂದ, ಆತ್ಮಗತ) ಅಯ್ಯೋ! ನನ್ನ ಕಣ್ಣಿಗೆ ಶೂಲ

ವಾದ ರಾಜಶ್ಯಾಲನೇ ಆದನೆ! ಮಂದಭಾಗಿನಿಯಾದ ನನಗೀಗ ಪ್ರಾಣಸಂಶಯವೇ ಒದಗಿದಂತೆ. ಅಯ್ಯೋ, ಬಂಜರು ಭೂಮಿಯಲ್ಲಿ ಬಿತ್ತಿದ ಬೀಜಮುಷ್ಟಿಯಂತೆ ನಾನು ಬಂದುದೇ ನಿಷ್ಫಲವಾಯಿತು. ಈಗೇನು ಮಾಡಲಿ?

ಶಕಾರ—ಭಯಭೀತನಾಗಿ ಈ ಮುದಿಚೇಟನು ಬಂಡಿಯನ್ನು ನೋಡುವುದಿಲ್ಲ. ಭಾವ, ನೀನೇ ಬಂಡಿಯನ್ನು ನೋಡು.

ವಿಟ—ತಪ್ಪೇನು? ಆಗಲಿ ನೋಡುವೆನು.

ಶಕಾರ—ಓ, ನರಿಗಳು ಹಾರುತ್ತಿವೆ. ಕಾಗೆಗಳು ಓಡುತ್ತಿವೆ. ಭಾವನನ್ನು ಕಣ್ಣುಗಳಿಂದ ತಿಂದು ಹಲ್ಲುಗಳಿಂದ ನೋಡುವ ಮೊದಲೇ ನಾನು ಕಾಲಿಗೆ ಬುದ್ಧಿ ಹೇಳುವೆನು.

ವಿಟ—(ವಸಂತಸೇನೆಯನ್ನು ಕಂಡು, ವಿಷಾದದಿಂದ ಸ್ವಗತ) ಅಯ್ಯೋ, ಇದೇನು ಹೆಣ್ಣು ಹುಲ್ಲೆ ಹುಲಿಯನ್ನು ಹುಡುಕಿಕೊಂಡು ಬಂದಿತೆ? ಅಯ್ಯೋ, ಕಷ್ಟ!—

ಶರದಿಂದುಸರೂಪಂ ತಾಂ
ವರಹಂಸಂ ಮಲಗಿರಲ್ಕೆ ಪುಲಿನಾಂತರದೊಳ್
ತೊರೆಯುತ್ತವನಂ ಹಂಸಿಯೆ
ಭರದಿಂ ವಾಯಸದ ಕೆಲಕೆ ಬಂದಳ್ ನಲವಿಂ ೧೬

(ಜನಾಂತಿಕ) ವಸಂತಸೇನೆ, ಇದು ನಿನಗೆ ಯೋಗ್ಯವೂ ಅಲ್ಲ, ಅನುರೂಪವೂ ಅಲ್ಲ—

ಮುನ್ನಂ ಗರ್ವದೆ ಭಂಗಿಸು
ತಿನ್ನೀಂ ನೀಂ ದ್ರವ್ಯದಾಸೆಯಿಂ ತಾಯ್ನುಡಿಯಲ್

ವಸಂತಸೇನೆ—ಇಲ್ಲ (ಎಂದು ತಲೆಯಲ್ಲಾಡಿಸುವಳು)

ವಿಟ— ಬಿನ್ನಣದಿಂದಂ ಬಂದಿರೆ
ನಿನ್ನಯ ಕೃಪಣತ್ವಮಿಂದು ವೇಶ್ಯಾಸಹಜಂ ೧೭

ನಾನು ಮೊದಲೇ ನಿನಗೆ ಹೇಳಿದ್ದೆನಲ್ಲವೆ—'ಇಷ್ಟನಿರಲಿ ಇಲ್ಲದಿರಲಿ ರಮಿಸು ಒಂದೆ ಪರಿಯೊಳು' (೧-೩೧) ಎಂದು?

ವಸಂತಸೇನೆ—ರಥ ಬದಲಾಯಿಸಿದ್ದರಿಂದ ಬಂದಿರುವೆನಷ್ಟೆ! ನಿನ್ನನ್ನೇ

ಶರಣು ಹೊಕ್ಕಿದ್ದೇನೆ!

ವಿಟ—ಭಯಪಡಬೇಡ, ಭಯಪಡಬೇಡ, ಇರಲಿ. ಇವನನ್ನು ವಂಚಿಸುತ್ತೇನೆ. (ಶಕಾರನ ಬಳಿಗೆ ಬಂದು) ಕಾಣೇಲೀಕುಮಾರ, ನಿಜವಾಗಿಯೂ ರಥದೊಳಗೆ ರಾಕ್ಷಸಿಯೇ ನೆಲಸಿದ್ದಾಳೆ!

ಶಕಾರ—ಭಾವ, ಭಾವ, ರಾಕ್ಷಸಿಯೇ ನೆಲಸಿದ್ದಾದರೆ ನಿನ್ನನ್ನು ಕದಿಯದೆ ಹೋದುದು ಹೇಗೆ? ಅಥವಾ ಕಳ್ಳನಾಗಿದ್ದರೆ ನಿನ್ನನ್ನು ತಿನ್ನದೆ ಹೇಗೆ ಬಿಟ್ಟ?

ವಿಟ—ಅದನ್ನು ತಿಳಿದಾಗುವುದೇನು? ಈ ತೋಪಿನ ತಂಪುದಾರಿಯಿಂದ ನಾವು ಕಾಲ್ನಡೆಯಿಂದಲೇ ಉಜ್ಜಯಿನೀಪಟ್ಟಣಕ್ಕೆ ಹೋದರೆ ತಪ್ಪೇನು?

ಶಕಾರ—ಹೀಗೆ ಮಾಡಿದ್ದರಿಂದ ಆಗುವುದೇನು?

ವಿಟ—ಹೀಗೆ ಮಾಡಿದರೆ ಮೈಗೆ ವ್ಯಾಯಾಮವಾಗುತ್ತದೆ; ಎತ್ತುಗಳಿಗೂ ಆಯಾಸ ತಪ್ಪುತ್ತದೆ.

ಶಕಾರ—ಹಾಗೆಯೇ ಆಗಲಿ. ಸ್ಥಾವರಕ, ಚೇಟ, ರಥವನ್ನು ತೆಗೆದುಕೊಂಡು ಹೋಗು. ಅಥವಾ ನಿಲ್ಲು, ನಿಲ್ಲು. ದೇವತೆಗಳ ಮತ್ತು ಬ್ರಾಹ್ಮಣರ ಮುಂದೆ ಕಾಲ್ನಡೆಯಿಂದ ನಾನು ಹೋಗುವೆನೆ? ಇಲ್ಲ, ಎಂದಿಗೂ ಇಲ್ಲ. ರಥವನ್ನು ಹತ್ತಿಕೊಂಡೇ ಹೋಗುತ್ತೇನೆ. ಎಲ್ಲರೂ ದೂರದಿಂದ ನನ್ನನ್ನು ಕಾಣುತ್ತಲೇ—'ಇದೋ ರಾಜಶ್ಯಾಲನಾದ ಒಡೆಯ ಹೋಗುತ್ತಿರುವನು' ಎನ್ನಬೇಕು.

ವಿಟ—(ಸ್ವಗತ) ವಿಷವನ್ನು ಔಷಧವಾಗಿಸುವುದು ಕಷ್ಟ! ಇರಲಿ. ಹೀಗೆಂದು ನೋಡುತ್ತೇನೆ. (ಪ್ರಕಾಶ) ಕಾಣೇಲೀಕುಮಾರ, ಇದೋ ವಸಂತಸೇನೆ ನಿನ್ನನ್ನು ಕಾಮಿಸಿ ಬಂದಿದ್ದಾಳೆ!

ವಸಂತಸೇನೆ—ಶಾಂತಂ ಪಾಪಂ. ಶಾಂತಂ ಪಾಪಂ.

ಶಕಾರ—(ಹರ್ಷದಿಂದ) ಭಾವ, ಭಾವ, ಪುರುಷಶ್ರೇಷ್ಠನಾದ ಮನುಷ್ಯನೂ ವಾಸುದೇವನೂ ಆದ ನನ್ನನ್ನೇ?

ವಿಟ—ಹೌದು.

ಶಕಾರ—ಹಾಗಾದರೆ ದುರ್ಲಭಳಾದ ಲಕ್ಷ್ಮಿ ಒಲಿದಂತಾಯಿತು. ಆ

ಹೊತ್ತು ಅವಳ ಮೇಲೆ ಸಿಟ್ಟಾಗಿದ್ದೆ. ಈಗ ಕಾಲಿಗೆ ಬಿದ್ದು ಒಲಿಸಿ ಕೊಳ್ಳುತ್ತೇನೆ.

ವಿಟ—ಸರಿಯಾಗಿ ಹೇಳಿದೆ.

ಶಕಾರ—ಇದೋ ಕಾಲಿಗೆ ಬೀಳುತ್ತೇನೆ. (ವಸಂತಸೇನೆಯ ಬಳಿಗೆ ಬಂದು) ತಾಯಿ, ಮಾತೆ, ನನ್ನ ಬಿನ್ನಹವನ್ನು ಲಾಲಿಸು—

ನೋಡು ಬಿದ್ದೆನು ನಿನ್ನ ಕಾಲಿಗೆ ನಾನೆ ಸುವಿಶಾಲಾಕ್ಷಿಯೆ
ಮುಗಿದ ಕೈಯನು ನಿನ್ನ ಹತ್ತೂ ಉಗುರೊಳಿಟ್ಟೆನು ಸುದತಿಯೆ ;
ಅಂದು ಮದನಾತುರನು ನಾನಪಕಾರಗೈದುದನೆಲ್ಲವ
ಮನ್ನಿಸೌ ವರಗಾತ್ರಿ ವಹಿಲದೆ ದಾಸನಾದೆನು ನಿನ್ನಯ. ೧೮

ವಸಂತಸೇನೆ—(ಕೋಪದಿಂದ) ತೊಲಗಿಹೋಗು. ಹೀನವಾಗಿ ಆಡುತ್ತಿರುವೆ. (ಎಂದು ಕಾಲಿಂದ ಒದೆಯುವಳು.)

ಶಕಾರ—(ಕೋಪದಿಂದ)—

ಯಾವದು ತಾಯಂದಿರು ಚುಂಬಿಸುತಿರೆ
ದೇವತೆಗಳಿಗೆ ಬಾಗದಿದೆ ;
ಅದೆ ತಲೆಯನ್ನಂಗಾಲಿಂದಿಡಿದಳು
ಹೆಣವನು ಕಾಡೊಳು ನರಿಯಂತೆ. ೧೯

ಎಲೋ ಚೇಟ, ಸ್ಥಾವರಕ, ಇವಳು ನಿನಗೆಲ್ಲಿ ಸಿಕ್ಕಿದಳು ?

ಚೇಟ—ಪ್ರಭು, ಊರಿನ ಬಂಡಿಗಳು ತುಂಬಿಕೊಂಡು ರಾಜಮಾರ್ಗ ತಡೆ ಗಟ್ಟಿದಂತಾಗಿತ್ತು. ಆಗ ಚಾರುತ್ತನ ಮರಗಳ ತೋಪಿನಲ್ಲಿ ರಥ ವನ್ನು ನಿಲ್ಲಿಸಿ, ಮುಂದಿನ ಬಂಡಿಯ ಚಕ್ರವುರುಳುವಂತೆ ಸಹಾಯ ಮಾಡಿ ಬರುವಷ್ಟರಲ್ಲಿ ಇವಳು ಅವನವೇ ಈ ರಥವೆಂಬ ಭ್ರಮೆಯಿಂದ ಇದನ್ನು ಹತ್ತಿದಳೆಂದು ತೋರುತ್ತದೆ.

ಶಕಾರ—ಏನು, ಅವನವೆಂಬ ಭ್ರಮೆಯಿಂದ ಈ ರಥವನ್ನೇರಿ ಬಂದಳೇನು ? ನನ್ನನ್ನು ಮೋಹಿಸಿ ಬರಲಿಲ್ಲವೊ ! ಓ, ಇಳಿ, ಇಳಿ, ನನ್ನ ರಥದಿಂದ ಇಳಿ. ಆ ದರಿದ್ರ ವರ್ತಕನ ಮಗನನ್ನೇ ನೀನು ಕಾಮಿಸಿ ಹೋಗುವೆ ; ನನ್ನ ಎತ್ತುಗಳಿಗೆ ಆಯಾಸ ಕೊಡುವೆ. ಇಳಿ, ಮೊದಲು ಇಳಿ. ಗುಲಾ ಮಗಿತ್ತಿ, ಇಳಿ, ಇಳಿ.

ವಸಂತಸೇನೆ—ಚಾರುದತ್ತನನ್ನು ಕಾಮಿಸಿ ಹೋಗುವೆಯೆಂದು ಇವನೆನ್ನುವ ಮಾತೇ ನನಗೆ ಭೂಷಣವಾಗಿದೆ. ಇನ್ನು ಏನಾಗುವುದೋ ಆಗಿ ಹೋಗಲಿ !

ಶಕಾರ— ಹತ್ತು ಉಗುರು ಮತ್ತೆ ಹೊಳೆಯೆ ಹತ್ತು ನೀಲ ಪೂಗಳೊಲ್,
ಸವಿಯ ನುಡಿಯನೊರೆಯಲೆಂದು ನೀಳ್ದ ನನ್ನ ಹಸ್ತದಿಂ-
ದೀಗ ನೋಡು ಸೆಳೆದು ಬಿಡುವೆ ನಿನ್ನನೆನ್ನ ಬಂಡಿಯಿಂ-
ದಾ ಜಟಾಯು ವಾಲಿಸತಿಯ ಕೇಶದಿಂದೆ ಸೆಳೆದೊಲು. ೨೦

ವಿಟ— ಪಿಡಿಯಲ್ಬಾರದು ಪೆಂಡಿರ
ನಿಡುಗೂದಲನವರೆ ಸುಗುಣಮಂಡಿತೆಯರೆನಲ್
ತಡೆಯುದೆ ತೋಟದ ಬಳ್ಳಿಯ
ಕುಡಿಯಂ ಮೇಣೆಲೆಯನಂತೆ ಕೀಳಲ್ ತಗದಯ್ ೨೧

ಆದ್ದರಿಂದ ನೀನು ಅತ್ತ ನಿಲ್ಲು. ನಾನೇ ಈಕೆಯನ್ನು ಇಳಿಸುವೆನು. ವಸಂತಸೇನೆ, ಇಳಿದು ಕೊಳ್ಳಮ್ಮಾ.

(ವಸಂತಸೇನೆ ಇಳಿದು ಒಂದು ಪಕ್ಕದಲ್ಲಿ ನಿಲ್ಲುವಳು)

ಶಕಾರ—(ಸ್ವಗತ) ಅಂದು ನನ್ನ ಮಾತನ್ನು ಕಡೆಗಣಿಸಿದ್ದರಿಂದ ಹೊತ್ತಿಕೊಂಡ ರೋಷಾಗ್ನಿಯೇ ಇಂದು ಇವಳ ಕಾಲಿನ ಒದೆತದಿಂದ ಪ್ರಜ್ವಲಿತವಾಗಿದೆ. ಆದ್ದರಿಂದ ಇವಳನ್ನೀಗ ಕೊಂದೇಬಿಡುತ್ತೇನೆ. ಇರಲಿ, ಹೀಗೆ ಮಾಡುತ್ತೇನೆ (ಪ್ರಕಾಶ) ಭಾವ, ಭಾವ—

ನನ್ನ ಕಡೆಯಿನಿಳಿವ ತುದಿಯ ರೇಷ್ಮೆಯುತ್ತರೀಯವ
ನೂರು ಜರಿಯು ಹೊಳೆಯುವ ;
ಪಡೆಯುವಾಸೆಯಿರ್ಪೊಡಂತೆ ಮಾಂಸವನ್ನು ಮೆಲ್ಲುವ,
ಜಂಜಮೆಂದು ಸುಖಿಸುವ— ೨೨

ವಿಟ—ಇದ್ದರೆ ಏನು ?

ಶಕಾರ—ಪ್ರಿಯವನ್ನು ಮಾಡು.

ವಿಟ—ಓ, ಅಗತ್ಯವಾಗಿಯೂ ಅಕಾರ್ಯವಲ್ಲದಿದ್ದರೆ ಮಾಡುವೆನು.

ಶಕಾರ—ಭಾವ, ಅಕಾರ್ಯದ ಗಂಧವೂ ಇಲ್ಲ. ಯಾವ ರಾಕ್ಷಸಿಯೂ ಇಲ್ಲ.

ವಿಟ—ಹಾಗಾದರೆ ಹೇಳು.

ಶಕಾರ—ವಸಂತಸೇನೆಯನ್ನು ಕೊಂದುಬಿಡು.

ವಿಟ—(ಕಿವಿಗಳನ್ನು ಮುಚ್ಚಿಕೊಂಡು)

ಬಾಲೆಯನು, ಹೆಂಗುಸನು, ನಗರದಾಭರಣವನು
ಗಣಿಕೆಗಸದೃಶವೆನಿಪ ಪ್ರೇಮಪೂರ್ಣೆಯನು ;
ನಿರಪರಾಧಿನಿಯನ್ನು ನಾ ಕೊಂದು ಪರಲೋಕ-
ನದಿಯನ್ನು ದಾಂಟುವೆನು ದೋಣಿಯೊಳಗಾವ ? ೨೩

ಶಕಾರ—ನಾನೇ ನಿನಗೆ ದೋಣಿಯನ್ನೂ ಕೊಡುತ್ತೇನೆ. ಅಲ್ಲದೆ ಈ ನಿರ್ಜನ ಪ್ರದೇಶದಲ್ಲಿ ನೀನು ಕೊಲ್ಲುವುದನ್ನು ಕಾಣುವವರು ತಾನೆ ಯಾರು ?

ವಿಟ— ನೋಡುವರು ದಶದೆಸೆಗಳಂತೆ ವನದೇವಿಯರು
ಚಂದ್ರನಂತೆಯೆ ಚಂಡಕಿರಣಗಳ ರವಿಯು ;
ಧರ್ಮದೇವತೆ, ಗಾಳಿ, ನಭವಂತರಾತ್ಮ, ಬುವಿ
ಯೆಲ್ಲರೂ ಸಾಕ್ಷಿಗಳೆ ಪುಣ್ಯಪಾಪಗಳ. ೨೪

ಶಕಾರ—ಹಾಗಾದರೆ ಬಟ್ಟೆಯ ತೆರೆಯ ಹಿಂದೆ ಅವಳನ್ನು ಕೊಂದುಬಿಡು.

ವಿಟ—ಮೂರ್ಖ, ಹಾಳಾದೆ.

ಶಕಾರ—ಇವನು ಅಧರ್ಮಕ್ಕೆ ಅಂಜುವ ಮುದಿನರಿಯೇ. ಸರಿ ಇರಲಿ, ಚೇಟ ಸ್ಥಾವರಕನನ್ನು ಒಲಿಸುತ್ತೇನೆ. ಮಗೂ, ಸ್ಥಾವರಕ, ಚೇಟ, ನಿನಗೆ ಚಿನ್ನದ ಕಡಗಗಳನ್ನು ಕೊಡುತ್ತೇನಪ್ಪಾ !

ಸ್ಥಾವರಕ—ನಾನು ಸಂತೋಷವಾಗಿ ಹಾಕಿಕೊಳ್ಳುತ್ತೇನೆ.

ಶಕಾರ—ನಿನಗೆ ಬಂಗಾರದ ಮಣೆಯನ್ನು ಮಾಡಿಸಿಕೊಡುತ್ತೇನೆ !

ಸ್ಥಾವರಕ—ನಾನು ಸಂತೋಷವಾಗಿ ಕುಳಿತುಕೊಳ್ಳುತ್ತೇನೆ.

ಶಕಾರ—ನಾನು ತಿಂದು ಮಿಕ್ಕುದನ್ನೆಲ್ಲ ನಿನಗೇ ಕೊಡುತ್ತೇನೆ.

ಸ್ಥಾವರಕ—ನಾನು ತಿನ್ನುತ್ತೇನೆ.

ಶಕಾರ—ನಿನ್ನನ್ನೇ ಚೇಟರಿಗೆಲ್ಲ ಅಧ್ಯಕ್ಷನನ್ನಾಗಿ ಮಾಡುತ್ತೇನೆ.

ಸ್ಥಾವರಕ—ಒಡೆಯ, ಸಂತೋಷದಿಂದಾಗುತ್ತೇನೆ.

ಶಕಾರ—ಹಾಗಾದರೆ ನನ್ನ ಮಾತನ್ನು ನಡೆಸು.

ಸ್ಥಾವರಕ—ಒಡೆಯ, ಅಕಾರ್ಯವೊಂದನ್ನು ಬಿಟ್ಟು ಎಲ್ಲವನ್ನೂ ಮಾಡು ತ್ತೇನೆ.

ಶಕಾರ—ಅಕಾರ್ಯದ ಗಂಧವೂ ಇಲ್ಲ.

ಸ್ಥಾವರಕ—ಒಡೆಯನು ಅಪ್ಪಣೆ ಮಾಡಬೇಕು.

ಶಕಾರ—ಈ ವಸಂತಸೇನೆಯನ್ನು ಕೊಂದುಹಾಕು.

ಸ್ಥಾವರಕ—ಒಡೆಯನು ಮನ್ನಿಸಬೇಕು. ಹಾಳಾದ ನಾನೇ ರಥ ಅದಲುಬದ ಲಾಗುನಂತೆ ಮಾಡಿ ಈಕೆಯನ್ನು ಕರೆತಂದವನು.

ಶಕಾರ—ಎಲಾ ಚೇಟ, ನಿನ್ನ ಮೇಲೂ ನನಗೆ ನನಗೆ ಅಧಿಕಾರವಿಲ್ಲವೆ?

ಸ್ಥಾವರಕ—ಒಡೆಯನಿಗೆ ನನ್ನ ದೇಹದ ಮೇಲೆ ಅಧಿಕಾರವುಂಟು ; ಶೀಲದ ಮೇಲಲ್ಲ. ಒಡೆಯನು ಕೃಪೆಮಾಡಬೇಕು. ನನಗೆ ತುಂಬಾ ಅಂಜಿಕೆ ಯಾಗಿದೆ.

ಶಕಾರ—ನನ್ನ ಚೇಟನಾದ ನೀನು ಯಾವ ಕಾರಣದಿಂದ ಅಂಜುವೆ?

ಸ್ಥಾವರಕ—ಪರಲೋಕದ ಕಾರಣದಿಂದ.

ಶಕಾರ—ಆ ಪರಲೋಕ ಯಾವುದು ?

ಸ್ಥಾವರಕ—ಒಡೆಯನೆ, ನಮ್ಮ ಪುಣ್ಯಪಾಪಗಳ ಪರಿಣಾಮವೇ.

ಶಕಾರ—ಪುಣ್ಯದ ಪರಿಣಾಮ ಎಂತಹುದು ?

ಸ್ಥಾವರಕ—ಒಡೆಯನ ಹಾಗೆ ತುಂಬ ಬಂಗಾರದೊಡವೆಗಳಿಂದ ಕೂಡಿರು ವುದು.

ಶಕಾರ—ಪಾಪದ ಪರಿಣಾಮ ಎಂತಹುದು ?

ಸ್ಥಾವರಕ—ನನ್ನ ಹಾಗೆ ಪರರ ಅನ್ನಕ್ಕೆ ಕೈಯಾನುವುದು. ಆದ್ದರಿಂದ ನಾನು ಅಕಾರ್ಯವನ್ನು ಮಾಡುವುದಿಲ್ಲ.

ಶಕಾರ—ಏನು, ಕೊಲ್ಲುವುದಿಲ್ಲವೆ? (ಬಹಳವಾಗಿ ಹೊಡೆಯುವನು)

ಸ್ಥಾವರಕ—ಹೊಡೆ, ಹೊಡೆ, ಒಡೆಯ! ಸಾಯಿಸಿಯೇ ಬಿಡು. ನಾನಂತೂ ಅಕಾರ್ಯವನ್ನು ಮಾಡುವುದಿಲ್ಲ.

ದುರದೃಷ್ಟದ ದೋಷದೆ ನಾ-
ನಿರುತಿರ್ಪೆಂ ಗರ್ಭದಾಸನೀಗಳ್ ನೋಡಲ್

ಪಿರಿದದನೇ ಕೊಳ್ಳೆಂ ಗಡ
ಪರಿಹರಿಸೆಂ ಹೀನಕಾರ್ಯಮಂ ನಾನದರಿಂ ೨೫

ವಸಂತಸೇನೆ—ಭಾವ, ನಾನು ಶರಣಾಗತಳಾಗಿದ್ದೀನೆ.

ವಿಟ—ಕಾಣೇಲೀಕುಮಾರ, ಮನ್ನಿಸು, ಮನ್ನಿಸು. ಸ್ಥಾವರಕ, ಭಲೆ, ಭಲೆ!—

ಈತನಿಂತು ಹೀನದೆಸೆಯೊಳಿರ್ಪ ಬಡವ ಸೇವಕ
ಪರದ ಫಲವನಿಚ್ಛಿಸಲ್ಕೆ ಒಡೆಯನದನು ಲೆಕ್ಕಿಸ;
ಇಂತಯೋಗ್ಯಕರ್ಮಗಳನು ಗೈಯುತೆಲ್ಲ ಪರಿಯಲಿ
ಯೋಗ್ಯಕರ್ಮಗಳನು ತೊರೆವ ಜನರದೇಕೆ ಸಾಯರು? ೨೬

ಮತ್ತು

ರಂಧ್ರದನ್ವೇಷಿ ನಿಜ ವಿಷಮುವದು ವಿಧಿಯೀಯೆ
ಇವನಿಗಾಳ್ವಿಸವನ್ನು ಒಡೆತನವ ನಿನಗೆ;
ನಿನ್ನತುಲ ಸಿರಿಯನಿವನದರಿಂದೆ ಭೋಗಿಸನು
ನೀನಿವನಿಗಾಳ್ವಿಸವನಿಂದೆಸಗದಿರುವೆ. ೨೭

ಶಕಾರ—(ಸ್ವಗತ) ಅಧರ್ಮಕ್ಕೆ ಅಂಜುವ ಮುದಿನರಿಯೇ ಇದು; ಈ ಗುಲಾಮನೋ ಪರಲೋಕಕ್ಕೆ ಹೆದರುತ್ತಾನೆ. ನಾನು, ರಾಜಶ್ಯಾಲ, ವರಪುರುಷಮನುಷ್ಯ, ಯಾತರಿಂದ ಹೆದರಬೇಕು? (ಪ್ರಕಾಶ) ಎಲೋ ಗುಲಾಮ, ಚೇಟ, ನೀನು ತೊಲಗು. ಮರೆಗೆಲ್ಲಾದರೂ ಹೋಗಿ ಏಕಾಂತವಾಗಿ ವಿಶ್ರಾಂತಿ ಪಡೆದುಕೋ.

ಸ್ಥಾವರಕ—ಒಡೆಯನ ಅಪ್ಪಣೆ. (ವಸಂತಸೇನೆಯನ್ನು ಸಮೀಪಿಸಿ) ನನ್ನ ಶಕ್ತಿ ಇಷ್ಟೇ ಸರಿ! (ಹೋಗುವನು).

ಶಕಾರ—(ಟೊಂಕ ಕಟ್ಟಿ) ನಿಲ್ಲು, ವಸಂತಸೇನೆ, ನಿಲ್ಲು. ಕೊಂದು ಹಾಕುವೆನು.

ವಿಟ—ಆ, ನನ್ನೆದುರಿಗೇ ಕೊಂದುಹಾಕುವೆಯಾ? (ಕತ್ತನ್ನು ಹಿಡಿಯುವನು)

ಶಕಾರ—(ನೆಲಕ್ಕೆ ಬೀಳುವನು) ಭಾವನು ಒಡೆಯನನ್ನೇ ಕೊಲ್ಲುವನು! (ಮೂರ್ಛೆ ಹೋಗುವನು; ಎಚ್ಚರಗೊಂಡ ಮೇಲೆ)

ನಾನು ಕೊಟ್ಟ ಮಾಂಸ ತುಪ್ಪ-
ದಿಂದ ಪುಷ್ಟನೆಲ್ಲ ಕಾಲ ;
ಒದಗಿರಲ್ಕೆ ಕಾರ್ಯಕಾಲ
ತಾನೆ ವೈರಿಯಾದನೇ ? ೨೮

(ಆಲೋಚಿಸಿ, ಸ್ವಗತ) ಇರಲಿ. ಉಪಾಯ ಹೊಳೆಯಿತು. ನನ್ನ ತಲೆಯನ್ನು ಹಿಡಿದು ಅಳ್ಳಾಡಿಸಿದ ಈ ಮುದಿ ನರಿಯೇ ಪಾಠ ಕಲಿಸಿದಂತಾಗಿದೆ. ಇವನನ್ನು ಕಳುಹಿಸಿ ವಸಂತಸೇನೆಯನ್ನು ಸಾಯಿಸುವೆನು. ಹೀಗೆ ಮಾಡುತ್ತೇನೆ—(ಪ್ರಕಾಶ) ಭಾವ, ನಾನು ಮೊದಲು ಹೇಳಿದೆನಲ್ಲಾ, ಹಾಗೆಲ್ಲ ಅಲ್ಲ. ಪಾನಪಾತ್ರೆಯಂತೆ ಇಷ್ಟು ದೊಡ್ಡ ಕುಲದಲ್ಲಿ ಹುಟ್ಟಿದ ನಾನೆಲ್ಲಾದರೂ ಅಕಾರ್ಯಮಾಡುವುದುಂಟೆ ? ನನ್ನನ್ನೀಕೆ ಒಪ್ಪಲೆಂದು ಹಾಗೆ ಹೇಳಿದೆ, ಅಷ್ಟೆ !

ವಿಟ— ಕುಲವನೊರೆದು ಬಂದುದೇನು
ಶೀಲವೊಂದೆ ಕಾರಣ ;
ಮುಳ್ಳು ಗಿಡಗಳೊಳ್ಳೆ ನೆಲದೆ
ಹುಲುಸಿನಿಂದ ಬೆಳೆಯವೆ ? ೨೯

ಶಕಾರ—ಭಾವ, ಈಕೆ ನಿನ್ನ ಮುಂದೆ ನಾಚುತ್ತಾಳೆ. ನನ್ನನ್ನು ಒಪ್ಪುವುದಿಲ್ಲ. ಆದ್ದರಿಂದ ನೀನು ಹೋಗು. ಅಲ್ಲದೆ ಚೇಟ ಸ್ಥಾವರಕನನ್ನು ಚೆನ್ನಾಗಿ ಹೊಡೆದು ಕಳುಹಿಸಿದ್ದೇನೆ. ಎಲ್ಲಾದರೂ ತಪ್ಪಿಸಿಕೊಂಡು ಓಡಿ ಹೋದಾನು. ಆದ್ದರಿಂದ ಅವನನ್ನು ಹುಡುಕಿ ಹಿಡಿದುಕೊಂಡು ಬಾ.

ವಿಟ—(ಸ್ವಗತ)
ತನ್ನ ಗೌರವದಿಂದ ಮೂರ್ಖನಿಗೊಲಿಯಳೆನ್ನಯ ಇದಿರೊಳು
ಈ ವಸಂತಸೇನೆಯು ;
ಅದರಿನೇಕಾಂತವನು ಈಕೆಗೆ ತರುವೆನೇಕಾಂತಾಶ್ರಿತ
ಕಾಮುವಹುದು ನಿಶ್ಚಿತ. ೩೦

(ಪ್ರಕಾಶ) ಆಗಲಿ ಹೋಗುವೆನು.

ವಸಂತಸೇನೆ—(ಸೆರಗನ್ನು ಹಿಡಿದುಕೊಂಡು) ಅಂಗಲಾಚಿ ಹೇಳುತ್ತಿದ್ದೇನೆ— ನೀನೇ ನನಗೆ ಶರಣು.

ವಿಟ—ವಸಂತಸೇನೆ, ಅಂಜಬೇಡ, ಅಂಜಬೇಡ. ಕಾಣೇಲೀಕುಮಾರ, ವಸಂತಸೇನೆಯನ್ನು ನಿನ್ನ ಕೈಯಲ್ಲಿ ನ್ಯಾಸವಾಗಿಟ್ಟು ಹೋಗುತ್ತಿದ್ದೇನೆ.

ಶಕಾರ—ಹಾಗೆಯೇ ಆಗಲಿ. ಇವಳು ನನ್ನ ಕೈಯಲ್ಲಿ ಣಾಶವೇ ('ನ್ಯಾಸ' ಮತ್ತು 'ನಾಶ') ಆಗಲಿ.

ವಿಟ—ಸತ್ಯವೋ ?

ಶಕಾರ—ಸತ್ಯ.

ವಿಟ—(ಸ್ವಲ್ಪದೂರ ಹೋಗಿ) ಅಥವಾ ನಾನು ಹೋದ ಮೇಲೆ ಈ ದುರಾತ್ಮನು ಇವಳನ್ನು ಕೊಂದುಬಿಡಬಹುದು. ಆದ್ದರಿಂದ ಮರೆಯಲ್ಲಿ ನಿಂತು ಇವನ ಉದ್ದೇಶವನ್ನು ಅರಿತುಕೊಳ್ಳುವೆನು. (ಮರೆಯಲ್ಲಿ ನಿಲ್ಲುವನು)

ಶಕಾರ—ಇರಲಿ, ಕೊಲ್ಲುವೆನು. ಅಥವಾ ಕಪಟಕುತಂತ್ರಿಯಾದ ಈ ಬ್ರಾಹ್ಮಣ ಮುದಿನರಿ ಇಲ್ಲೇ ಎಲ್ಲಾದರೂ ಮರೆಯಲ್ಲಿ ನರಿಯಂತೆ ನಿಂತು ಮೋಸಮಾಡಬಹುದು. ಆದ್ದರಿಂದ ಅವನನ್ನು ವಂಚಿಸಲು ಹೀಗೆ ಮಾಡುತ್ತೇನೆ. (ಹೂವುಗಳನ್ನು ಕೊಯ್ದು ದೇಹವನ್ನು ಅಲಂಕರಿಸಿ ಕೊಳ್ಳುವನು) ಹುಡುಗಿ, ಹುಡುಗಿ, ವಸಂತಸೇನೆ, ಇತ್ತ ಬಾ.

ವಿಟ—ಓ, ಕಾಮಿಯೇ ಆಗಿದ್ದಾನೆ. ನನಗೆ ನಿರಾಳವಾಯಿತು. ಹೋಗುವೆನು. (ಹೋಗುವನು)

ಶಕಾರ— ಹೊನ್ನನೀವೆ ಸವಿಯ ನುಡಿವೆ ಮುಡಿರುಮಾಲಿನಿಂದ
ಕೂಡಿ ಕಾಲಿಗೆರಗುವೆ ;
ಆದೊಡೇಕೆ ನಲ್ಮೆದೋರೆ ದಾಸನಲ್ಲಿ ಸುದತಿಯೆ
ಪುರುಷರಿರವೆ ಕಷ್ಟವು ! ೩೧

ವಸಂತಸೇನೆ—ಸಂಶಯವೇಕೆ ? (ತಲೆಬಗ್ಗಿಸಿ ಎರಡು ಪದ್ಯಗಳನ್ನು ಹೇಳುವಳು)
ಓ ದುರಾತ್ಮ, ನೀಚ, ಪಾಪಿ, ಧನದ ಆಸೆದೋರುತೆ
ನನ್ನನೇಕೆ ನುಡಿಸುವೆ ?
ಪುಣ್ಯಶೀಲ ಶುದ್ಧದೇಹನಪ್ಪ ಪದ್ಮಕಾಂತನ
ದುಂಬಿಬಿಂಡು ತೊರೆವುವೆ ? ೩೨

ಸುಕುಲಶೀಲವುಳ್ಳ ಪುರುಷನನ್ನೆ ಬಡವನಾದೊಡಂ
ಯತ್ನಗೈದು ಸಾರ್ವುದು,
ವೇಶ್ಯೆಯರಿಗೆ ಯೋಗ್ಯವೆಂಬೆ, ಯೋಗ್ಯಜನರನೈದುವ
ಪರಿಯೆ ದಿಟದ ನಶ್ಮೆಯು. ೩೩

ಇನ್ನೂ ಒಂದು ಮಾತಿದೆ. ಸೀಮಾವಿನ ಮರವನ್ನು ಸೇವಿಸಿರುವ ನಾನು ಮುತ್ತುಗದ ಮರವನ್ನೆಂದೂ ಒಪ್ಪುವುದಿಲ್ಲ.

ಶಕಾರ—ತೊತ್ತಿನ ಮಗಳೆ, ದರಿದ್ರ ಚಾರುದತ್ತ ನಿನಗೆ ಸೀಮಾವಿನ ಮರವಾದನೋ! ನನ್ನನ್ನು ಮುತ್ತುಗದ ಮರವೆಂದು ಆಡುತ್ತಿರುವೆ; ಕಿಂಶುಕವೃಕ್ಷ ಕೂಡ ಅಲ್ಲ. ನನ್ನನ್ನು ಹೀಗೆಲ್ಲಾ ಬಯ್ಯುತ್ತಾ ಇನ್ನೂ ಆ ಚಾರುದತ್ತನನ್ನೇ ನೆನೆಯುತ್ತಿರುವೆ!

ವಸಂತಸೇನೆ—ಹೃದಯೇಶನಾಗಿರುವನೆಂದಮೇಲೆ ನೆನೆಯದೆ ಹೇಗಿರಲಿ?

ಶಕಾರ—ಈಗಲೇ ನಿನ್ನ ಹೃದಯೇಶ್ವರನನ್ನೂ ನಿನ್ನನ್ನೂ ಕೂಡಿಯೇ ತೀರಿಸುವೆನು. ಆದ್ದರಿಂದ ದರಿದ್ರ ವರ್ತಕಮನುಷ್ಯನ ಕಾಮುಕಿಯೇ, ನಿಲ್ಲು, ನಿಲ್ಲು.

ವಸಂತಸೇನೆ—ಹೇಳು, ಹೇಳು, ಮತ್ತೆ ಹೇಳು. ಈ ಮಾತುಗಳು ನನಗೆ ಗೌರವವನ್ನು ತರುತ್ತವೆ!

ಶಕಾರ—ಆ ತೊತ್ತಿನ ಮಗ ದರಿದ್ರ ಚಾರುದತ್ತನೇ ಈಗ ಬಂದು ನಿನ್ನನ್ನು ಕಾಪಾಡಲಿ.

ವಸಂತಸೇನೆ—ನನ್ನನ್ನು ಕಂಡರೆ ಕಾಪಾಡುವನು.

ಶಕಾರ— ಯಾವನವನು ಶಕ್ರನೇನು? ವಾಲಿಪುತ್ರನಿಂದ್ರನೋ?
ರಂಭೆ ಮಗನೊ ಕಾಲನೇಮಿಯಲ್ಲದಿರೆ ಸುಬಂಧುವೋ?
ರುದ್ರನರಸ ದ್ರೋಣಪುತ್ರನೆನ್ನುವಾ ಜಟಾಯುವೋ?
ಚಾಣಕ್ಯನೊ ಧುಂಧುಮಾರನೆಂಬನೋ ತ್ರಿಶಂಕುವೋ?

ಅಥವಾ, ಇವರೇ ಬಂದರೂ ನಿನ್ನನ್ನು ಕಾಪಾಡಲಾರರು—

ಕೈಯಿಂ ಭಾರತಯುಗದಲಿ ಸೀತೆಯ
ಕಡಿದಿರ್ದಾ ಚಾಣಕ್ಯನೊಲು;

ಕಡಿವೆನು ನಿನ್ನನು ದ್ರೌಪದಿರಾಣಿಯ
ನೊಯ್ಯನೆ ಕಡಿದ ಜಟಾಯುವೊಲು. ३೫

(ಹೊಡೆಯಲನುವಾಗುವನು)

ವಸಂತಸೇನೆ—ಅಯ್ಯೋ! ಅಮ್ಮಾ! ಎಲ್ಲಿರುವೆ? ಹಾ, ಆರ್ಯ ಚಾರುದತ್ತ, ಅಭೀಷ್ಟ ಈಡೇರದೆಯೇ ನಾನು ಸಾಯುತ್ತಿರುವೆ! ಆದ್ದರಿಂದ ಗಟ್ಟಿಯಾಗಿ ಕೂಗಿಕೊಳ್ಳುವೆನು. ಅಥವಾ ವಸಂತಸೇನೆ ಗಟ್ಟಿಯಾಗಿ ಕೂಗಿಕೊಳ್ಳುವಳೆಂಬುದು ನಾಚಿಕೇಗೆಡು. ಆರ್ಯ ಚಾರುದತ್ತನಿಗೆ ನಮಸ್ಕಾರ.

ಶಕಾರ—ಎಲಾ, ಗರ್ಭದಾಸಿ, ಇನ್ನೂ ಆ ಪಾಪಿಯ ಹೆಸರನ್ನೇ ಎತ್ತುವೆಯಾ? (ಕತ್ತನ್ನು ಕಿವುಚುತ್ತ) ನೆನೆ, ಗರ್ಭದಾಸಿ, ನೆನೆ.

ವಸಂತಸೇನೆ—ಆರ್ಯಚಾರುದತ್ತನಿಗೆ ನಮಸ್ಕಾರ.

ಶಕಾರ—ಸಾಯಿ, ಗರ್ಭದಾಸಿ, ಸಾಯಿ. (ಕತ್ತಿಯನ್ನು ಒತ್ತಿ ಕಿವುಚಿ ಸಾಯಿಸುವನು)

(ವಸಂತಸೇನೆ ನಿಶ್ಚೇಷ್ಟಳಾಗಿ ಮೂರ್ಛೆ ಬೀಳುವಳು)

ಶಕಾರ—(ಹರ್ಷದಿಂದ)

ಇವಳಂ ದೋಷಕರಂಡೆಯನ್ನವಿನಯಕ್ಕಾವಾಸೆಯಂ ಪಾಪೆಯಂ
ಭರದಿಂ ದುರ್ಗತನಪ್ಪ ಕಾಂತನೆಡೆಗೈತಂದಿರ್ಪಳಂ ರಾಗದಿಂ—
ಕರಮೀಗಳ್ ಪೊಗಳಲ್ಕೆ ಬರ್ಪುದೆ ಮದೀಯೋದ್ದಂಡಶೌಂಡೀರ್ಯಮಂ
ಉಸಿರಂ ಕಟ್ಟಿಸಿ ಕೊಂದೆ ಭಾರತದೊಳಾ ಸೀತಾಖ್ಯೆಯಂ
ಕೊಂದವೋಲ್ ३೬

ಕಾಮಿಪೆನ್ನನು ಸೂಳೆ ಕಾಮಿಸಳೆಂಬ ಕೋಪದೆ ಕೊಂದೆನು
ಶೂನ್ಯಪುಷ್ಪಕರಂಡದಲ್ಲಿದೊ ಕೊರಳಿಗೆಳೆಯುತೆ ನೇಣನು :
ನನ್ನ ಅಣ್ಣನು, ತಂದೆ, ದ್ರೌಪದಿಸಮಳೆ ತಾಯೆನಲೆಲ್ಲರೂ
ಪುತ್ರಶೌರ್ಯವನಿಂದು ನೋಡಪೆ ತಾವೆ ವಂಚಿತರಾದರು. ३೭

ಇರಲಿ. ಈಗ ಮುದಿನರಿ ಬರುವ ಹೊತ್ತಾಯಿತು. ಆದ್ದರಿಂದ ನಾನು ದೂರಹೋಗಿ ನಿಲ್ಲುತ್ತೇನೆ.

(ಪ್ರವೇಶ—ವಿಟ ಮತ್ತು ಸ್ಥಾವರಕ)

ವಿಟ—ಚೇಟ ಸ್ಥಾವರಕನನ್ನು ಸಮಾಧಾನ ಮಾಡಿಯಾಯಿತು. ಈಗಿನ್ನು ಕಾಣೇಲೀಕುಮಾರನನ್ನು ಹೋಗಿ ಕಾಣುವೆನು. (ನಡೆಯುತ್ತ, ನೋಡಿ) ಅಯ್ಯೋ, ಇದೇನು, ದಾರಿಯಲ್ಲೇ ಮರ ಮುರಿದು ಬಿದ್ದಿರುವುದಲ್ಲಾ! ಮರ ಬೀಳುವಾಗ ಈ ಹೆಂಗಸಿನ ಮೇಲೆ ಬಿದ್ದು, ಇವಳೂ ಪ್ರಾಣಬಿಟ್ಟಿರುವಳು! ಅಯ್ಯೋ ಪಾಪಿ, ನೀನು ಎಂತಹ ಅಕಾರ್ಯ ಮಾಡಿದೆ. ಪಾಪಿಯಾದ ನಿನ್ನ ಪತನದ ಫಲವಾಗಿ ಸ್ತ್ರೀಹತ್ಯೆಯನ್ನು ನೋಡಿ ನಾವೂ ಪತಿತರಂತಾದೆವು! ಇದು ಅಪಶಕುನವೇ ಸರಿ. ನಿಜವಾಗಿಯೂ ವಸಂತಸೇನೆಯೇನಾದಳೋ ಎಂದು ನನ್ನ ಮನಸ್ಸು ಕಾತರಿಸುತ್ತಿದೆ. ಹೇಗೂ ದೇವತೆಗಳೇ ಶುಭವನ್ನು ಮಾಡಬೇಕು! (ಶಕಾರನ ಬಳಿಗೆ ಬಂದು) ಕಾಣೇಲೀಕುಮಾರ, ಇದೋ, ಚೇಟ ಸ್ಥಾವರಕನನ್ನು ಸಮಾಧಾನ ಮಾಡಿಕೊಂಡು ಕರೆತಂದಿದ್ದೇನೆ.

ಶಕಾರ- ಭಾವ, ನಿನಗೆ ಸ್ವಾಗತ. ಮಗನೆ, ಸ್ಥಾವರಕ, ನಿನಗೂ ಸ್ವಾಗತ.

ಸ್ಥಾವರಕ—ಆಗಲಿ.

ವಿಟ—ನನ್ನ ನ್ಯಾಸವನ್ನು ತಿರುಗಿ ಕೊಡು.

ಶಕಾರ—ಯಾವ ನ್ಯಾಸ?

ವಿಟ – ವಸಂತಸೇನೆ.

ಶಕಾರ—ಹೋದಳು.

ವಿಟ—ಎಲ್ಲಿಗೆ?

ಶಕಾರ—ಭಾವನ ಹಿಂದೆಯೇ.

ವಿಟ—(ವಿಚಾರಮಾಡಿ) ಇಲ್ಲ, ಆ ದಿಕ್ಕಿನಲ್ಲಿ ಅವಳು ಹೋಗಿಲ್ಲ.

ಶಕಾರ—ನೀನು ಹೋದುದು ಯಾವ ದಿಕ್ಕಿನಲ್ಲಿ?

ವಿಟ—ಪೂರ್ವ ದಿಕ್ಕಿನಲ್ಲಿ.

ಶಕಾರ—ಅವಳು ದಕ್ಷಿಣದಿಕ್ಕಿನಲ್ಲಿ ಹೋದಳು.

ವಿಟ—ನಾನೂ ದಕ್ಷಿಣದಿಕ್ಕಿನಲ್ಲಿ ಹೋದೆ.

ಶಕಾರ—ಅವಳು ಉತ್ತರದಿಕ್ಕಿನಲ್ಲಿ ಹೋದಳು.

ವಿಟ—ಅತ್ಯಂತ ಅಸಂಬದ್ಧವಾಗಿ ಮಾತನಾಡುತ್ತಿರುವೆ. ನನ್ನ ಮನಸ್ಸಿಗೆ ಸಮಾಧಾನವಿಲ್ಲ. ನಿಜವನ್ನು ಹೇಳಿಬಿಡು.

ಶಕಾರ—ಭಾವನ ತಲೆಯಾಣೆಗೂ ನನ್ನ ಕಾಲುಗಳಾಣೆಗೂ. ನಿಜವನ್ನು ಹೇಳುತ್ತೇನೆ. ಮನಸ್ಸನ್ನು ಗಟ್ಟಿಮಾಡಿಕೊ. ಅವಳನ್ನು ನಾನು ಕೊಂದು ಹಾಕಿದ್ದೇನೆ.

ವಿಟ—(ದುಃಖದಿಂದ) ನಿಜವಾಗಿಯೂ ಕೊಂದುಬಿಟ್ಟೆಯಾ ?

ಶಕಾರ—ನನ್ನ ಮಾತಿನಲ್ಲಿ ನಂಬಿಕೆಯಿಲ್ಲದಿದ್ದರೆ ರಾಜಶ್ಯಾಲ ಸಂಸ್ಥಾನಕನ ಶೌರ್ಯವನ್ನು ನೀನೇ ನೋಡು. (ತೋರಿಸುವನು)

ವಿಟ—ಅಯ್ಯೋ, ನಾನೆಂತಹ ಮಂದಭಾಗ್ಯ ! (ಮೂರ್ಛೆಬೀಳುವನು).

ಶಕಾರ—ಹೀ ಹೀ ಹಿ ! ಭಾವನೂ ಸತ್ತನು.

ಸ್ಥಾವರಕ—ಭಾವನು ಸಮಾಧಾನಗೊಳ್ಳಬೇಕು. ಹಿಂದು ಮುಂದು ವಿಚಾರ ಮಾಡದೆ ರಥವನ್ನು ತಂದ ನಾನು ಅವಳನ್ನು ಮೊದಲೇ ಕೊಂದಾಗಿತ್ತು.

ವಿಟ—(ಚೇತರಿಸಿಕೊಂಡು)

ದಾಕ್ಷಿಣ್ಯೋದಕಸಿಂಧುವಿಲ್ಲ ರತಿಯೇ ಪೋದಳ್ ಸ್ವದೇಶಕ್ಕಣಂ
ಹಾ ಹಾಲಂಕೃತಭೂಷಣೇ ಸುವದನೇ ಕ್ರೀಡಾರಸೋದ್ಭಾಸಿನಿ
ಹಾ ಸೌಜನ್ಯನದಿ ಪ್ರಹಾಸಪುಲಿನೇ ಎನ್ನನ್ನರಿಂಗಾಶ್ರಯೇ
ಹಾ ಹಾ ಪೋದುದು ಕಾಮನಂಗಡಿಯಹಾ ಸೌಭಾಗ್ಯಪಣ್ಯಾಕರಂ ೩೮

(ಕಣ್ಣೀರಿಡುತ್ತ) ಅಯ್ಯೋ, ಎಂತಹ ಅನ್ಯಾಯ—

ನೀನಿಂದೆಸಗಿದೆ ಕಾರ್ಯವನಿನ್ನೀ-
ನೆನ್ನಲಿ ನುಡಿಯಲು ತೀರದದು ;
ಪಾಪಿಯು ನೀನಾ ಪಾಪವನರಿಯದ
ನಗರದ ಸಿರಿಯನೆ ಕೆಡಹಿರುವೆ. ೩೯

(ಸ್ವಗತ) ಈ ಪಾಪಿ ಒಂದುವೇಳೆ ಈ ಅಕೃತ್ಯವನ್ನು ನನ್ನ ತಲೆಗೂ ಕಟ್ಟಿಬಿಡಬಹುದು. ಇಲ್ಲಿಂದ ಮೊದಲು ದೂರವಾಗುತ್ತೇನೆ. (ಹೊರಡುವನು)

(ಶಕಾರನು ಹಿಂದಿನಿಂದ ಬಂದು ನಿಲ್ಲಿಸುವನು)

ವಿಟ—ಪಾಪಿ, ನನ್ನನ್ನು ಮುಟ್ಟಬೇಡ. ನಿನ್ನ ಸಹವಾಸ ಸಾಕು. ನನ್ನಷ್ಟಕ್ಕೆ ನಾನು ಹೋಗುವೆನು.

ಶಕಾರ—ಎಲಾ, ವಸಂತಸೇನೆಯನ್ನು ನೀನೇ ಕೊಂದು, ನನ್ನ ಮೇಲೆ ತಪ್ಪುಹೊರಿಸಿ ನೀನೆಲ್ಲಿಗೆ ಓಡುತ್ತಿರುವೆ? ಅಯ್ಯೋ, ಈ ಸಮಯದಲ್ಲಿ ನಾನೇ ಅರಕ್ಷಿತನಾದೆನಲ್ಲಾ !

ವಿಟ—ನೀನು ಹಾಳಾಗು!

ಶಕಾರ— ನೂರರೊಳರ್ಧದ ಹೊನ್ನನೆ ಕೊಡುವೆನು
ಕೊಡುವೆನು ಕಾಸನು ಕವಡೆಯನು ;
ಎನ್ನ ಪರಾಕ್ರಮದೀ ಪಳಿಯೆಲ್ಲವು
ಹಂಚಲಿ ಮೇಣ್ ಜನರೆಲ್ಲರೊಳು. ೪೦

ವಿಟ—ಛೆ, ಛೆ, ನಿನ್ನಲ್ಲೇ ಇರಲಿ.

ಸ್ಥಾವರಕ—ಶಾಂತಂ ಪಾಪಂ.

(ಶಕಾರನು ನಗುವನು)

ದ್ವೇಷವೆ ನೊಳೆಯಲಿ ಬಿಡುಬಿಡು ನಗೆಯನು,
ಸುಡು ಕೇಡಿನ ನಿನ್ನೊಲುಮೆಯನು ;
ನಿನ್ನಯ ಸಂಗವು ಬೇಡೆಂದೆಂದೂ ;
ತೊರೆವೆನು ಬಿಲ್ಲಿನೆ ಮುರಿದಿರುವ,
ನಿನ್ನನ್ನೀಗಲೆ ನಿರ್ಗುಣನ. ೪೧

ಶಕಾರ—ಭಾವ, ಪ್ರಸನ್ನನಾಗು. ಇಲ್ಲಿ ಬಾ. ಪುಷ್ಕರಿಣಿಯಲ್ಲಿ ಜಲಕ್ರೀಡೆಯಾಡೋಣ.

ವಿಟ— ನಿನ್ನ ಸೇವೆಯ ಗೈಯುವೆನ್ನನು ಪತಿತನಲ್ಲದೆಯಿದ್ದರೂ
ಪತಿತನೆಂಬೇ, ನೀಚನೆಂದೇ, ಜನರು ಬಗೆಯುವರೆಲ್ಲರೂ ;
ಸ್ತ್ರೀಯ ಹತ್ಯವ ಗೈದ ನಿನ್ನನ್ನೆಂತು ನಾನನುವರ್ತಿಪೆಂ
ಊರ ನಾರಿಯರಂಜಿದರೆ ನೋಟಂಗಳಿಂದುರೆ ನೋಳ್ಪಿನಂ. ೪೨

(ದುಃಖದಿಂದ) ವಸಂತಸೇನೆ,

ಮುಂದಿನ ಜನ್ಮದೊಳಾನೊಡವೊಡತಿಯೆ
ಸೂಳೆಯ ಕುಲದಲಿ ಜನಿಸದಿರು ;
ವರಚಾರಿತ್ರಗುಣಾನ್ವಿತವಾಗಿಹ
ನಿರ್ಮಲಕುಲವೊಳೆ ನೀ ಜನಿಸು. ೪೩

ಶಕಾರ—ಎಲಾ, ನನ್ನ ಪುಷ್ಪಕರಂಡಕ ಉದ್ಯಾನದಲ್ಲಿ ವಸಂತಸೇನೆಯನ್ನು ಕೊಂದು ಹಾಕಿ ಎಲ್ಲಿಗೆ ಓಡುವೆ? ಬಾ, ಬಾ, ನಮ್ಮ ಭಾವನ ಮುಂದೆ ನಿನ್ನ ಹೇಳಿಕೆಯನ್ನು ಕೊಟ್ಟು ಹೋಗು. (ಹಿಡಿದು ಸಿಲ್ಲಿಸುವನು)

ವಿಟ—ಆ, ನೀಚ, ನಿಲ್ಲು. (ಕತ್ತಿಯನ್ನೆಳೆಯುವನು)

ಶಕಾರ—(ಭಯಪಟ್ಟು ಹಿಂಜರಿದು) ಆ, ನೀನು ತುಂಬಾ ಅಂಜಿರುವೆ. ಹೋಗು ಹೋಗು.

ವಿಟ—(ಸ್ವಗತ) ಇಲ್ಲಿರುವುದು ಸರಿಯಲ್ಲ. ಮಿತ್ರರಾದ ಶರ್ವಿಲಕ, ಚಂದನಕ ರೆಲ್ಲಿರುವರೋ ಅಲ್ಲಿಗೆ ಹೋಗುವೆನು. (ನಿಷ್ಕ್ರಮ)

ಶಕಾರ—ಸತ್ತು ಹೋಗು! ಅರೇ ಸ್ಥಾವರಕ, ಮಗು, ನೋಡಿದೆಯಾ, ನಾನು ಹೇಗೆ ಮಾಡಿದೆ!

ಸ್ಥಾವರಕ—ಒಡೆಯ, ಬಹಳ ಹೀನವಾದ ಅಕೃತ್ಯವನ್ನು ಮಾಡಿದೆ.

ಶಕಾರ—ಎಲಾ ಚೇಟ, ಅಕೃತ್ಯವನ್ನು ಮಾಡಿದೆನೆನ್ನುವೆಯಾ? ಇರಲಿ. ಹೀಗೆ ನೋಡು, (ಅನೇಕ ಆಭರಣಗಳನ್ನು ಕಳಚಿ) ಇದೋ ನಾನು ದಾನ ಮಾಡುತ್ತಿರುವ ಈ ಆಭರಣಗಳನ್ನು ಹಿಡಿ. ಎಷ್ಟು ಹೊತ್ತು ನಾನು ಹಾಕಿಕೊಂಡಿರುವೆನೋ ಅಷ್ಟು ಹೊತ್ತು ಮಾತ್ರ ಇವು ನನ್ನವು. ಉಳಿದ ಹೊತ್ತಿನಲ್ಲೆಲ್ಲ ನಿನ್ನವೇ.

ಸ್ಥಾವರಕ—ಇವು ಒಡೆಯನಿಗೆ ಮಾತ್ರ ಒಪ್ಪುತ್ತವೆ. ನನಗೇಕೆ ಇವು?

ಶಕಾರ—ಸರಿ, ಹೋಗು. ಈ ಎತ್ತುಗಳನ್ನು ಹೊಡೆದುಕೊಂಡು ಹೋಗಿ ನನ್ನ ಅರಮನೆಯ ಮಾಳಿಗೆಯ ಮಚ್ಚಿನಲ್ಲಿರು. ನಾನೂ ಬರುತ್ತೇನೆ.

ಸ್ಥಾವರಕ—ಒಡೆಯನ ಅಪ್ಪಣೆ. (ನಿಷ್ಕ್ರಮ)

ಶಕಾರ—ಆತ್ಮರಕ್ಷಣೆಗೋಸ್ಕರ ಭಾವನು ಕಣ್ಮರೆಯಾದನು. ಈ ಚೇಟ ಸ್ಥಾವರಕನನ್ನೂ ಕಾಲ್ಬೇಡಿ ಹಾಕಿ ಅಲ್ಲೇ ಅಲ್ಲಾಡದಂತೆ ಮಾಡುತ್ತೇನೆ. ಹೀಗೆ ಮಾಡುವುದರಿಂದ ಗುಟ್ಟು ರಟ್ಟಾಗುವುದಿಲ್ಲ. ಹೋಗುವೆನು. ಅಥವಾ ಇವಳನ್ನು ಇನ್ನೊಮ್ಮೆ ನೋಡಿ ಬರುತ್ತೇನೆ—ಪೂರ್ತಿ ಸತ್ತಿರುವಳೋ ಇಲ್ಲವೆ ಮತ್ತೊಮ್ಮೆ ಸಾಯಿಸಬೇಕೋ ಎಂದು. (ನೋಡಿ) ಪೂರ್ತಿ ಸತ್ತಿದ್ದಾಳೆ. ಇರಲಿ. ಈ ಹಚ್ಚಡವನ್ನು ಇವಳ ಮೇಲೆ ಹೊದಿಸುವೆನು. ಬೇಡ, ಈ ಹಚ್ಚಡದ ಮೇಲೆ ನನ್ನ

ಹೆಸರಿದೆ. ಅದರಿಂದ ಜನರು ನನ್ನನ್ನು ಗುರುತಿಸಬಹುದು. ಇರಲಿ. ಗಾಳಿಗೆ ರಾಶಿಯಾಗಿರುವ ಈ ತರಗೆಲೆಗಳಿಂದ ಇವಳನ್ನು ಮುಚ್ಚುತ್ತೇನೆ. (ಹಾಗೆ ಮಾಡಿ ವಿಚಾರಿಸುತ್ತ) ಇರಲಿ, ಹೀಗೆಯೇ ಸರಿ. ಈಗ ನ್ಯಾಯಾಲಯಕ್ಕೆ ಹೋಗಿ ವ್ಯವಹಾರವನ್ನು ಹೂಡುತ್ತೇನೆ—ಹಣದಾಸೆಯಿಂದ ವರ್ತಕನಾದ ಚಾರುದತ್ತನು ನನ್ನ ಪುಷ್ಪಕರಂಡಕ ಜೀರ್ಣೋದ್ಯಾನವನ್ನು ಅತಿಕ್ರಮಿಸಿ ಹೊಕ್ಕು ವಸಂತಸೇನೆಯನ್ನು ಕೊಂದುಹಾಕಿರುವನು, ಎಂದು.

ಚಾರುದತ್ತನಾಶಕೀಗ
ಹೊಸತೆ ಮೋಸ ರಚಿಸುವೆ;
ಶುದ್ಧನಗರಿಯಲ್ಲಿ ಕ್ರೂರ
ಹತ್ಯೆಯೆನಲು ಗೋವಿನ. ೪೪

ಇರಲಿ, ಹೋಗುವೆನು. (ಹೋಗುತ್ತ, ನೋಡಿ) ಅಯ್ಯಯ್ಯೋ, ಅಬ್ಬಬ್ಬಾ, ನಾನು ಎಲ್ಲೆಲ್ಲಿ ಹೋದರೂ ಅಲ್ಲಲ್ಲೇ ಈ ದುಷ್ಟಭಿಕ್ಷು ಒಗೆದ ಒದ್ದೆ ಕಾವಿ ಬಟ್ಟೆಯನ್ನು ಹಿಡಿದುಕೊಂಡು ಬರುತ್ತಾನೆ. ಹಿಂದೆ ಇವನ ಮೂಗನ್ನು ಕೊಯ್ದು ಓಡಿಸಿದ್ದೆನಾದ್ದರಿಂದ ನನ್ನನ್ನು ಕಂಡರೆ ವೈರವೂ ಇದೆ. ಎಲ್ಲಾದರೂ ನನ್ನನ್ನು ಕಂಡುಬಿಟ್ಟರೆ ನನ್ನಿಂದಲೇ ಈಕೆ ಹತಳಾದ ಳೆಂದು ಹೇಳಿಯೂ ಬಿಡಬಹುದು. ಈಗ ಹೇಗೆ ಹೋಗಲಿ? (ನೋಡಿ) ಇರಲಿ, ಈ ಅರ್ಧ ಮುರಿದ ಗೋಡೆಯನ್ನು ಹಾರಿ ಹೋಗುವೆನು.

ಜೇಗದೆ ಪೋಪೆನು ಲಂಕೆಯ ಊರೊಳು
ಗಗನದೆ, ಭೂಪಾತಾಳದೊಳು;
ಹನುಮಾಚಲದಾ ಶಿಖರದೆ ಹಾರುವ
ಆ ಕಡುಶೂರ ಮಹೇಂದ್ರನೊಲು. ೪೫

(ನಿಷ್ಕ್ರಮ)

(ತೆರೆಯನ್ನೆತ್ತಿ ಪ್ರವೇಶ—ಮುಂಚೆ ಸಂವಾಹಕನಾಗಿದ್ದ ಭಿಕ್ಷು)

ಭಿಕ್ಷು—ಈ ಕಾವಿಬಟ್ಟೆಯನ್ನು ಒಗೆದಾಯಿತು. ಈಗ ಇದನ್ನು ಮರದ ಕೊಂಬೆಯ ಮೇಲೆ ಒಣಹಾಕಲೇ? ಕಪಿಗಳು ಬಟ್ಟೆಯನ್ನೇ ಇಲ್ಲ

ವೆನಿಸಿಬಿಡಬಹುದು. ನೆಲದ ಮೇಲೆ ಹರವಲೇ? ಧೂಳು ಹತ್ತಿಕೊಳ್ಳುವುದು. ಎಲ್ಲಿ ಹರಡಿ ಒಣಗಿಸಲಿ? (ನೋಡಿ) ಇರಲಿ; ಗಾಳಿಯಿಂದ ರಾಶಿಯಾಗಿರುವ ಈ ತರಗೆಲೆಗಳ ಗುಡ್ಡೆಯ ಮೇಲೆ ಹರಡುತ್ತೇನೆ (ಹಾಗೆ ಮಾಡಿ) ಬುದ್ಧನಿಗೆ ನಮೋ ನಮಃ (ಕುಳಿತುಕೊಳ್ಳುವನು) ಧರ್ಮವಚನಗಳನ್ನು ಧ್ಯಾನಿಸುವೆನು—

ಕೊಲ್ಲುತ್ತೈವರನದಾವಂ
ಕೊಲ್ಲುತ್ತುಂ ಪೆಣ್ಣನಂತೆ ಪೊರೆವಂ ಪುರಮಂ
ಕೊಲ್ಲುತೆ ಹೊಲೆಯನನಂತೆಯೆ
ಸಲ್ಲುವನಯ್ ಸ್ವರ್ಗಪದವಿಗಾತನೆ ನಿರುತಂ
ತಲೆಬೋಳಿಸಿ ಮುಖಬೋಳಿಸಿ ಮನಬೋಳಿಸದಿರಲು
ಬರಿಬೋಳಿಸಿ ಫಲವೇನದು ತಾನೊದಗುವುದೋ?
ಯಾವಾತನ ಮನವ್ಯೆಸಲೆ ತಾ ಬೋಳಿನಲಹುದೋ
ದಿಟಮಾತನ ತಲೆಯಲ್ಲವೆ ಸರಿಬೋಳಿನಲಹುದು?

(ಎಂದು ಅಂಕದ ಆರಂಭದಲ್ಲಿ ಬಂದ ಪದ್ಯಗಳನ್ನೇ (೨ ಮತ್ತು ೩) ಹಾಡುವನು)

ಅಥವಾ ನನಗೆ ಈಗ ಸ್ವರ್ಗದ ಚಿಂತೆಯೂ ಬೇಡವಾಗಿದೆ. ಬುದ್ಧನ ಉಪಾಸಕಳಾದ ಆ ವಸಂತಸೇನೆಗೆ ಪ್ರತ್ಯುಪಕಾರವನ್ನು ಮಾಡುವವರೆಗೂ ಆಕೆ ನನ್ನನ್ನು ಜೂಜುಗಾರನಿಂದ ಬಿಡಿಸುವಾಗ ಕೊಟ್ಟ ಹತ್ತು ಹೊನ್ನುಗಳಿಂದ ನನ್ನನ್ನೇ ಕೊಂಡುಕೊಂಡಾಗಿದೆಯೆನಿಸುತ್ತಿದೆ. (ನೋಡಿ) ಇದೇನು? ಎಲೆಯ ಗುಡ್ಡೆಯೊಳಗೆ ಉಸಿರಾಡುವಂತಿದೆ! ಅಥವಾ—

ಗಾಳಿಬಿಸಿಲಿನಿಂದ ಬೆಂದ
ಎಲೆಗಳೊದ್ದೆ ಬಟ್ಟೆಯಿಂದ
ನೆನೆದು ಸ್ತಿಮಿತವಾಗಿವೆ;
ರೆಕ್ಕೆಗಳನು ಹರಡಿಕೊಂಡ
ಹಕ್ಕಿಯಿವುಗಳೆನಿಸುವಂತೆ
ನೋಡಲಂದವಾಗಿವೆ. ೪೬

(ವಸಂತಸೇನೆ ಚೇತರಿಸಿಕೊಂಡು ಕೈ ನೀಡುವಳು)

ಭಿಕ್ಷು—ಹಾ, ಇದೇನು! ಒಡವೆಗಳಿಂದ ಅಲಂಕೃತವಾದ ಸ್ತ್ರೀ ಹಸ್ತವೊಂದೇ ಹೊರಗೆ ಬರುತ್ತಿದೆಯಲ್ಲಾ! ಓ, ಎರಡನೆಯ ಕೈಯೂ ಬಂದಿತು. (ಚೆನ್ನಾಗಿ ಪರೀಕ್ಷಿಸುತ್ತ) ಹೆಚ್ಚು ವಿಚಾರ ಮಾಡುವ ಕಾರಣವೇ ಇಲ್ಲ. ನನಗೆ ಅಂದು ಅಭಯವನ್ನಿತ್ತ ಹಸ್ತವೇ ಇದು. ಇರಲಿ, ನೋಡುವೆನು. (ಎಲೆಗಳನ್ನು ಸರಿಸಿ ನೋಡಿ, ಗುರುತಿಸಿ) ಓ, ಆ ಬುದ್ಧೋಪಾಸಕಳೇ ಇವಳು.

(ವಸಂತಸೇನೆ ನೀರು ಬೇಕೆಂದು ಸಂಜ್ಞೆಮಾಡುವಳು)

ಭಿಕ್ಷು—ಓ, ನೀರು ಬೇಕೆನ್ನುವಳಲ್ಲಾ! ಕೊಳವೋ ದೂರದಲ್ಲಿದೆ. ಈಗೇನು ಮಾಡಲಿ! ಇರಲಿ. ಈ ಒದ್ದೆಬಟ್ಟೆಯನ್ನೇ ಇವಳ ಬಾಯಿಗೆ ಹಿಂಡುವೆನು. (ಹಾಗೆ ಮಾಡುವನು)

(ವಸಂತಸೇನೆ ಚೇತರಿಸಿಕೊಂಡು ಏಳುವಳು. ಭಿಕ್ಷು ಸೆರಗಿನಿಂದ ಗಾಳಿ ಹಾಕುವನು).

ವಸಂತಸೇನೆ—ಆರ್ಯ, ನೀನು ಯಾರು?

ಭಿಕ್ಷು—ಅಂದು ಹತ್ತು ಹೊನ್ನುಗಳಿಂದ ಬಿಡಿಸಲ್ಪಟ್ಟುದಷ್ಟೇ ಅಲ್ಲ, ಕೊಳ್ಳಲ್ಪಟ್ಟ ನನ್ನ ಗುರುತು ಉಪಾಸಕಳಿಗೆ ಹತ್ತುವುದಿಲ್ಲವೆ?

ವಸಂತಸೇನೆ—ಈಗ ನೆನಪಾಯಿತು. ಆದರೆ ನೀನು ಹೇಳುವಂತಲ್ಲ-ನಾನು ಸತ್ತರೇ ಲೇಸು.

ಭಿಕ್ಷು—ಬುದ್ಧೋಪಾಸಕಳೆ, ಇದೇನಿದು?

ವಸಂತಸೇನೆ—(ನಿರ್ವಿಣ್ಣಳಾಗಿ) ಸೂಳೆತನಕ್ಕೆ ಒಪ್ಪತಕ್ಕುದೇ.

ಭಿಕ್ಷು—ಮರದ ಪಕ್ಕದ ಈ ಬಳ್ಳಿಯನ್ನು ಹಿಡಿದು ಬುದ್ಧೋಪಾಸಕಳು ಮೆಲ್ಲನೆ ಏಳಬೇಕು. (ಬಳ್ಳಿಯನ್ನು ಬಾಗಿಸುವನು).

(ವಸಂತಸೇನೆ ಅದನ್ನು ಹಿಡಿದು ಏಳುವಳು)

ಭಿಕ್ಷು—ಇದೋ, ಈ ವಿಹಾರದಲ್ಲಿ ನನ್ನ ಧರ್ಮಸೋದರಿಯೊಬ್ಬಳಿರುವಳು. ಅಲ್ಲಿ ವಿಶ್ರಾಂತಿಪಡೆದು ಉಪಾಸಕಳು ಮನೆಗೆ ಹೋಗಬೇಕು. ಮೆಲ್ಲ ಮೆಲ್ಲನೆ ಅಡಿಯಿಡಿಮ್ಮಾ. (ನಡೆಯುವನು. ನೋಡಿ) ಸರಿಯಿರಿ ಜನರೇ, ಸರಿಯಿರಿ; ಇವಳು ತರುಣಿ. ನಾನು ಭಿಕ್ಷು. ಆದರೆ ಇವಳನ್ನು ನಡೆಸುವುದೀಗ ನನ್ನ ಶುದ್ಧಧರ್ಮವಾಗಿದೆ—

ಕೈಯ ಸಂಯಮ ಬಾಯ ಸಂಯಮ ಕರಣಸಂಯಮವೆಂಬಿವು
ನೆರೆಯಲವನೇ ಮನುಜನು ;
ಅರಸನಾತಗೆ ಮಾಳ್ಪುದೇನಿದೆ, ಪರದ ಲೋಕವೆ ಆತನ
ಕೈಯೊಳಿರ್ಪುದು ನಿಶ್ಚಲ. ೪೭

ಇಲ್ಲಿಗೆ 'ವಸಂತಸೇನೆಯ ಕೊಲೆ'ಯೆಂಬ ಎಂಟನೆಯ ಅಂಕ ಮುಗಿದುದು

---

# ಒಂಭತ್ತನೆಯ ಅಂಕ

(ಪ್ರವೇಶ—ಶೋಧನಕ)

ಶೋಧನಕ—ನ್ಯಾಯಸ್ಥಾನದ ಅಧಿಕಾರಿಗಳು ಅಪ್ಪಣೆ ಮಾಡಿದ್ದಾರೆ— 'ಎಲಾ ಶೋಧನಕ, ವ್ಯವಹಾರ ಮಂಟಪಕ್ಕೆ ಹೋಗಿ ಆಸನಗಳನ್ನು ಸರಿ ಮಾಡು' ಎಂದು. ಆದ್ದರಿಂದ ನ್ಯಾಯಾಲಯದ ಆಸನಗಳನ್ನು ಸರಿಯಾಗಿಡುವುದಕ್ಕೀಗ ಹೋಗುತ್ತಿದ್ದೇನೆ. (ನಡೆಯುತ್ತ, ನೋಡಿ ಆಸನಗಳನ್ನಿರಿಸಿ) ನ್ಯಾಯಮಂಟಪವನ್ನು ಶುಭ್ರವಾಗಿ ಗುಡಿಸಿಯಾಯಿತು. ಇದೇ ನ್ಯಾಯಮಂಟಪ. ಪ್ರವೇಶಿಸುವೆನು. (ಪ್ರವೇಶಿಸಿ, ಗುಡಿಸಿ, ಆಸನಗಳನ್ನೂ ಸರಿಯಾಗಿರಿಸಿಯಾಯಿತು. ಹೋಗಿ ಅಧಿಕಾರಿಗಳಿಗೆ ತಿಳಿಸುವೆನು. (ನಡೆಯುತ್ತ, ನೋಡಿ) ಓ, ರಾಜಶ್ಯಾಲನಾದ ಈ ದುಷ್ಟ, ದುರ್ಜನ ಮನುಷ್ಯ ಇತ್ತ ಕಡೆಗೇ ಬರುತ್ತಿರುವನಲ್ಲಾ! ಅವನ ಕಣ್ಣನ್ನು ತಪ್ಪಿಸಿ ಆ ಮೇಲೆ ಹೋಗುವೆನು. (ಮರೆಯಲ್ಲಿ ನಿಲ್ಲುವನು.)

(ಪ್ರವೇಶ—ಉಜ್ಜ್ವಲ ವೇಷದ ಶಕಾರ)

ಶಕಾರ—

ಮಿಂದೆನು ನೀರಲಿ ಜಲದಲಿ ಸಲಿಲದೆ
ಉಪವನಕಾನನ ತೋಟದಲಿ;
ಸ್ತ್ರೀಯರ, ಪೆಂಡಿರ, ರಮಣಿಯರೊಡನೆಯೆ
ಗಂಧರ್ವನವೊಲ್ ಮೈಯೆಸೆಯೆ. ೧

ಒಂದು ಚಣ ಗಂಟಾಗಿ ಒಂದು ಚಣ ಜಡೆಯಾಗಿ
ಒಂದು ಚಣ ಕೂದಲದು ಕುರುಳು ಕೇಶ;
ಒಂದು ಚಣ ನೀಳವೆನಲೊಂದು ಚಣ ಮೇಲ್ಗಂಟು
ಚಿತ್ರ! ನಾನು ವಿಚಿತ್ರ!—ರಾಜಬಂಧು. ೨

ಅಷ್ಟೇ ಅಲ್ಲ. ವಿಷಲತೆಯ ಗಂಟಿನೊಳಗೆ ಸಿಕ್ಕಿಕೊಂಡ ಹುಳುವಿನಂತೆ

ಹೊರಬರುವ ದಾರಿಯನ್ನು ಹುಡುಕುತ್ತಿರುವ ನನಗೆ ಹೆದ್ದಾರಿಯೇ ಸಿಕ್ಕಿದೆ. ಈ ಹೀನ ಕೃತ್ಯವನ್ನು ಯಾರ ಮೇಲೆ ಹಾಕಲಿ? (ನೆನಪು ಮಾಡಿಕೊಂಡು) ಆ, ನೆನಪಾಯಿತು. ದರಿದ್ರಚಾರುದತ್ತನ ಮೇಲೆ ಈ ಅಕೃತ್ಯವನ್ನು ಹೊರಿಸುವೆನು. ಅದೂ ಅಲ್ಲದೆ ಅವನು ದರಿದ್ರ. ಅವನ ಬಗೆಗೆ ಏನು ಹೇಳಿದರೂ ನಡೆಯುತ್ತದೆ. ಇರಲಿ, ನ್ಯಾಯ ಮಂಟಪಕ್ಕೆ ಹೋಗಿ ಮೊದಲು ದೂರನ್ನು ಬರೆಯಿಸುತ್ತೇನೆ–'ಚಾರು ದತ್ತನು ವಸಂತಸೇನೆಯನ್ನು ಕತ್ತು ಹಿಸುಕಿ ಕೊಂದಿದ್ದಾನೆ.' ಎಂದು. ಆದ್ದರಿಂದ ನ್ಯಾಯಮಂಟಪಕ್ಕೆ ಮುಂಚೆ ಹೋಗುವೆನು. (ನಡೆಯುತ್ತ, ನೋಡಿ) ಇದೇ ನ್ಯಾಯಮಂಟಪ. ಇಲ್ಲಿ ಕುಳಿತುಕೊಳ್ಳುವೆನು. (ಪ್ರವೇಶಿಸಿ, ನೋಡಿ) ಓ, ಆಸನಗಳನ್ನು ಸರಿಮಾಡಿ ಇರಿಸಿದಂತಿದೆ. ನ್ಯಾಯಾಲಯದ ಅಧಿಕಾರಿಗಳು ಬರುವವರೆಗೂ ಈ ಹೊರ ಅಂಗಳದ ಹುಲ್ಲಿನ ಮೇಲೆಯೇ ಕುಳಿತು ಕಾಯುವೆನು. (ಹಾಗೆ ಮಾಡುವನು)

ಶೋಧನಕ—(ಮತ್ತೊಂದು ಕಡೆಯಿಂದ ನಡೆಯುತ್ತ, ಮುಂದೆ ನೋಡಿ) ಓ, ಅಧಿಕಾರಿಗಳು ಬರುತ್ತಿರುವರು. ಸಮೀಪಿಸುವೆನು. (ಸಮೀಪಿಸುವನು)

(ಪ್ರವೇಶ—ನ್ಯಾಯಾಧೀಶ, ಸೆಟ್ಟಿ, ಕರಣಿಕ ಮುಂತಾದವರೊಡನೆ)

ನ್ಯಾಯಾಧೀಶ—ಸೆಟ್ಟಿ ಕರಣಿಕರೆ!

ಸೆಟ್ಟಿಕರಣಿಕರು—ಪ್ರಭುವಿನ ಅಪ್ಪಣೆ?

ನ್ಯಾಯಾಧೀಶ—ವ್ಯವಹಾರನೀತಿಯ ನಿರ್ಬಂಧದ ಪರಿಣಾಮವಾಗಿ ನ್ಯಾಯಾಧೀಶರು ಪರರ ಮನಸ್ಸನ್ನು ಸರಿಯಾಗಿ ಗ್ರಹಿಸುವುದೇ ದುಷ್ಕರ!—

ಸುಳ್ಳುದೂರನೆ ಜನರು ತರುವರು ನ್ಯಾಯಬಾಹಿರವಾಗಿಹ
ರಾಗ ಪರವಶರವರು ತಮ್ಮಯ ದೋಷದಿರವನು ನುಡಿಯರು :
ದೋಷ ಪಕ್ಷವಿಪಕ್ಷವೆರಡರ ಬೆಳೆದು ದೊರೆಗೈತರುವುದು
ನ್ಯಾಯದರ್ಶಿಗೆ ನಿಂದೆ ಸುಲಭವು, ಗುಣದ ಮಾತೇ ದೂರವು. ೩

ಗೂಢದೋಷವ ಮುಳಿದು ನುಡಿವರು, ನ್ಯಾಯಬಾಹಿರರೆಂದೆನೆ.
ತಮ್ಮ ದೋಷವನವರು ನುಡಿಯರು ಸಾಧು ಜನರೂ ಕೆಡುವರು;

ಸಿಕ್ಕಿ ಪಕ್ಷವಿಪಕ್ಷವೆರಡರ ಪಾಪಲೇಪದೊಳಿಂತಿರೆ
ನ್ಯಾಯದರ್ಶಿಗೆ ನಿಂದೆ ಸುಲಭವು, ಗುಣದ ಮಾತೇ ದೂರವು. ೪

ಆದರ್ಶ ನ್ಯಾಯಾಧೀಶನೆಂದರೆ—

ಶಾಸ್ತ್ರಜ್ಞಂ ಕಪಟಾನುಸಾರಕುಶಲಂ ವಕ್ತಾರನಕ್ರೋಧನಂ
ತುಲ್ಯಂ ಮಿತ್ರಪರಸ್ವಕೀಯಜನರೊಳ್ ಪೇಳ್ವಂ ಪರೀಕ್ಷಾಂತ್ಯದೊಳ್
ಧರ್ಮ್ಯಂ ದುರ್ಬಲರಕ್ಷಕಂ ಕುಜನರಂ ದಂಡಿಪ್ಪ ಲೋಭಚ್ಯುತಂ
ಸದ್ಭಾವಂ ಪರತತ್ತ್ವಬದ್ಧಹೃದಯಂ ಭೂಪಾಲಕೋಪಾಪಹಂ ೫

ಸೆಟ್ಟಿಕರಣಿಕರು—ತಮ್ಮ ವಿಷಯದಲ್ಲಿ ಗುಣವನ್ನು ದೋಷವೆನ್ನುವುದುಂಟೆ? ಹಾಗಾದರೆ ಬೆಳುದಿಂಗಳಲ್ಲಿ ಕಗ್ಗತ್ತಲೆ ತುಂಬಿದೆಯೆಂದಂತೆಯೇ. ಸರಿ.

ನ್ಯಾಯಾಧೀಶ—ಶೋಧನಕ, ನ್ಯಾಯಮಂಟಪದ ದಾರಿ ತೋರಿಸು.

ಶೋಧನಕ—ಇತ್ತ ಬರಬೇಕು, ನ್ಯಾಯಾಧೀಶರು ಇತ್ತ ಬರಬೇಕು.

(ಎಲ್ಲರೂ ನಡೆಯುವರು)

ಶೋಧನಕ—ಇದೇ ನ್ಯಾಯಮಂಟಪ. ನ್ಯಾಯಾಧಿಪತಿಗಳು ದಯಮಾಡಿಸಬೇಕು.

(ಎಲ್ಲರೂ ಪ್ರವೇಶಿಸುವರು)

ನ್ಯಾಯಾಧೀಶ—ಶೋಧನಕ, ಹೊರಗೆ ಹೋಗಿ ಕಾರ್ಯಾರ್ಥಿಗಳು ಯಾರಿರುವರೆಂದು ತಿಳಿದು ಬಾ.

ಶೋಧನಕ—ಅಪ್ಪಣೆ. (ಹೊರಗೆ ಹೋಗಿ) ಆರ್ಯರೆ, ನ್ಯಾಯಾಧಿಪತಿಗಳು ಹೇಳುತ್ತಾರೆ—'ಕಾರ್ಯಾರ್ಥಿಗಳು ಯಾರು ಯಾರು ?' ಎಂದು.

ಶಕಾರ—(ಸಂತೋಷದಿಂದ) ನ್ಯಾಯಾಧಿಪತಿಗಳು ಬಂದಾಯಿತು. (ಆಟೋಪದಿಂದ ಎದ್ದು ಬಂದು) ನಾನು ವರಪುರುಷ, ಮನುಷ್ಯ, ವಾಸುದೇವ, ರಾಜನ ಭಾವಮೈದುನ, ಕಾರ್ಯಾರ್ಥಿಯಾಗಿದ್ದೇನೆ.

ಶೋಧನಕ—(ಕಳವಳದಿಂದ) ಅಯ್ಯೋ, ಮೊದಲೇ ರಾಜಶ್ಯಾಲನು ಕಾರ್ಯಾರ್ಥಿಯಾದನೇ? ಆಗಲಿ. 'ಆರ್ಯ, ಒಂದು ಕ್ಷಣ ನಿಲ್ಲು. ನ್ಯಾಯಾಧೀಶರಿಗೆ ಹೋಗಿ ತಿಳಿಸಿ ಬರುತ್ತೇನೆ.' (ಬಂದು) ಪ್ರಭುಗಳೆ, ಇದೋ ಈ ರಾಜಶ್ಯಾಲನು ಕಾರ್ಯಾರ್ಥಿಯಾಗಿ ನ್ಯಾಯಾಲಯಕ್ಕೆ ಬಂದಿದ್ದಾನೆ.

ನ್ಯಾಯಾಧೀಶ—ಏನು? ಮೊದಲೇ ರಾಜಶ್ಯಾಲನು ಕಾರ್ಯಾರ್ಥಿಯೇ? ಸೂರ್ಯೋದಯಕಾಲದಲ್ಲಿಯೇ ಗ್ರಹಣಹಿಡಿಯುವುದು ಮಹಾ ಪುರುಷನ ಪತನವನ್ನೇ ಸೂಚಿಸುತ್ತದೆ. ಶೋಧನಕ, ಇಂದಿನ ನ್ಯಾಯವಿಚಾರಣೆ ವ್ಯಾಕುಲವಾಗುವುದೆಂದೇ ತೋರುತ್ತದೆ. ಹೋಗಿ ಹೇಳು—'ಹೋಗು, ಈಗ ನಿನ್ನ ವ್ಯವಹಾರವನ್ನು ವಿಚಾರಿಸಲು ಶಕ್ಯವಿಲ್ಲ' ಎಂಬುದಾಗಿ.

ಶೋಧನಕ—ಅಪ್ಪಣೆ (ಹೊರಗೆ ಶಕಾರನ ಬಳಿಗೆ ಬಂದು) ಆರ್ಯ, ನ್ಯಾಯಾಧೀಶರು ಹೇಳುತ್ತಾರೆ—'ಈಗ ಹೋಗು. ನಿನ್ನ ವ್ಯವಹಾರವನ್ನು ವಿಚಾರಿಸಲವಕಾಶವಿಲ್ಲ' ಎಂದು.

ಶಕಾರ—(ಕ್ರೋಧದಿಂದ) ಏನು, ನನ್ನ ವ್ಯವಹಾರವನ್ನು ವಿಚಾರಿಸುವುದಿಲ್ಲವೋ? ವಿಚಾರಿಸದಿದ್ದರೆ ಭಾವ, ರಾಜ, ಪಾಲಕನಿಗೂ, ಸೋದರಿ, ತಾಯಿಗೂ ಹೇಳಿಕೊಂಡು ಈ ನ್ಯಾಯಾಲಯವೇ ಇಲ್ಲವೆನ್ನಿಸಿ ಇಲ್ಲಿ ಇನ್ನೊಂದು ನ್ಯಾಯಾಲಯ ಬರುವಂತೆ ಮಾಡುತ್ತೇನೆ. (ಹೋಗದಲನುವಾಗುವನು)

ಶೋಧನಕ—ಆರ್ಯ, ರಾಜಶ್ಯಾಲ, ಒಂದು ಕ್ಷಣ ನಿಲ್ಲು. ನ್ಯಾಯಾಧೀಶರಿಗೆ ತಿಳಿಸಿ ಬರುತ್ತೇನೆ. (ನ್ಯಾಯಾಧೀಶನ ಬಳಿಗೆ ಬಂದು) ಈ ರಾಜಶ್ಯಾಲನು ಕೋಪಿಸಿಕೊಂಡು ಹೀಗೆನ್ನುತ್ತಾನೆ. (ಅವನ ಮಾತನ್ನು ತಿಳಿಸುವನು.)

ನ್ಯಾಯಾಧೀಶ—ಈ ಮೂರ್ಖನು ಏನು ಬೇಕಾದರೂ ಮಾಡಬಹುದು. ಹೋಗಿ ಹೇಳು—'ಬಾ, ನಿನ್ನ ವ್ಯವಹಾರವನ್ನು ವಿಚಾರಿಸಲಾಗುತ್ತದೆ' ಎಂದು.

ಶೋಧನಕ—(ಶಕಾರನ ಬಳಿಗೆ ಬಂದು) ಆರ್ಯ, ನ್ಯಾಯಾಧೀಶರು ಹೇಳುತ್ತಾರೆ—'ಬಾ, ನಿನ್ನ ವ್ಯವಹಾರವನ್ನು ವಿಚಾರಿಸಲಾಗುತ್ತದೆ' ಎಂದು. ಆದ್ದರಿಂದ ಒಳಕ್ಕೆ ಬರಬೇಕು.

ಶಕಾರ—ಮೊದಲು 'ವಿಚಾರಿಸುವುದಿಲ್ಲ' ಎಂದವರೇ ಈಗ 'ವಿಚಾರಿಸಲಾಗುತ್ತದೆ' ಎನ್ನುತ್ತಿದ್ದಾರೆ ಎಂದ ಮೇಲೆ ನ್ಯಾಯಾಧೀಶರು ಭಯಭೀತರಾಗಿದ್ದಾರೆಂದಾಯಿತು. ನಾನು ಏನೇನು ಹೇಳುವೆನೋ ಅದೆಲ್ಲ

ವನ್ನೂ ನಂಬುವಂತೆ ಮಾಡುತ್ತೇನೆ. ಇರಲಿ. ಒಳಕ್ಕೆ ಹೋಗುವೆನು. (ಪ್ರವೇಶಿಸಿ, ಹತ್ತಿರ ಬಂದು) ನನಗೆ ಎಲ್ಲಾ ಸುಖವಾಗಿದೆ. ನಿಮಗೂ ಸುಖವನ್ನು ಕೊಡುತ್ತೇನೆ, ಕೊಡುವುದೂ ಇಲ್ಲ.

ನ್ಯಾಯಾಧೀಶ—(ಸ್ವಗತ) ಅಹಾ, ಕಾರ್ಯಾರ್ಥಿಯ ಸಂಸ್ಕಾರ ಅಚ್ಚುಳಿಯದಂತಿದೆ! (ಪ್ರಕಾಶ) ಕುಳಿತುಕೊ.

ಶಕಾರ—ಆ, ಈ ನೆಲ ನನ್ನದು. ನನಗೆಲ್ಲಿ ಬೇಕೋ ಅಲ್ಲಿ ಕುಳಿತುಕೊಳ್ಳುವೆನು. (ಶೋಧನಕನನ್ನು ಕುರಿತು) ಇದೋ ಇಲ್ಲಿ ಕುಳಿತಿದ್ದೇನೆ.(ನ್ಯಾಯಾಧೀಶನ ತಲೆಯ ಮೇಲೆ ಕೈಯನ್ನಿಟ್ಟು) ಇದೋ, ಕುಳಿತೆ. (ನೆಲದ ಮೇಲೆ ಕುಳಿತು ಕೊಳ್ಳುವನು.)

ನ್ಯಾಯಾಧೀಶ—ನೀನು ಕಾರ್ಯಾರ್ಥಿಯೇನು?

ಶಕಾರ—ಹೌದು.

ನ್ಯಾಯಾಧೀಶ—ಹಾಗಾದರೆ ಕಾರ್ಯವನ್ನು ತಿಳಿಸು.

ಶಕಾರ—ಕಿವಿಯಲ್ಲಿ ಕಾರ್ಯವನ್ನು ತಿಳಿಸುವೆನು. ಇಷ್ಟು ದೊಡ್ಡ ಕೊಳದನ್ನಲೆಯಂತಹ ಕುಲದಲ್ಲಿ ನಾನು ಜನಿಸಿದವನು!

ದೊರೆಯ ಮಾವನೆನ್ನ ತಂದೆ
ತಂದೆಗರಸನಳಿಯನು;
ನಾನು ದೊರೆಯ ಭಾವನೈದ
ದೊರೆಯೆ ತಂಗಿಗಂಡನು. ೬

ನ್ಯಾಯಾಧೀಶ—ಎಲ್ಲವೂ ಗೊತ್ತಿದೆ—

ಕುಲವನೊರೆದು ಬಂದುದೇನು
ಶೀಲವೊಂದೆ ಕಾರಣ;
ಮುಳ್ಳು ಗಿಡಗಳೊಳ್ಳೆ ನೆಲದೆ
ಹುಲುಸಿನಿಂದ ಬೆಳೆಯವೆ? ೭

ಆದ್ದರಿಂದ ಕಾರ್ಯವನ್ನು ಮಾತ್ರ ಹೇಳು.

ಶಕಾರ—ಈಗ ಹೇಳುತ್ತೇನೆ. ನಾನು ಅಪರಾಧಿಯೇ ಆಗಿದ್ದರೂ ಅವನು (ದೊರೆ) ಏನೂ ಮಾಡುವುದಿಲ್ಲ. ಆ ನನ್ನ ಸೋದರಿಯ ಗಂಡ ತುಂಬಾ ಸಂತುಷ್ಟನಾಗಿ ನನಗೆ ಕ್ರೀಡಿಸುವುದಕ್ಕೂ ರಕ್ಷಿಸುವುದಕ್ಕೂ

ಉದ್ಯಾನಗಳಲ್ಲೆಲ್ಲ ಶ್ರೇಷ್ಠವಾದ ಪುಷ್ಪಕರಂಡಕ ಜೀರ್ಣೋದ್ಯಾನವನ್ನು ಕೊಟ್ಟಿರುವನು. ಅಲ್ಲಿ ನಿತ್ಯವೂ ನೋಡುವುದಕ್ಕೂ, ಒಣಗಿಸುವುದಕ್ಕೂ, ಶುದ್ಧಿಮಾಡುವುದಕ್ಕೂ, ಬೆಳೆಯಿಸುವುದಕ್ಕೂ, ಕಡಿಯಿಸುವುದಕ್ಕೂ ನಾನು ಹೋಗುತ್ತೇನೆ. ದೈವಯೋಗದಿಂದ ನೋಡುತ್ತೇನೆ, ಇಲ್ಲ ನೋಡಲಿಲ್ಲ, ಹೆಂಗಸೊಬ್ಬಳ ಮೃತದೇಹ ಬಿದ್ದಿದೆ.

ನ್ಯಾಯಾಧೀಶ—ಮೃತಳಾದ ಹೆಂಗಸು ಯಾರೆಂದು ಗೊತ್ತಿದೆಯೆ?

ಶಕಾರ—ನ್ಯಾಯಾಧೀಶರೆ, ನಾನು ಕಾಣೆನೆ—ನೂರಾರು ಹೊನ್ನಿನ ಒಡವೆಗಳಿಂದ ಅಲಂಕೃತೆಯಾಗಿದ್ದ ಅಂಥ ಊರ ಸುಂದರಿಯನ್ನು! ಯಾರೋ ದುಷ್ಟನು ಹಾಳಾದ ಆ ಹೊನ್ನಿನ ಆಸೆಯಿಂದ ಶೂನ್ಯವಾಗಿದ್ದ ಪುಷ್ಪಕರಂಡಕಜೀರ್ಣೋದ್ಯಾನವನ್ನು ಹೊಕ್ಕು ಅಲ್ಲಿ ವಸಂತಸೇನೆಯನ್ನು ತೋಳುಗಳಿಂದ ಹಿಸುಕಿ ಕೊಲೆ ಮಾಡಿರುವನು. ನಾನಲ್ಲ . . . (ಮಾತನ್ನು ಮುಗಿಸದೆಯೇ ಮುಖವನ್ನು ಮುಚ್ಚಿಕೊಳ್ಳುವನು)

ನ್ಯಾಯಾಧೀಶ—ನಗರರಕ್ಷಿಗಳ ಪ್ರಮಾದ ಎಷ್ಟು! ಸೆಟ್ಟಿಕರಣಿಕರೆ, 'ನಾನಲ್ಲ....' ಎಂಬ ಮಾತನ್ನು ಇವನ ಹೇಳಿಕೆಯಲ್ಲಿ ಮೊದಲು ಬರೆದುಕೊಳ್ಳಿರಿ.

ಕರಣಿಕ—ಅಪ್ಪಣೆ. (ಬರೆದು) ಪ್ರಭು, ಬರೆದಾಯಿತು.

ಶಕಾರ—ಅಕಟಕಟಾ, ಆತುರದಿಂದ ಕುದಿಯುವ ಪಾಯಸವನ್ನು ನುಂಗಿದವನಂತೆ ನಾನು ನನ್ನನ್ನೇ ನಾಶಮಾಡಿಕೊಂಡೆನಲ್ಲಾ! ಇರಲಿ. ಹೀಗೆ ಮಾಡುವೆನು. ನ್ಯಾಯಾಧೀಶರೆ, ನಾನೇ ಕಂಡೆನೆಂದು ಹೇಳುತ್ತಿದ್ದೇನೆ. ಸುಮ್ಮನೆ ಏಕೆ ಕೋಲಾಹಲ ಮಾಡುತ್ತಿರುವಿರಿ? (ಬರೆದಿರುವುದನ್ನು ಕಾಲಿನಿಂದ ಒರೆಸುವನು)

ನ್ಯಾಯಾಧೀಶ—ಒಡವೆಯಾಸೆಯಿಂದ ತೋಳುಗಳಿಂದಲೇ ಕತ್ತನ್ನು ಹಿಸುಕಿ ಅವಳನ್ನು ಕೊಂದರೆಂದು ನಿನಗೆ ಹೇಗೆ ತಿಳಿಯಿತು?

ಶಕಾರ—ಹೋ, ಹೋ, ಕೊರಳು ಊದಿತ್ತು, ಒಡವೆಯಿರಬೇಕಾದ ಕಡೆಗಳೆಲ್ಲಾ ಬರಿದು ಬರಿದಾಗಿದ್ದುವು. ಅದರಿಂದ ಊಹಿಸಿದೆ.

ಸೆಟ್ಟಿಕರಣಿಕರು—ಇರಬಹುದು ಎಂಬಂತಿದೆ.

ಶಕಾರ—(ಸ್ವಗತ) ಅದೃಷ್ಟವೇ ಸರಿ. ಬದುಕಿದೆ! ಹೋ, ಹೋ.

ಸೆಟ್ಟಿಕರಣಿಕರು—ಈ ವ್ಯವಹಾರ ಯಾರ ಮೇಲೆ ?
ನ್ಯಾಯಾಧೀಶ—ವ್ಯವಹಾರ ಎರಡು ವಿಧ.
ಸೆಟ್ಟಿಕರಣಿಕರು—ಯಾವಯಾವದು ?
ನ್ಯಾಯಾಧೀಶ—ಹೇಳಿಕೆಯನ್ನು ಕುರಿತದ್ದು ಮತ್ತು ವಸ್ತುಸ್ಥಿತಿಯನ್ನು ಕುರಿತದ್ದು. ಹೇಳಿಕೆಯನ್ನು ಕುರಿತ ವ್ಯವಹಾರ ವಾದಿಪ್ರತಿವಾದಿಗಳಿಗೆ ಸಂಬಂಧಿಸುತ್ತದೆ. ವಸ್ತುಸ್ಥಿತಿಯನ್ನು ಕುರಿತ ವ್ಯವಹಾರ ನ್ಯಾಯಾಧೀಶನ ಬುದ್ಧಿಗೆ ಒಳಪಡುತ್ತದೆ.
ಸೆಟ್ಟಿಕರಣಿಕರು—ಹಾಗಾದರೆ ಈ ವ್ಯವಹಾರ ವಸಂತಸೇನೆಯ ತಾಯಿಯನ್ನೇ ಅವಲಂಬಿಸುತ್ತದೆ.
ನ್ಯಾಯಾಧೀಶ—ಹೌದು. ಶೋಧನಕ, ಹೋಗಿ ಗಾಬರಿಪಡಿಸದೆ ವಸಂತಸೇನೆಯ ತಾಯನ್ನು ಕರೆದುಕೊಂಡು ಬಾ.
ಶೋಧನಕ—ಅಪ್ಪಣೆ. (ಹೋಗಿ, ಗಣಿಕೆಯ ತಾಯೊಡನೆ ಬಂದು) ಇತ್ತ ಬರಬೇಕು. ಆರ್ಯೆ, ಇತ್ತ ಬರಬೇಕು.
ಮುದುಕಿ—ನನ್ನ ಹುಡುಗಿ ಯೌವನವನ್ನನುಭವಿಸಲು ತನ್ನ ಮಿತ್ರನ ಮನೆಗೆ ಹೋಗಿರುವಳು. ಈ ಚಿರಂಜೀವಿ ಹೇಳುತ್ತಾನೆ—'ಬಾ, ನ್ಯಾಯಾಧೀಶ ಕರೆಯುತ್ತಾನೆ' ಎಂದು. ನನಗೆ ಮೂರ್ಛೆ ಕವಿಯುವಂತಿದೆ. ಎದೆ ನಡುಗುತ್ತಿದೆ. ಅಪ್ಪಾ, ನ್ಯಾಯಮಂಟಪದ ದಾರಿಯನ್ನು ತೋರಿಸು.
ಶೋಧನಕ—ಇತ್ತ ಬಾ ತಾಯಿ, ಇತ್ತ ಬಾ.

(ಇಬ್ಬರೂ ನಡೆಯುವರು)

ಶೋಧನಕ—ಇದೇ ನ್ಯಾಯಮಂಟಪ. ಇತ್ತ ಬನ್ನಿ, ತಾಯಿ.

(ಇಬ್ಬರೂ ಬರುವರು)

ಮುದುಕಿ—(ಸಮೀಪಿಸಿ) ಮಹಾಶಯರಾದ ತಮ್ಮೆಲ್ಲರಿಗೂ ಒಳ್ಳೆಯದಾಗಲಿ!
ನ್ಯಾಯಾಧೀಶ—ಶುಭಳೆ, ನಿನಗೆ ಸ್ವಾಗತ. ಕುಳಿತುಕೋ, ತಾಯಿ.
ಮುದುಕಿ—ಆಗಲಿ. (ಕುಳಿತುಕೊಳ್ಳುವಳು)
ಶಕಾರ—(ಆಕ್ಷೇಪಿಸುತ್ತ) ಬಂದೆಯಾ, ಮುದಿಸೂಳೆ, ಬಂದೆಯೋ ?
ನ್ಯಾಯಾಧೀಶ—ನೀನೇ ವಸಂತಸೇನೆಯ ತಾಯಿ ಹೌದೇನು ?

ಮುದುಕಿ—ಹೌದು.

ನ್ಯಾಯಾಧೀಶ—ಈಗ ವಸಂತಸೇನೆ ಎಲ್ಲಿ ಹೋಗಿರುವಳು?

ಮುದುಕಿ—ಗೆಳೆಯನ ಮನೆಗೆ.

ನ್ಯಾಯಾಧೀಶ—ಅವಳ ಗೆಳೆಯನ ಹೆಸರೇನು?

ಮುದುಕಿ—(ಸ್ವಗತ) ಅಯ್ಯೋ ಕೇಡೆ! ಇದು ನಾಚಿಕೆಗೇಡಾಯಿತಲ್ಲಾ! (ಪ್ರಕಾಶ) ಈ ಸುದ್ದಿ ಬೇರೆ ಜನರು ಕೇಳುವಂತಹುದೇ ಹೊರತು ನ್ಯಾಯಾಧೀಶರು ಕೇಳುವಂತಹುದಲ್ಲ!

ನ್ಯಾಯಾಧೀಶ—ನಾಚಬೇಡ. ವ್ಯವಹಾರನಿಯಮವೇ ನಿನ್ನನ್ನು ಕೇಳುತ್ತಿದೆ.

ಸೆಟ್ಟಿಕರಣಿಕರು—ವ್ಯವಹಾರ ಕೇಳುತ್ತಿರುವ ಪ್ರಶ್ನೆಯೇ ಇದು. ಏನೂ ದೋಷವಿಲ್ಲ, ಹೇಳು.

ಮುದುಕಿ—ಏನು, ವ್ಯವಹಾರವೆ? ಹಾಗಾದರೆ ಪೂಜ್ಯರು ಕೇಳಬಹುದು—ಆತನು ವರ್ತಕ ವಿನಯದತ್ತನ ಮೊಮ್ಮಗ, ಸಾಗರದತ್ತನ ಮಗ, ವರ್ತಕರ ಬೀದಿಯಲ್ಲೇ ವಾಸಿಸುವ ಸದ್ಗೃಹಸ್ಥ—ಚಾರುದತ್ತ. ಅಲ್ಲಿ ಹೋಗಿ ನನ್ನ ಮಗಳು ಯೌವನ ಸುಖವನ್ನನುಭವಿಸುತ್ತಿರುವಳು.

ಶಕಾರ—ಪೂಜ್ಯರು ಕೇಳಿದಿರಿ ತಾನೆ? ಈ ಮಾತುಗಳನ್ನು ಅಕ್ಷರಶಃ ಬರೆದುಕೊಳ್ಳಿರಿ. ಆ ಚಾರುದತ್ತನೊಡನೆಯೇ ನನ್ನ ವಿವಾದವಿರುವುದು.

ಸೆಟ್ಟಿಕರಣಿಕರು—ಚಾರುದತ್ತನು ಗೆಳೆಯನೆಂಬುದರಲ್ಲಿ ದೋಷವೇನೂ ಇಲ್ಲ.

ನ್ಯಾಯಾಧೀಶ—ಈಗ ವ್ಯವಹಾರಕ್ಕೆ ಪ್ರತಿವಾದಿ ಚಾರುದತ್ತನೇ ಸರಿ.

ಸೆಟ್ಟಿಕರಣಿಕರು—ಹೀಗೆಯೇ ತೋರುತ್ತದೆ.

ನ್ಯಾಯಾಧೀಶ—ಧನದತ್ತಸೆಟ್ಟಿಗೆ, ವಸಂತಸೇನೆ ಆರ್ಯ ಚಾರುದತ್ತನ ಮನೆಗೆ ಹೋದಳೆಂದು ವ್ಯವಹಾರದ ಆರಂಭದಲ್ಲಿ ಬರೆದುಕೊಳ್ಳಿರಿ. ಅಯ್ಯೋ, ಆರ್ಯ ಚಾರುದತ್ತನನ್ನೂ ನಾವು ಇಲ್ಲಿಗೆ ಕರೆಯಿಸಬೇಕಾಯಿತಲ್ಲಾ! ಮಾಡುವುದೇನು, ವ್ಯವಹಾರವೇ ಅವನನ್ನು ಕರೆಯುತ್ತಿದೆ. ಅಪ್ಪಾ, ಶೋಧನಕ ಹೋಗು. ಆರ್ಯಚಾರುದತ್ತನನ್ನು ಮೆಲ್ಲನೆ, ಬೇಸರವಾಗದಂತೆ, ಗಾಬರಿಪಡದಂತೆ, ಆದರ

ಪೂರ್ವಕವಾಗಿ ಮಾತಾಡಿಸಿ ಪ್ರಾಸಂಗಿಕವಾಗಿ ನ್ಯಾಯಾಧೀಶರು ನಿನ್ನನ್ನು ನೋಡಬೇಕೆನ್ನುತ್ತಾರೆಂದು ತಿಳಿಸಿ ಕರೆದುಕೊಂಡು ಬಾ.

ಶೋಧನಕ—ಪ್ರಭುಗಳ ಅಪ್ಪಣೆ. (ಹೋಗುವನು. ಚಾರುದತ್ತನೊಡನೆ ಪ್ರವೇಶಿಸಿ) ಆರ್ಯನು ಇತ್ತ ಬರಬೇಕು.

ಚಾರುದತ್ತ—(ಆಲೋಚಿಸುತ್ತ)

ಪರಿಚಿತಮರಸಂಗೆನ್ನಯ
ವರಕುಲಮುಂ ಶೀಲಮುಂತೆ ಪರಿಕಿಸಲೀಗಳ್
ಕರೆಯಿದು ಭರದಿಂ ಬಗೆಯೊಳ್
ತರುತಿರ್ಪುದು ಕೇಡಿಗೆಂಬ ಭಯಮನೆ ನಿರುತಂ ೮

ಸೆರೆಯಿಂದಾಂ ಬಿಡಿಸುತ್ತುಂ
ಮರಳಿಸಿ ರಥದಿಂದೆ ಕಳಿಸಿದಾತನನೆಡೆಯೊಳ್
ಗುರುತಿಸುತರಸಂಗೊರೆದಿ-
ರ್ಪರೊ ಚಾರರ್ ಕರೆಸಲೆನ್ನನಪರಾಧಿಯವೊಲ್ ೯

ಸುಮ್ಮನೆ ಚಿಂತಿಸಿ ಏನು ಫಲ? ನ್ಯಾಯಮಂಟಪಕ್ಕೇ ಹೋಗಿ ನೋಡುವೆನು. ಅಪ್ಪಾ, ಶೋಧನಕ, ನ್ಯಾಯಾಲಯದ ದಾರಿ ತೋರಿಸು.

ಶೋಧನಕ—ಇಗೋ ಹೀಗೆ ಆರ್ಯನು ಬರಬೇಕು. (ನಡೆಯುವರು)

ಚಾರುದತ್ತ—(ಶಂಕಿಸುತ್ತ) ಮತ್ತೇನು!—

ಕೆಟ್ಟ ದನಿಯಲಿ ಕಾಗೆ ಕೂಗುತಿದೆಯೊಂದು ಕಡೆ
ರಾಜಸೇವಕರಿತ್ತ ಕೂಗುತಿಹರು;
ಅದಿರುತಿದೆಯೆಡೆಬಿಡದೆ ನನ್ನೆಡದ ಕಣ್ಣೆನಲು
ಕೆಟ್ಟಶಕುನಗಳೆನ್ನ ನೋಯಿಸಿಹವು. ೧೦

ಶೋಧನಕ—ಆರ್ಯನು ಗಾಬರಿಪಡದೆ ಇತ್ತ ಬರಬೇಕು.

ಚಾರುದತ್ತ—(ನಡೆಯುತ್ತ ಮುಂದೆ ನೋಡಿ)—

ಕಡುಪಿಂದಲೊಣಗಿಡದೆ ಕಾಗೆಯಿದಿರೆನೆ ರವಿಗೆ
ಎಡಗಣ್ಣನಿಡಲು ಭರದಿಂದ ವೈಮೇಲೆ
ಕಡುಘೋರ ಬಹುದು ಸಂಶಯವೇ? ೧೧

(ಇನ್ನೊಂದು ಕಡೆ ನೋಡಿ) ಇದೇನಿದು! ಹಾವು!

ಕಣ್ಣ ಕಪ್ಪೆನೆ ಕಪ್ಪುಬಣ್ಣವ, ಹೊಳೆಯೆ ಚಾಚಿದ ನಾಲಗೆ,
ನಾಲ್ಕು ಹಲ್ಲುಗಳೆಸೆಯೆ ಬೆಳ್ಳಗೆ, ದೃಷ್ಟಿ ನೆಟ್ಟಿರಲೆನ್ನೊಳು ;
ಮುಳಿದು ಸರ್‍ರನೆ ಹರಿವುದೆತ್ತುತೆ, ಸುರುಳಿಯಾಗಿರುವೆದೆಯನು,
ಎನ್ನ ದಾರಿಯೊಳಡ್ಡ ಮಲಗುತೆ ನಿದ್ರಿಸಿರ್ದೀ ಸರ್ಪವು. ೧೨

ಇತ್ತ ಇದೂ ಬೇರೆ—

ಕಾಲು ನೆಲದೊಳೆಡಹಿತವನಿಯೊದ್ದೆಯಲ್ಲದಿದ್ದರೂ
ಅದಿರುತಿಹುದು ಎಡದ ಕಣ್ಣು, ತೋಳು ಬಿಡದೆ ನಡುಗಿದೆ;
ಮತ್ತೆ ಮತ್ತೆ ಕೂಗುತಿಹುದು ಹಕ್ಕಿಯಿಂತು ಗಿಡದಲಿ
ಘೋರ ಮೃತ್ಯುವನ್ನೆ ಪೇಳ್ವುದಿದರೊಳಿಲ್ಲ ಸಂಶಯ. ೧೩

ಎಂತಾದರೂ ಆಗಲಿ. ದೇವತೆಗಳೇ ಒಳ್ಳೆಯದನ್ನು ಮಾಡಬೇಕು.

ಶೋಧನಕ—ಆರ್ಯನು ಇತ್ತ ಬರಬೇಕು. ಇದೇ ನ್ಯಾಯಮಂಟಪ. ಪ್ರವೇಶಿಸಬೇಕು.

ಚಾರುದತ್ತ—(ಪ್ರವೇಶಿಸಿ, ಸುತ್ತಲೂ ನೋಡಿ) ಅಹಾ, ನ್ಯಾಯಮಂಟಪದ ವೈಭವವೆಷ್ಟು!

ಚಿಂತಾಮಗ್ನಪರೀಕ್ಷಕೋದಕಮೆನಲ್ ದೂತೋರ್ಮಿ–ಶಂಖಾಸ್ಪದಂ
ಪಾರ್ಶ್ವಾಂತರ್ಗತ–ಚಾರ–ನಕ್ರ–ಮಕರಂ ನಾಗಾಶ್ವ–ಹಿಂಸಾಶ್ರಯಂ
ನಾನಾವಾದಿಜನೋಗ್ರಪಕ್ಷಿಸಹಿತಂ ಕಾಯಸ್ಥ–ಸರ್ಪಾಕುಲಂ
ನೀತಿಧ್ವಸ್ತ–ತಟಂ ನಿಪೀಡಕ-ಮಯಂ ನ್ಯಾಯಾಲಯಂ ವಾರ್ಧಿಯೋ

ಇರಲಿ. (ಪ್ರವೇಶಿಸುವಾಗಲೇ ತಲೆಗೇಟು ತಾಗುವುದನ್ನು ಗಮನಿಸಿ)
ಅಕಟಕಟಾ. ಇದೂ ಬೇರೆ—

ಎಡಗಣ್ಣದಿರ್ವುದು ವಾಯಸವುಲಿವುದು
ಸರ್ಪವೆ ದಾರಿಯ ತಡೆದಿಹುದು ;
ಅಕಟಾ ಅಪಶಕುನಂಗಳೆ ಎಲ್ಲವು
ದೈವವೆ, ನೀಂ ಶುಭಗೈಯುವುದು! ೧೪

ಇನ್ನು ಪ್ರವೇಶಿಸುವೆನು. (ಪ್ರವೇಶಿಸುವನು)

ನ್ಯಾಯಾಧೀಶ—ಇವನೋ ಈತನೇ ಚಾರುದತ್ತ! ಅಹಾ ಎಂತಹ

ಸ್ಫುರದ್ರೂಪಿ !

ಚಾರೂನ್ನತಂ ಮುಖಮಪಾಂಗವಿಶಾಲನೇತ್ರಂ
ಇಂತಪ್ಪನೊಳ್ ತಗವಕಾರಣದೂಷಣಂಗಳ್
ಗೋ-ನಾಗ-ವಾಜಿ-ಪುರುಷರ್ಕಳೊಳಿಲ್ಲ ರೂಪಂ
ಚಾರಿತ್ರಕನ್ವಯಿಸಿಯೇ ನೆಲೆಗೊಳ್ವುದೆಂದುಂ ೧೬

ಚಾರುದತ್ತ—ನ್ಯಾಯಮೂರ್ತಿಗಳಿಗೆ ಶುಭವನ್ನು ಬಯಸುತ್ತೇನೆ. ಇಲ್ಲಿಯ ಇತರ ಅಧಿಕಾರಿಗಳೇ, ನಿಮಗೂ ಕುಶಲವಷ್ಟೆ !

ನ್ಯಾಯಾಧೀಶ—(ಸಡಗರದಿಂದ) ಆರ್ಯನಿಗೆ ಸ್ವಾಗತ! ಅಪ್ಪಾ, ಶೋಧನಕ, ಆರ್ಯನಿಗೆ ಒಂದು ಆಸನವನ್ನು ತಾ.

ಶೋಧನಕ—(ಆಸನವನ್ನು ತಂದು) ಇದೋ ಆಸನ. ಆರ್ಯನು ಇಲ್ಲಿ ಕುಳಿತುಕೊಳ್ಳಬೇಕು.

(ಚಾರುದತ್ತನು ಕುಳಿತುಕೊಳ್ಳುವನು)

ಶಕಾರ—(ಸಿಟ್ಟಿಗೆದ್ದು) ಬಂದೆಯೇನೋ, ಸ್ತ್ರೀಘಾತುಕ, ಬಂದೆಯೋ? ಎಲಾ, ಈ ಸ್ತ್ರೀಹತ್ಯೆ ಮಾಡಿದವನಿಗೆ ಆಸನ ಕೊಡುತ್ತೀರಲ್ಲಾ, ಇದು ವ್ಯವಹಾರಕ್ಕೆ ನ್ಯಾಯವೇ ? ವ್ಯವಹಾರಕ್ಕೆ ಧರ್ಮವೇ ? (ಗರ್ವದಿಂದ) ಇರಲಿ, ಕೊಡಿರಿ.

ನ್ಯಾಯಾಧೀಶ—ಆರ್ಯ, ಚಾರುದತ್ತ, ನಿನಗೂ ಈಕೆಯ ಮಗಳಿಗೂ ಏನಾದರೂ ಸಂಬಂಧ, ಪ್ರಣಯ ಅಥವಾ ಪ್ರೀತಿ ಇರುವುದೇ ?

ಚಾರುದತ್ತ—ಯಾವಾಕೆ ?

ನ್ಯಾಯಾಧೀಶ—ಇಗೋ ಈಕೆ. (ವಸಂತಸೇನೆಯ ತಾಯನ್ನು ತೋರಿಸುವನು)

ಚಾರುದತ್ತ—(ಎದ್ದು) ಪೂಜ್ಯೆಗೆ ನಮಸ್ಕಾರ.

ಮುದುಕಿ—ವತ್ಸ, ಚಿರಜೀವಿಯಾಗು. (ಸ್ವಗತ) ಇವನೇ ಚಾರುದತ್ತ. ನನ್ನ ಮಗಳ ಯೌವನ ನಿಜವಾಗಿಯೂ ಸಾರ್ಥಕ.

ನ್ಯಾಯಾಧೀಶ—ಆರ್ಯ, ಗಣಿಕೆ ನಿನ್ನ ಗೆಳತಿಯೇನು ?

(ಚಾರುದತ್ತನು ನಾಚಿಕೊಳ್ಳುವನು)

ಶಕಾರ— ನಾಚಿಕೆಭಯಗಳ ನೆವದಿಂದೀತನು
ಮರೆಸುತ್ತಿರುವನು ದುಷ್ಕೃತಿಯ ;

ಆಶಿಸುತೊಡನೆಗೆ ತಾನೇ ಸಾಯಿಸಿ,
ರಾಜನು ಮರೆಸಲು ಬಿಡನಹಹ! ೧೭

ಸೆಟ್ಟಿಕರಣಿಕರು—ಆರ್ಯ ಚಾರುದತ್ತ, ಹೇಳು. ನಾಚುವುದು ಬೇಡ. ಇದು ವ್ಯವಹಾರವಲ್ಲವೆ!

ಚಾರುದತ್ತ—(ನಾಚಿಕೆಯಿಂದ) ಅಧಿಕಾರಿಗಳೆ, ಗಣಿಕೆ ನನ್ನ ಗೆಳತಿಯೆಂದು ಬಾಯಿಬಿಟ್ಟು ಹೇಗೆ ಹೇಳಲಿ? ಈ ವಿಷಯದಲ್ಲಿ ಯೌವನ ಅಪರಾಧಿಯೇ ಹೊರತು ನನ್ನ ಚಾರಿತ್ರವಲ್ಲ.

ನ್ಯಾಯಾಧೀಶ—

ಓ, ವ್ಯವಹಾರವೆ ವಿಘ್ನಸಮಾಕುಲ
ಬಿಡು ಬಿಡು ಮನಸಿನ ನಾಚಿಕೆಯ;
ನಿಜವನೆ ನುಡಿ ನುಡಿ, ಸಾಕೀ ಸಾಹಸ,
ಒಪ್ಪೆವು ಕೊಂಕಿದ ಮಾತುಗಳ. ೧೮

ನಾಚಬೇಡ. ವ್ಯವಹಾರವೇ ನಿನ್ನನ್ನು ಕೇಳುತ್ತಿದೆಯೆಂದು ತಿಳಿ.

ಚಾರುದತ್ತ—ಅಧಿಕಾರಿಗಳೆ, ನನಗೆ ಈಗ ಯಾರೊಡನೆ ವ್ಯವಹಾರ?

ಶಕಾರ—(ಆಟೋಪದಿಂದ) ಎಲೋ, ನನ್ನೊಡನೆಯೇ ವ್ಯವಹಾರ.

ಚಾರುದತ್ತ—ನಿನ್ನೊಡನೆ ನನ್ನ ವ್ಯವಹಾರವೆಂದರೆ ಅತ್ಯಂತ ದುಸ್ಸಹ.

ಶಕಾರ—ಎಲೋ ಸ್ತ್ರೀಘಾತಕ, ಹಾಗೆ ಅಂತೆ ನೂರಾರು ರತ್ನಗಳಿಂದ ಅಲಂಕೃತೆಯಾಗಿದ್ದ ವಸಂತಸೇನೆಯನ್ನು ಕೊಂದುಬಿಟ್ಟು, ಈಗ ಕಪಟ ಮೋಸಗಳಿಂದ ಮುಚ್ಚುತ್ತಿರುವೆ.

ಚಾರುದತ್ತ—ಅಸಂಬದ್ಧವೇ ನೀನು ಹೇಳುವುದೆಲ್ಲ.

ನ್ಯಾಯಾಧೀಶ—ಆರ್ಯ ಚಾರುದತ್ತ, ಇವನು ಹಾಗಿರಲಿ. ನಿಜವನ್ನು ಹೇಳು. ಗಣಿಕೆ ನಿನ್ನ ಗೆಳತಿ ಹೌದೋ?

ಚಾರುದತ್ತ—ಹೌದು.

ನ್ಯಾಯಾಧೀಶ—ಆರ್ಯ, ವಸಂತಸೇನೆಯೆಲ್ಲಿ?

ಚಾರುದತ್ತ—ಮನೆಗೆ ಹೋದಳು.

ಸೆಟ್ಟಿಕರಣಿಕರು—ಹೇಗೆ ಹೋದಳು? ಯಾವಾಗ ಹೋದಳು? ಹೋಗುವಾಗ ಸಂಗಡ ಇದ್ದವರು ಯಾರು?

ಚಾರುದತ್ತ—(ಸ್ವಗತ) ಗುಪ್ತವಾಗಿ ಹೋದಳೆಂದು ಹೇಳಲೇ?
ಸೆಟ್ಟಿಕರಣಿಕರು—ಆರ್ಯ, ಹೇಳು.
ಚಾರುದತ್ತ—ಮನೆಗೆ ಹೋದಳು. ಮತ್ತೇನು ಹೇಳಲಿ?
ಶಕಾರ—ನನ್ನ ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಕರೆದೊಯ್ದು ದುಡ್ಡಿಗಾಗಿ ಕೈಯಿಂದಲೇ ಕತ್ತನ್ನು ಹಿಸುಕಿ ಅವಳನ್ನು ಕೊಂದಿರುವೆ. ಎಲಾ, ಈಗ ಹೇಳುತ್ತಿರುವೆ—'ಮನೆಗೆ ಹೋದಳು' ಎಂದು.

ಚಾರುದತ್ತ—ಛಿ, ಅಸಂಬದ್ಧಪ್ರಲಾಪಿ—

ನುಡಿಯುವ ನಿನ್ನನು ವೋಡದ ಮಳೆಗಳು
ಮುಳುಗಿಸದೇಕಿವೆ ಅರ್ಥದೊಳೆ,
ಹಕ್ಕಿಯ ಪುಕ್ಕದ ತೆರದಿಂದೆ?
ಸುಳ್ಳಿದು, ನುಡಿಯುವ ನಿನ್ನೀ ವೋರೆಯೆ
ಪ್ರಭೆಗುಂದಿರುವುದು ಭರದಿಂದೆ
ಹಿಮಹತ ನಳಿನಿಯ ತೆರದಿಂದೆ. ೧೯

ನ್ಯಾಯಾಧೀಶ—(ಜನಾಂತಿಕ)

ಅದ್ರಿರಾಜತುಲನದಂತೆ,
ಅಬ್ಧಿಯನ್ನೆ ದಾಂಟುವಂತೆ,
ಗಾಳಿಯನ್ನೆ ಹಿಡಿಯುವಂತೆ,
ಚಾರುದತ್ತ ದೂಷಣೆ. ೨೦

(ಪ್ರಕಾಶ) ಇಂತಹ ಸುಂದರಾಂಗನಾದ ಚಾರುದತ್ತನು ಅಕಾರ್ಯವನ್ನೆಂತು ಮಾಡಿಯಾನು? (ಚಾರೂನ್ನತಂ.... ಇತ್ಯಾದಿ ಪದ್ಯವನ್ನು (೧೬) ಹೇಳುವನು)

ಶಕಾರ—ಏನು, ವ್ಯವಹಾರಪರೀಕ್ಷೆಯಲ್ಲಿ ಪಕ್ಷಪಾತವನ್ನು ತೋರುವಿರೊ!
ನ್ಯಾಯಾಧೀಶ—ತೊಲಗು, ಮೂರ್ಖ!

ವೇದದರ್ಥವನೊರೆವೆ ನೀಚನೆ—ಜಿಹ್ವೆಯಿನ್ನೂ ಬೀಳದೆ?
ಮಧ್ಯದಿನದಾ ರವಿಯನೀಕ್ಷಿಪೆ—ಕಣ್ಣು ತಟ್ಟನೆ ಪೋಗದೆ?
ಉರಿನ ಜೆಂಕಿಯೊಳಿಡುವೆ ಕೈಯನು—ಸುಡದೆಯಿನ್ನೂ ಇರ್ಪುದೆ?
ಚಾರುದತ್ತನೊಳಿಡುವೆ ಕುಂದನು—ನೆಲವೆ ನಿನ್ನನು ನುಂಗದೆ? ೨೧

ಆರ್ಯ ಚಾರುದತ್ತನು ಎಲ್ಲಿಯಾದರೂ ಅಕಾರ್ಯ ಮಾಡುವು ದುಂಟೆ!—

ಕಡಲಿನಲ್ಲಿ ನೀರನುಳಿಸಿ, ಕೊಳ್ಳುತೆಲ್ಲ ರತ್ನವ,
ಸ್ವಾರ್ಥವಿಲ್ಲದಾವನಿತ್ತನತುಲಧನವನಿಳೆಯಲಿ;
ಆ ಮಹಾತ್ಮ ಪುಣ್ಯನಿಧಿಯು ಗೈವನೆಂತು ದುರಿತವ
ಧನದ ಲೋಭದಿಂದೆ ಮಿಕ್ಕನಾರ್ಯರಂತೆ ಧರೆಯಲಿ? ೨೨

ಮುದುಕಿ—ಅಯ್ಯೋ, ಅಂದು ನ್ಯಾಸವಾಗಿಟ್ಟು ಬಂದ ಒಡವೆಗಳನ್ನು ಕಳ್ಳರು ರಾತ್ರೆ ಕದ್ದುಬಿಟ್ಟಾಗ ಅದಕ್ಕೆ ಪರಿಹಾರರೂಪವಾಗಿ ಚತುಸ್ಸಮುದ್ರಸಾರವಾದ ರತ್ನಗಳ ಹಾರವನ್ನೇ ಯಾವಾತನು ಕಳುಹಿಸಿ ಕೊಟ್ಟನೋ ಆತನೇ ಈ ನಶ್ವರವಾದ ದುಡ್ಡಿಗಾಗಿ ಅಕಾರ್ಯವನ್ನು ಮಾಡುವನೆ? ಅಯ್ಯೋ ಮಗಳೆ, ಬಾ, ಎಲ್ಲಿರುವೆ?

ನ್ಯಾಯಾಧೀಶ—ಆರ್ಯ ಚಾರುದತ್ತ, ಅವಳು ಕಾಲ್ನಡಗೆಯಿಂದಲೇ ಹೋದಳೋ ಇಲ್ಲವೆ ರಥದಲ್ಲಿ ಹೋದಳೋ?

ಚಾರುದತ್ತ—ನನ್ನ ಸಮಕ್ಷದಲ್ಲಿ ಅವಳು ಹೋಗಲಿಲ್ಲ. ಆದ್ದರಿಂದ ಕಾಲ್ನಡೆಯಿಂದ ಹೋದಳೋ ರಥದಲ್ಲೇ ಹೋದಳೋ ನಾನರಿಯೆ.

(ಕೋಪದಿಂದ ಪ್ರವೇಶಿಸಿ)

ವೀರಕ— ಎಡಗಾಲಿಂದವನೊವೆದವಮಾನದೆ
ವೈರವು ಮಸೆಯುತ್ಕೈಡೆಬಿಡದೆ;
ಶೋಕಿಸುತೆಂತೋ ರಾತ್ರಿಯ ಕಳೆದೆನು
ಬೆಳಗಾಗಿಹುದಹ ಕಡೆಗೊಮ್ಮೆ. ೨೩

ಆದ್ದರಿಂದ ಈಗಲೇ ನ್ಯಾಯಮಂಟಪಕ್ಕೆ ಹೋಗುವೆನು. (ಸಮೀಪಿಸಿ) ಪೂಜ್ಯರಿಗೆಲ್ಲಾ ನಮಸ್ಕಾರ.

ನ್ಯಾಯಾಧೀಶ—ಓ, ನಗರದ ರಕ್ಷಣಾಧಿಕಾರಿ ವೀರಕ! ವೀರಕ, ಏನು ಬಂದಿರುವೆ?

ವೀರಕ—ಸೆರೆಯನ್ನು ಕಿತ್ತುಕೊಂಡು ತಪ್ಪಿಸಿಕೊಂಡೋಡುತ್ತಿದ್ದ ಆರ್ಯಕನನ್ನು ಹುಡುಕಲು ಹೊರಟಿದ್ದೆ. ತೆರೆ ಮುಚ್ಚಿದ ರಥವೊಂದು ಹೋಗುತ್ತಿತ್ತು. ಅದನ್ನು ಪರೀಕ್ಷಿಸಲು—'ಅರೇ, ನೀನು ನೋಡಿದ್ದಾ

ಯಿತು; ನಾನೂ ಒಮ್ಮೆ ನೋಡಬೇಕು' ಎಂದಷ್ಟಕ್ಕೇ ಚಂದನಕನೆಂಬ ಜತೆಯ ಅಧಿಕಾರಿ ನನ್ನನ್ನು ಕಾಲಿಂದ ಒದ್ದಿರುವನು. ವಿಷಯವನ್ನು ತಮ್ಮಲ್ಲಿ ಇದ್ದಂತೆ ಅರಿಕೆ ಮಾಡಿದ್ದೇನೆ. ಮುಂದಿನದು ತಮಗೇ ಸೇರಿದ್ದು.

ನ್ಯಾಯಾಧೀಶ—ಅಯ್ಯಾ, ಆ ರಥ ಯಾರದ್ದೆಂದು ಗೊತ್ತಿದೆಯೆ?

ವೀರಕ—ಇದೋ, ಈ ಚಾರುದತ್ತನದೆ! ವಸಂತಸೇನೆ ರಥದಲ್ಲಿದ್ದಾಳೆ. ವಿಹಾರಾರ್ಥವಾಗಿ ಪುಷ್ಪಕರಂಡಕಜೀರ್ಣೋದ್ಯಾನಕ್ಕೆ ಹೋಗುತ್ತಿರುವಳು ಎಂದು ರಥದ ಸಾರಥಿ ಹೇಳಿದನು.

ಶಕಾರ—ಪೂಜ್ಯರೆಲ್ಲರೂ ಸರಿಯಾಗಿ ಕೇಳಿಕೊಂಡಿರೋ?

ನ್ಯಾಯಾಧೀಶ—

ಅಕಟಾ ನಿರ್ಮಲಚಂದ್ರಿಕೆಯೆಸೆಯುವ
ಚಂದ್ರನ ರಾಹುವೆ ನುಂಗಿತಲಾ;
ಥೊಪ್ಪನೆ ದಡವೇ ಕುಸಿಯಲ್ ಕೆಳಗಡೆ
ತಿಳಿನೀರದು ಕೆಸರಾಯಿತಲಾ. ೨೪

ವೀರಕ, ನಿನ್ನ ನ್ಯಾಯವನ್ನು ಆಮೇಲೆ ವಿಚಾರಿಸುತ್ತೇವೆ. ಇದೋ ನ್ಯಾಯಾಲಯದ ಬಾಗಿಲಲ್ಲೇ ಕುದುರೆ ನಿಂತಿದೆ. ಅದನ್ನು ಹತ್ತಿಕೊಂಡು ಪುಷ್ಪಕರಂಡಕೋದ್ಯಾನಕ್ಕೆ ಹೋಗಿ ನೋಡಿಕೊಂಡು ಬಾ—ಸ್ತ್ರೀಯೊಬ್ಬಳು ಸತ್ತು ಬಿದ್ದಿರುವಳೇ, ಎಂದು.

ವೀರಕ—ಅಪ್ಪಣೆ. (ಹೋಗುವನು) (ಬಂದು) ಅಲ್ಲಿ ಹೋಗಿ ಬಂದೆ. ಒಂದು ಸ್ತ್ರೀಯ ಮೃತಶರೀರ ಬಿದ್ದಿತ್ತು. ಅದನ್ನು ಮೃಗಗಳು ತಿನ್ನುತ್ತಿದ್ದದನ್ನು ಕಂಡೆ.

ಸೆಟ್ಟಿಕರಣಿಕರು—ಮೃತದೇಹವು ಹೆಂಗಸಿನದೇ ಎಂದು ಹೇಗೆ ತಿಳಿದೆ?

ವೀರಕ—ಇನ್ನೂ ತಿನ್ನದೆ ಉಳಿದಿದ್ದ ಕೂದಲು, ಕೈಕಾಲುಗಳಿಂದ ಗೊತ್ತಾಯಿತು.

ನ್ಯಾಯಾಧೀಶ—ಅಯ್ಯೋ, ವ್ಯವಹಾರದ ವೈಷಮ್ಯ ಎಷ್ಟು ಹೀನ!—

ಎಷ್ಟೆಷ್ಟು ತಳಹೊಕ್ಕು ಗೈದೊಡೆ ವಿಚಾರವನು
ಅಷ್ಟಷ್ಟು ಸಂಕಟವೆ ಮುಸುಕಿ ಕವಿಯುತಿದೆ;

ಅಕ್ಕಟಾ ಕೊಡುತಿವೆ ಸಾಕ್ಷಿಯೊಂದೇ ಕಡೆಗೆ
ಕೆಸರೊಳಾಕಳಿನಂತೆ ಬುದ್ಧಿಯುಡುಗುತಿದೆ. ೨೫

ಚಾರುದತ್ತ—(ಸ್ವಗತ)—

ದುಂಬಿವಿಂಡು ಮುಸುರುವಂತೆ
ಹೂವು ಮೊದಲು ಅರಳಲು ;
ನರನಿಗೊದಗೆ ಕೇಡುಗಾಲ
ದೋಷನಿಕರ ಕವಿವುದು. ೨೬

ನ್ಯಾಯಾಧೀಶ—ಆರ್ಯ ಚಾರುದತ್ತ, ನಿಜವನ್ನು ಹೇಳಿಬಿಡು.

ಪರಗುಣಮತ್ಸರಿ ದುಷ್ಟಂ
ಪರವಧೆಗಂ ಹೇಸದಿರ್ಪನೀ ರಾಗಾಂಧಂ
ಒರೆಯಲ್ ಪುಸಿಯಂ ದುಷ್ಕುಲ-
ದುರವಣೆಯಿಂ ಗ್ರಾಹ್ಯಮಾಯ್ತು ಶೋಧಿಸವೇಳ್ಕುಂ ೨೭

ಚಾರುದತ್ತ—

ಬಳ್ಳಿಯನೆಳೆಯದೆ ಹೂಗೊಯ್ಯುವೆ ನಾ-
ನರಳಿರೆ ಲತೆಯೊಳು ಕುಸುಮುಗಳು ;
ನಿಡುಗೂದಲನೇ ಕೈಯಿಂದೆಳೆಯುತೆ
ಅಳುತಿಹ ಹೆಣ್ಣನು ಕೊಲ್ಲುವೆನೆ ? ೨೮

ಶಕಾರ—ಓ, ನ್ಯಾಯಾಧೀಶರೆ, ನ್ಯಾಯವಿಚಾರಣೆಯಲ್ಲಿ ಹೀಗೆ ಪಕ್ಷಪಾತ ಮಾಡುವಿರೇನು? ಇನ್ನೂ ಈ ನೀಚ ಚಾರುದತ್ತನು ಆಸನದಲ್ಲಿಯೇ ಕುಳಿತಿರುವನಲ್ಲ!

ನ್ಯಾಯಾಧೀಶ—ಶೋಧನಕ, ಹಾಗೆಯೇ ಮಾಡು.

(ಶೋಧನಕನು ಚಾರುದತ್ತನನ್ನು ಆಸನದಿಂದಿಳಿಸುವನು)

ಚಾರುದತ್ತ—ಇನ್ನೂ ವಿಚಾರಿಸಿ ನೋಡಿ. ನ್ಯಾಯಾಧಿಕಾರಿಗಳೇ, ವಿಚಾರಿಸಿ ನೋಡಿ.

(ಆಸನದಿಂದ ಇಳಿದು ನೆಲದಮೇಲೆ ಕುಳಿತುಕೊಳ್ಳುವನು)

ಶಕಾರ—(ಸ್ವಗತ) (ಸಂತೋಷದಿಂದ ಕುಣಿಯುತ್ತ) ಹೋ, ನಾನು ಮಾಡಿದ ಪಾಪವನ್ನು ಇನ್ನೊಬ್ಬನ ತಲೆಗೆ ಕಟ್ಟಿಯಾಯಿತು! ಆದ್ದರಿಂದ

ಮೊದಲು ಚಾರುದತ್ತನೆಲ್ಲಿ ಕುಳಿತಿದ್ದನೋ ಅಲ್ಲಿಯೇ ನಾನು ಹೋಗಿ ಕುಳಿತುಕೊಳ್ಳುವೆನು. (ಹಾಗೆ ಮಾಡಿ) ಚಾರುದತ್ತ, ನೋಡು, ನೋಡು, ನನ್ನನ್ನು ನೋಡು. ಹೇಳು, ಹೇಳು—'ನಾನೇ ಕೊಂದೆ' ಎಂದು.

ಚಾರುದತ್ತ—ನ್ಯಾಯಾಧೀಶರೆ—(ಪರಗುಣಮತ್ಸರಿ....(ಪದ್ಯ ೨೭) ಎಂಬ ಪದ್ಯವನ್ನೇ ಮತ್ತೆ ಹೇಳುವನು) (ನಿಟ್ಟುಸಿರಿಡುತ್ತ ಸ್ವಗತ)—

ಏನು ಕೇಡು ಬಂದಿತೆನಗೆ ಗೆಳೆಯ ಮೈತ್ರೇಯನೆ!
ವಿಮಲವಿಪ್ರಕುಲಮೊಳೊಗೆದ ಎನ್ನ ಧರ್ಮಪತ್ನಿಯೆ!
ಅಯ್ಯೊ! ರೋಹಸೇನ, ನೀನು ಕಾಣೆಯೆನ್ನ ಕೇಡನು—
ಕೇಡು ಬೇರೆಯವರದೆಂದು ನಿತ್ಯ ಬರಿದೆ ನಲಿಯುವೆ!

ಅವಳ ಸುದ್ದಿಯನ್ನು ತಿಳಿದು ಬರುವುದಕ್ಕೂ, ಅವಳು (ಮಗುವಿನ) ಆಟದ ಕಿರುಬಂಡಿಗೆಂದು ಕೊಟ್ಟುಹೋಗಿದ್ದ ಒಡವೆಯನ್ನು ತಿರುಗಿ ಕೊಟ್ಟು ಬರುವುದಕ್ಕೂ ಮೈತ್ರೇಯನನ್ನು ವಸಂತಸೇನೆಯ ಬಳಿಗೆ ಕಳುಹಿಸಿದ್ದೆ. ಇಷ್ಟೇಕೆ ತಡಮಾಡುತ್ತಿರುವನು!

(ಒಡವೆಗಳನ್ನು ಹಿಡಿದ ವಿದೂಷಕನ ಪ್ರವೇಶ)

ವಿದೂಷಕ—ಆರ್ಯ ಚಾರುದತ್ತನು ಒಡವೆಗಳನ್ನು ಕೊಟ್ಟು ವಸಂತ ಸೇನೆಯ ಬಳಿಗೆ ಕಳುಹಿಸಿದ್ದಾನೆ. ಅವನು ಹೇಳಿ ಕಳಿಸಿರುವುದು ಹೀಗೆ—'ಮೈತ್ರೇಯ, ವತ್ಸ ರೋಹಸೇನನಿಗೆ ವಸಂತಸೇನೆ ತನ್ನ ಒಡವೆಗಳನ್ನೆಲ್ಲ ಹಾಕಿ ತಾಯಿಯ ಹತ್ತಿರ ಕಳಿಸಿದ್ದಳು. ಆಕೆಗೆ ಒಡವೆಗಳನ್ನು ಕೊಡಬೇಕೇ ಹೊರತು ಆಕೆಯಿಂದ ಸ್ವೀಕರಿಸ ಬಾರದು. ಆದ್ದರಿಂದ ಹೋಗಿ ಕೊಟ್ಟು ಬಾ' ಎಂದು. ಆದ್ದರಿಂದ ವಸಂತಸೇನೆಯನ್ನು ಹೋಗಿ ನೋಡುವೆನು. (ನಡೆಯುತ್ತ, ನೋಡಿ) (ಆಕಾಶಭಾಷಿತ) ಏನು, ಭಾವ ರೇಭಿಲನೇನು! ಏನಪ್ಪಾ, ಏಕೆ ಇಷ್ಟು ಉದ್ವಿಗ್ನನಾಗಿರುವೆ? (ಆಲಿಸಿ) ಏನೆಂದೆ? ಪ್ರಿಯಮಿತ್ರನಾದ ಚಾರುದತ್ತನನ್ನು ನ್ಯಾಯಮಂಟಪಕ್ಕೆ ಕರೆಸಿರುವರೆಂದೆಯಾ? ಹಾಗಾದರೆ ಕಾರ್ಯ ಸಣ್ಣದಾಗಿರಲಾರದು! (ಆಲೋಚಿಸಿ) ಆದ್ದರಿಂದ ವಸಂತಸೇನೆಯನ್ನು ಕಡೆಗೆ ಹೋಗಿ ಕಾಣುತ್ತೇನೆ. ಮೊದಲು

ನ್ಯಾಯಮಂಟಪಕ್ಕೇ ಹೋಗುವೆನು. (ನಡೆಯುತ್ತ ನೋಡಿ) ಇದೇ ನ್ಯಾಯಮಂಟಪ, ಪ್ರವೇಶಿಸುವೆನು. (ಪ್ರವೇಶಿಸಿ) ನ್ಯಾಯಾಧಿಕಾರಿಗಳಿಗೆ ಮಂಗಳವಾಗಲಿ. ನನ್ನ ಪ್ರಿಯಮಿತ್ರನೆಲ್ಲಿ?

ನ್ಯಾಯಾಧೀಶ—ಇದೋ ಇಲ್ಲಿರುವನು.

ವಿದೂಷಕ—ಮಿತ್ರ, ನಿನಗೆ ಶುಭವಾಗಲಿ.

ಚಾರುದತ್ತ—ಮುಂದೆ ಆದೀತು.

ವಿದೂಷಕ—ನಿನಗೆ ಕ್ಷೇಮವಷ್ಟೆ!

ಚಾರುದತ್ತ—ಅದೂ ಮುಂದೆ ಆಗುವುದು.

ವಿದೂಷಕ—ಪ್ರಿಯಮಿತ್ರ, ಇದೇಕೆ ಇಷ್ಟು ಉದ್ವಿಗ್ನನಾಗಿರುವೆ? ಇಲ್ಲಿಗೆ ನಿನ್ನನ್ನು ಕರೆಸಿರುವುದಾದರೂ ಏಕೆ?

ಚಾರುದತ್ತ—ಮಿತ್ರ,

ನಾನು ದುಷ್ಟನು ಪರದ ಲೋಕದ
ಲೆಕ್ಕವಿಲ್ಲದೆ ಪೆಣ್ಣನು;
ರತಿಸಮಾನಳ....ನಿನ್ನು ಮಿಕ್ಕುದ-
ನೊರೆವನೀತನೆ ಪುರುಷನು. ೩೦

ವಿದೂಷಕ—ಏನು, ಏನು?

ಚಾರುದತ್ತ—(ಕಿವಿಯಲ್ಲಿ) ಹೀಗೆ ಹೀಗೆ.

ವಿದೂಷಕ—ಹೀಗೆ ಹೇಳುವವನು ಯಾರು?

ಚಾರದತ್ತ—(ಸನ್ನೆಮಾಡಿ ಶಕಾರನನ್ನು ತೋರಿಸುವನು) ಇದೋ ಈ ಮಹಾಶಯನು ನನ್ನ ಪಾಲಿಗೆ ಯಮನಂತೆ ಹೀಗೆನ್ನುತ್ತಿರುವನು.

ವಿದೂಷಕ—(ಜನಾಂತಿಕ) ಅಲ್ಲ, ಮನೆಗೆ ಹೋದಳೆಂದು ನೀನು ಇದ್ದುದನ್ನೇಕೆ ಹೇಳುವುದಿಲ್ಲ?

ಚಾರುದತ್ತ—ಹೇಳಿದರೂ ಸ್ಥಿತಿಗತಿಯಿಂದ ಅದನ್ನೊಪ್ಪುವುದಿಲ್ಲ.

ವಿದೂಷಕ—ಓ ಮಹನೀಯರೆ, ಪುರವಿಸ್ತರಣ, ವಿಹಾರ, ಆರಾಮ, ಕೆರೆ, ಬಾವಿ ಮುಂತಾದುವುಗಳಿಂದ ಉಜ್ಜಯಿನೀ ಪಟ್ಟಣವನ್ನೇ ಸಿಂಗರಿಸಿರುವ ಈ ಪುಣ್ಯಾತ್ಮನು ಹಾಳು ದುಡ್ಡಿಗಾಗಿ ಇಂತಹ ಅಕಾರ್ಯವನ್ನೆಲ್ಲಿಯಾದರೂ ಮಾಡಿಯಾನೆ? (ಕೋಪದಿಂದ) ಎಲೋ, ಲೋ.

ಸೂಳೆಯಮಗನೆ, ರಾಜಶ್ಯಾಲ ಸಂಸ್ಥಾನಕ, ಹದ್ದುಮೀರಿದವನೆ, ಸಲ್ಲದ ಅಪವಾದವನ್ನು ಅನ್ಯರ ತಲೆಗೆ ಕಟ್ಟುವ ಭಂಡ, ಹೇರಳ ಹೊನ್ನನ್ನು ಹೇರಿಕೊಂಡಿರುವ ಮಂಗ, ನನ್ನ ಎದುರಿಗೆ ಹೇಳು, ಹೇಳು. ಈ ನನ್ನ ಪ್ರಿಯಮಿತ್ರನು ಮಲ್ಲಿಗೆ ಹೂವನ್ನು ಕೊಯ್ಯ ಬೇಕಾದರೆ ಎಲೆಯೆಲ್ಲಿ ಕಿತ್ತು ಹೋಗುವುದೋ ಎಂದು ಬಳ್ಳಿಯನ್ನೂ ಎಳೆಯದೆ ಕೊಯ್ಯುತ್ತಾನೆ. ಇಂತಹವನು ಇಹಪರಗಳೆರಡಕ್ಕೂ ವಿರುದ್ಧವಾದ ಇಂತಹ ಅಕಾರ್ಯವನ್ನು ಮಾಡುವನೆ? ನಿಲ್ಲು, ಸೂಳೆಯಮಗನೆ, ನಿಲ್ಲು. ನಿನ್ನ ಹೃದಯದಂತೆಯೇ ಡೊಂಕಾಗಿರುವ ಈ ದೊಣ್ಣೆಯಿಂದ ನಿನ್ನ ತಲೆಯನ್ನು ನೂರು ಚೂರು ಮಾಡುವೆನು.

ಶಕಾರ—(ಕೋಪದಿಂದ) ಕೇಳಿರಿ, ಮಹನೀಯರೆ, ಕೇಳಿರಿ. ನನ್ನ ವಿವಾದ, ವ್ಯವಹಾರ, ಎಲ್ಲಾ ಚಾರುದತ್ತನ ಸಂಗಡವೇ. ಇವನೇಕೆ ಕಾಗೆ ಕಾಲಿನ ತಲೆಯವನು ನನ್ನ ತಲೆಯನ್ನು ನೂರು ಚೂರು ಮಾಡ ಬೇಕು? ಬೇಡ, ಬಿಡು. ಎಲೋ ಸೂಳೆಯಮಗನೆ, ದುಷ್ಟವಟು!

(ವಿದೂಷಕನು ದೊಣ್ಣೆಯನ್ನೆತ್ತಿ ಮೊದಲಿನಂತೆಯೇ ಹೇಳುವನು. ಶಕಾರನು ಸಿಟ್ಟಿಗೆದ್ದು ಹೊಡೆಯುವನು. ವಿದೂಷಕನೂ ತಿರುಗಿಕೊಂಡು ಹೊಡೆಯುವನು. ಇಬ್ಬರೂ ಪರಸ್ಪರ ಹೊಡೆದಾಡುವರು. ಇಷ್ಟರಲ್ಲಿ ವಿದೂಷಕನ ಕಂಕುಳಿಂದ ಒಡವೆಗಳು ಬೀಳುವವು.)

ಶಕಾರ—(ಅವುಗಳನ್ನೆತ್ತಿಕೊಂಡು, ಸಡಗರದಿಂದ) ನೋಡಿರಿ, ಮಹನೀಯರೆ, ನೋಡಿರಿ. ಇವೇ ಆ ಹೆಂಗಸಿನ ಆಭರಣಗಳು. (ಚಾರುದತ್ತನನ್ನು ನೋಡಿ) ಈ ಹಾಳು ಹೊನ್ನಿಗೆಂದೇ ಇವನು ಅವಳನ್ನು ಕೊಂದು ಸಾಯಿಸಿರುವನು.

(ನ್ಯಾಯಾಲಯದ ಅಧಿಕಾರಿಗಳೆಲ್ಲರೂ ತಲೆ ತಗ್ಗಿಸುವರು)

ಚಾರುದತ್ತ—(ಜನಾಂತಿಕ)

ವಿಷಮದ ಸಮಯದೊಳೀಪರಿ ಕಂಡುದು
ಹೊನ್ನಿನ ಒಡವೆಯ ಗಂಟಿನಲು?
ಎಮ್ಮಯ ಭಾಗ್ಯವಿಪರ್ಯಯದಿಂದೆನೆ
ಬಿದ್ದುದು, ಎನ್ನನೆ ಬೀಳಿಸಲು. ೩೧

ವಿದೂಷಕ—ಅಯ್ಯಾ, ಇದ್ದುದನ್ನೇಕೆ ಇದ್ದಂತೆ ನೀನು ಹೇಳುವುದಿಲ್ಲ?

ನ್ಯಾಯಾಲಯವಿದು ಕುರುಡೆನೆ ತತ್ತ್ವವ
ನೆಂದೂ ಕಾಣದು ಇದ್ದವೊಲು;
ನುಡಿದೊಡೆ ಸುಮ್ಮನೆ ದೈನ್ಯವೆಯುಪ್ಪುದು
ಅಂತೆಯೆ ಮರಣವು ಅಶ್ಲಾಘ್ಯ. ೩೨

ನ್ಯಾಯಾಧೀಶ—ಕಷ್ಟ, ಅಯ್ಯೋ ಕಷ್ಟ!—

ಅಂಗಾರಕನಿಗೆ ಇದಿರಾಗಿರುತಿಹ
ಕ್ಷೀಣ ಬೃಹಸ್ಪತಿ ಪಾರ್ಶ್ವದಲಿ;
ಗ್ರಹವಿನ್ನೊಂದಿದು ಎದ್ದಿತೊ ಎನ್ನಲು
ಎದ್ದಿದೆ ಧೂಮದ ಕೇತುವೊಲು. ೩೩

ಸೆಟ್ಟಿಕರಣಿಕರು—(ನೋಡಿ, ವಸಂತಸೇನೆಯ ತಾಯನ್ನು ಕುರಿತು) ನೀನು ಸೂಕ್ಷ್ಮವಾಗಿ ಗಮನಿಸಿ ನೋಡಿ ಹೇಳು—ಇದು ಅದೇ ಆಭರಣ ಹೌದೋ ಅಲ್ಲವೋ, ಎಂದು.

ಮುದುಕಿ—(ನೋಡಿ) ಅದರಂತೆಯೇ ಇದೆ. ಅದೇ ಅಲ್ಲ.

ಶಕಾರ—ಎಲೇ ಮುದಿ ಸೂಳೆ, ಕಣ್ಣಿಂದ ಹೇಳಿದ್ದನ್ನು ಬಾಯಿಂದ ಮುಚ್ಚುವೆಯಾ?

ಮುದುಕಿ—ನೀಚ, ಹಾಳಾಗು.

ಸೆಟ್ಟಿಕರಣಿಕರು—ಸರಿಯಾಗಿ ಗಮನಿಸಿ ನೋಡಿ ಹೇಳು—ಅದೇ ಹೌದೋ ಅಲ್ಲವೋ ಎಂದು.

ಮುದುಕಿ—ಇದು ಅಕ್ಕಸಾಲೆಯ ಕೌಶಲದಿಂದ ಕಣ್ಣನ್ನು ಸೆಳೆಯುತ್ತಿದೆ. ಅದೇ ಇದಲ್ಲ.

ನ್ಯಾಯಾಧೀಶ—ಅಮ್ಮಾ, ಈ ಒಡವೆಗಳನ್ನು ಗುರುತಿಸಬಲ್ಲೆಯಾ?

ಮುದುಕಿ—ಹೇಳಿಪೆನಲ್ಲಾ, ಇಲ್ಲ, ಇಲ್ಲ, ಗುರುತಿಸಲಿಲ್ಲ. ಒಂದು ವೇಳೆ ಒಬ್ಬನೇ ಅಕ್ಕಸಾಲೆ ಮಾಡಿದ್ದರೂ ಇರಬಹುದು.

ನ್ಯಾಯಾಧೀಶ—ಸೆಟ್ಟರೆ—

ಎರಡು ಒಡವೆಯೊಂದೆ ತೆರದಿನಿರ್ಪವಲ್ತೆ ಸಹಜದೆ
ರೂಪದಲ್ಲಿ ಕಾಂತಿಯುಲ್ಲಿ ಶಿಲ್ಪಿಯೊಬ್ಬನೆಂದೆನೆ;

ಒಂದೆ ಅಚ್ಚಿನಂತೆ ಶಿಲ್ಪಿವರ್ಗ ಗೈವುದೊಡವೆಯ,
ಸಿದ್ಧಹಸ್ತನಿರಲು ಶಿಲ್ಪಿ ಸಾಮ್ಯವೊಂದೆ ಕಾಂಬುದು. ೩೪

ಸೆಟ್ಟಿಕರಣಿಕರು—ಹಾಗಾದರೆ ಇವು ಆರ್ಯ ಚಾರುದತ್ತನವೇನು?

ಚಾರುದತ್ತ—ಅಲ್ಲ, ಅಲ್ಲ.

ಸೆಟ್ಟಿಕರಣಿಕರು—ಹಾಗಾದರೆ ಯಾರವು?

ಚಾರುದತ್ತ—ಈಕೆಯ ಮಗಳವು.

ಸೆಟ್ಟಿಕರಣಿಕರು—ಇವು ಆಕೆಯನ್ನು ಅಗಲಿದ್ದು ಹೇಗೆ?

ಚಾರುದತ್ತ—ಹೀಗೆಯೇ ಅಗಲಿವೆ . . . ಹೀಗೆ....

ಸೆಟ್ಟಿಕರಣಿಕರು—ಆರ್ಯ ಚಾರುದತ್ತ, ನಿಜವನ್ನೀಗ ಹೇಳಬೇಕು. ನೋಡು—

ಸತ್ಯದಿಂದೆ ಬಹುದು ಸುಖವು ಸತ್ಯ ನುಡಿಯುವಾತಗೆ
ಪಾಪವಿಲ್ಲ ಎಂದಿಗೂ;
'ಸ' 'ತ್ಯ'ವೆರಡು ಅಕ್ಷರಂಗಳಂತಿರಲ್ಕೆ ಸತ್ಯವ
ಮುಚ್ಚಬೇಡ ಸುಳ್ಳಿನಿಂ. ೩೫

ಚಾರುದತ್ತ—ಒಡವೆಯ ವಿಷಯ ನನಗೆ ಹೆಚ್ಚೇನೂ ಗೊತ್ತಿಲ್ಲ. ನಮ್ಮ ಮನೆಯಿಂದ ತಂದಿದ್ದಾರೆಂದಿಷ್ಟು ಮಾತ್ರ ಗೊತ್ತಿದೆ.

ಶಕಾರ—ಮೊದಲು ಉದ್ಯಾನಕ್ಕೆ ಕರೆದೊಯ್ದು ಕೊಂದುಹಾಕಿರುವೆ. ಈಗ ಮೋಸದಿಂದ ಬಾಯಿಬಡಿಯುತ್ತಾ ಮುಚ್ಚುತ್ತಿರುವೆ.

ನ್ಯಾಯಾಧೀಶ—ಆರ್ಯ ಚಾರುದತ್ತ, ಸತ್ಯವನ್ನು ಹೇಳು—

ಇನ್ನು ನಿನ್ನ ಕೋಮಲಾಂಗ
ದಲ್ಲಿ ಗಟ್ಟಿ ಛಡಿಗಳು;
ಬೀಳಲಿಹವು ನೋಡು ನಮ್ಮ
ಮನದ ಆಸೆಯೊಡನೆಯೆ. ೩೬

ಚಾರುದತ್ತ— ಪಾಪರಹಿತಕುಲದೆ ಜಾತ-
ನೆನ್ನೊಳಿಲ್ಲ ಪಾಪವು;
ಪಾಪಶಂಕೆ ಬಂದುದಾಗೆ
ಬದುಕಲೇಕಪಾಪನು? ೩೭

(ಸ್ವಗತ) ವಸಂತಸೇನೆಯನ್ನಗಲಿದ ನನಗೆ ಈ ಬಾಳಿಂದೇನಾಗ ಬೇಕು ?

(ಪ್ರಕಾಶ) ಹೆಚ್ಚೇನು—

ನಾನು ದುಷ್ಟನು ಪರದ ಲೋಕದ
ಲೆಕ್ಕವಿಲ್ಲದೆ ಪೆಣ್ಣನು ;
ರತಿಸಮಾನ . . . ಳನಿನ್ನು ಮಿಕ್ಕುದ-
ನೊರೆವನೀತನೆ ಪುರುಷನು. ೩೮

ಶಕಾರ—'. . . ಕೊಂದುಹಾಕಿರುವೆನು.' ಎಲೋ ನೀನೂ ಹೇಳು—'ನಾನು ಕೊಂದುಹಾಕಿರುವೆನು' ಎಂದು.

ಚಾರುದತ್ತ—ನೀನೇ ಹೇಳಿಯಾಗಿದೆ.

ಶಕಾರ—ಕೇಳಿರಿ, ಕೇಳಿರಿ ಅಧಿಕಾರಿಗಳೆ! ಈತನೇ ಕೊಂದವನು. ಇವನಿಂದಲೇ ನಿಮ್ಮ ಸಂಶಯವೂ ಪರಿಹಾರವಾಗಿದೆ. ಆದ್ದರಿಂದ ಈ ದರಿದ್ರ ಚಾರುದತ್ತನಿಗೆ ಮರಣದಂಡನೆಯನ್ನೇ ವಿಧಿಸಿರಿ.

ನ್ಯಾಯಾಧೀಶ—ಶೋಧನಕ, ರಾಜಶ್ಯಾಲನೆಂದಂತೆಯೇ ಸರಿ. ರಾಜಪುರುಷರೆ, ಚಾರುದತ್ತನನ್ನು ಹಿಡಿದುಕೊಳ್ಳಿರಿ.

(ರಾಜಪುರುಷರು ಹಿಡಿದುಕೊಳ್ಳುವರು)

ಮುದುಕಿ—ಪೂಜ್ಯರು ದಯೆದೋರಬೇಕು. ದಯೆದೋರಬೇಕು. ('ಅಂದು ನ್ಯಾಸವಾಗಿಟ್ಟು ಬಂದ ಒಡವೆಗಳನ್ನು . . .' (ಪದ್ಯ ೨೨ ರ ಮುಂದಿನ ಗದ್ಯ) ಇತ್ಯಾದಿ ವಾಕ್ಯವನ್ನು ಮತ್ತೆ ಹೇಳುವಳು) ಕೊಲ್ಲಲ್ಪಟ್ಟಿದ್ದರೆ, ನನ್ನ ಮಗಳು ತಾನೇ ಕೊಲ್ಲಲ್ಪಟ್ಟವಳು ! ಆಗಿಕೊಳ್ಳಲಿ. ಇವನು ದೀರ್ಘಾಯುವಾಗಿರಲಿ. ಮತ್ತೇನೆಂದರೆ, ಯಾವಾಗಲೂ ವ್ಯವಹಾರ ವಾದಿ ಪ್ರತಿವಾದಿಗಳಿಗೆ ಸಂಬಂಧಿಸಿದ್ದು.

ಶಕಾರ—ಹುಟ್ಟುಸೂಳೆ, ತೊಲಗಾಚೆ. ನಿನಗಿದರಿಂದೇನು ?

ನ್ಯಾಯಾಧೀಶ—ಆರ್ಯೆ, ಹೋಗಮ್ಮಾ. ರಾಜ ಪುರುಷರೆ, ಈಕೆಯನ್ನು ಹೊರಗೆ ಕಳಿಸಿರಿ.

ಮುದುಕಿ—ಅಯ್ಯೋ ಮಗನೇ ! (ಅಳುತ್ತ ಹೊಗುವಳು)

ಶಕಾರ—(ಸ್ವಗತ) ನನಗೆ ಯೋಗ್ಯವಾದ ರೀತಿಯಲ್ಲಿ ಇವನಿಗೆ ಮಾಡಿದ್ದಾ

ಯಿತು. ಇನ್ನು ಹೋಗುವೆನು. (ಹೋಗುವನು)

ನ್ಯಾಯಾಧೀಶ—ಆರ್ಯ ಚಾರುದತ್ತ, ನಿರ್ಣಯಕ್ಕೆ ನಾವು ಗೊತ್ತುಗಾರರು; ಉಳಿದುದಕ್ಕೆ ರಾಜ ಪಾಲಕನೇ. ಆದರೂ ಶೋಧನಕ, ರಾಜಪಾಲಕನಿಗೆ ಹೋಗಿ ಹೀಗೆಂದು ತಿಳಿಸು—

ವಿಪ್ರನು ಪಾತಕಿಯೀತನವಧ್ಯನು
ಮನುವಚನವ ಮೇಣ್ ನೋಡುವೊಡೆ;
ಸಿರಿಯನು ಮುಟ್ಟದೆ ದೇಶದಿನಿವನಂ
ಹೊರಗೋಡಿಸುವುದು ಯೋಗ್ಯವಿದೆ. ೩೯

ಶೋಧನಕ—ಅಪ್ಪಣೆ. (ಹೋಗಿ, ತಿರುಗಿ ಬಂದು, ಕಣ್ಣೀರಿಡುತ್ತ) ಪೂಜ್ಯರೇ, ಅಲ್ಲಿ ಹೋಗಿದ್ದೆ. ಪಾಲಕರಾಜನು ಹೇಳುತ್ತಾನೆ—'ಯಾವ ಹಾಳು ಒಡವೆಗಾಗಿ ವಸಂತಸೇನೆಯನ್ನಿವನು ಕೊಂದನೋ ಆ ಒಡವೆಗಳನ್ನೇ ಇವನ ಕೊರಳಿಗೆ ಕಟ್ಟಿ, ಡಂಗುರ ಸಾರಿಸಿ, ದಕ್ಷಿಣ ದಿಕ್ಕಿನ ಶ್ಮಶಾನಕ್ಕೆ ಒಯ್ದು ಇವನನ್ನು ಶೂಲಕ್ಕೆ ಹಾಕಿಬಿಡಿ. ಹೀಗೆಯೇ ಇನ್ನು ಮುಂದೆಯೂ ಯಾರೇ ಆಗಲಿ ಅಕಾರ್ಯ ಮಾಡಿದ್ದಾದರೆ ಇಂತಹ ಅವಮಾನಕರ ದಂಡನೆಗೆ ಗುರಿಯಾಗುತ್ತಾರೆ' ಎಂದು.

ಚಾರುದತ್ತ—ಆಹಾ, ಪಾಲಕರಾಜನು ಎಂತಹ ದುಡುಕಿನವನು! ಅಥವಾ—

ಈ ಪರಿ ನ್ಯಾಯಾನಲನಲಿ ನೂಕುವ
ಸಲಹೆಯ ಕೊಡಲಧಿಕಾರಿಗಳು;
ದೊರೆಗಳು ದುರ್ದೆಸೆಗೈದುವರೆಂಬುದು
ಸಹಜವೆಯೆಂಬೆನು ಭಾವಿಸಲು. ೪೦

ಮತ್ತು

ಈ ಪರಿ ಬಿಳುಪಿನ ಕಾಗೆಯ ನಂಬುವ
ರಾಜನ ಶಾಸನದೂಷಕರಿಂ;
ಸಾವಿರಗಟ್ಟಲೆ ಪಾಪವಿದೂರರು
ಸತ್ತರು ಮುಂದೂ ಸಾಯುವರು. ೪೧

ಮಿತ್ರ, ಮೈತ್ರೇಯ, ಹೋಗು. ನನ್ನ ಪರವಾಗಿ ಪತ್ನಿಗೆ ನನ್ನ ಕಡೆಯ ನಮಸ್ಕಾರವನ್ನು ತಿಳಿಸು. ನನ್ನ ಮಗ ರೋಹಸೇನನನ್ನು

ಕಾಪಾಡು.

ವಿದೂಷಕ—ಬೇರುಕಡಿದ ಮೇಲೆ ಮರವನ್ನು ಕಾಪಾಡುವುದೆಲ್ಲಿ ?

ಚಾರುದತ್ತ—ಹಾಗಲ್ಲ—

ಲೋಕಾಂತರವನ್ನೈದಿದ ಜನರಿಗೆ
ಮಗನೇ ದೇಹದ ಪ್ರತಿರೂಪ ;
ಎನ್ನೊಳು ನಿನಗಿರ್ದನುರಾಗವನೇ
ಹರಿಯಿಸು ಮುಂದಕೆ ಕಂದನೊಳು. ೪೨

ವಿದೂಷಕ—ಅಯ್ಯಾ ಮಿತ್ರ, ಇಷ್ಟು ದಿನ ನಿನ್ನ ನೆಚ್ಚಿನ ಗೆಳೆಯನಾಗಿದ್ದು ಇನ್ನು ನೀನಿಲ್ಲದ ಮೇಲೆ ಜೀವಹಿಡಿದಿರುವೆನೆ?

ಚಾರುದತ್ತ—ರೋಹಸೇನನನ್ನು ನೋಡಪ್ಪಾ!

ವಿದೂಷಕ— ನಿಜವೇ. ಆಗಲಿ.

ನ್ಯಾಯಾಧೀಶ—ಶೋಧನಕ, ಈ ವಟುವನ್ನು ಇಲ್ಲಿಂದ ಹೊರಗೆ ಕಳುಹಿಸು.

(ಶೋಧನಕನು ಹಾಗೆಯೇ ಮಾಡುವನು)

ನ್ಯಾಯಾಧೀಶ—ಓ, ಯಾರಲ್ಲಿ? ಚಂಡಾಲರಿಗೆ ಅಪ್ಪಣೆಯನ್ನು ತಿಳಿಸಿರಿ .

(ಚಾರುದತ್ತನನ್ನು ಬಿಟ್ಟು ರಾಜಪುರುಷರೆಲ್ಲರು ಹೋಗುವರು)

ಶೋಧನಕ—ಆರ್ಯನು ಇತ್ತ ಬರಬೇಕು.

ಚಾರುದತ್ತ—(ದುಃಖದಿಂದ—'ಏನು ಕೇಡು ಬಂದಿತೆನಗೆ....(೨೯ ನೆಯ ಪದ್ಯ) ಎಂಬ ಪದ್ಯವನ್ನು ಮತ್ತೆ ಹೇಳುವನು. ಆಕಾಶವನ್ನು ನೋಡುತ್ತ ಪಾಲಕನನ್ನುದ್ದೇಶಿಸಿ)

ವಿಷವು, ಜಲವು, ತುಲೆಯು, ವಹ್ನಿಯೆಂಬ ದಿವ್ಯಗಳಲಿ ನಾ
ತಪ್ಪಿತಸ್ಥನಾಗೆ ದೇಹಕಿಡಿಸು ನೀನು ಗರಗಸ;
ವೈರಿವಚನದಂತೆ ಕೊಲುವೆ ವಿಪ್ರನೆನ್ನನಿಂದೆನೆ
ಬೀಳ್ವೆ ನರಕಮಧ್ಯದಲ್ಲಿ ಪುತ್ರಪೌತ್ರರೊಡನೆಯೆ. ೪೩

ಇದೋ ಬಂದೆ !

(ನಿಷ್ಕ್ರಮ-ಎಲ್ಲರೂ)

ಇಲ್ಲಿಗೆ 'ವ್ಯವಹಾರ' ಎಂಬ ಒಂಭತ್ತನೆಯ ಅಂಕ ಮುಗಿದುದು.

---

# ಹತ್ತನೆಯ ಅಂಕ

---

(ಪ್ರವೇಶ—ಚಂಡಾಲರಿಬ್ಬರು ಹಿಡಿದುಕೊಂಡು ಹೋಗುತ್ತಿರುವ ಚಾರುದತ್ತ)

ಚಂಡಾಲರು—

ಏನೆಂದು ಕೇಳದಿರಿ ಕಾರಣವನೆಮ್ಮೊಡನೆ
ವಧೆಬಂಧನಯನಂಗಳಲಿ ನಿಪುಣರಾವು ;
ಬೇಗಬೇಗದೆ ತಲೆಯ ಕಡಿಯುವಂತೆಯೆ ಶೂಲ-
ಕೇರಿಸುವ ಕಾರ್ಯದಲಿ ಬಹುಕುಶಲರಾವು. ೧

ಸರಿಯಿರಿ, ಆರ್ಯರೆ, ಸರಿಯಿರಿ! ಇವನೇ ಆರ್ಯ ಚಾರುದತ್ತ—

ಚೆಂಗಣಿಗಿಲೆ ಪೂಮಾಲೆಯ ಧರಿಸಿಹ,
ವಧೆಗೆಂದಾವೇ ಪಿಡಿದಿರಲು ;
ಎಣ್ಣೆಯು ತೀರಿದ ದೀಪದ ತೆರದಲಿ
ಮೆಲ್ಲನೆ ಮೆಲ್ಲನೆ ಕ್ಷಯಿಸುವನು. ೨

ಚಾರುದತ್ತ—(ವಿಷಾದದಿಂದ)

ಕಣ್ಣೀರಿನಿಂ ನೆನೆದ, ದೂಳಿಡಿದು ಬಿರುಸಾದ
ಸುಡುಗಾಡ ಹೂವಡಸಿದೆನ್ನೊಡಲನಿಂದು ;
ಕಟುವಾಗಿ ಕೂಗಿಡುತಲಾಶಿಪವು ಕಾಗೆಗಳು
ರಕ್ತಗಂಧವಿಲಿಪ್ತ ಬಲಿಯಂತೆ ತಿನಲು. ೩

ಚಂಡಾಲರು—ಸರಿಯಿರಿ, ಆರ್ಯರೆ, ಸರಿಯಿರಿ—

ಕಾಲಪರಶುಧಾರೆಯಿಂದ ಕಡಿದು ಬೀಳ್ವ ಸುಜನನ
ನೋಡಲೇಕೆ ಸುಮ್ಮನೆ ;
ಸುಜನಪಕ್ಷಿಗಳಿಗೆ ವಾಸಭೂಮಿಯೆನಿಪನೀತನೆ
ಸುಜನಪುರುಷವೃಕ್ಷನು. ೪

ಬಾಪ್ಪಾ, ಚಾರುದತ್ತ, ಬಾ.

ಚಾರುದತ್ತ—ಮನುಷ್ಯನ ಭಾಗ್ಯದ ಗತಿ ಅಚಿಂತ್ಯವೇ ಸರಿ. ನಾನು

ಎಂತಹ ದೆಸೆಗೆ ಬಂದು ಬಿದ್ದೆ !

ಮೈಯೊಳೆಲ್ಲ ಕೆಂಪು ಗಂಧ-
ಹಸ್ತಮುದ್ರೆಯೊತ್ತಿರೆ;
ಕುಂಕುಮಾದಿ ಚೂರ್ಣವಿಳಿಯೆ
ಪುರುಷನಾದೆ ಪಶುವಿದೋ. ೫

(ಮುಂದೆ ನೋಡಿ) ಅಹಾ, ಜನರು ಎಷ್ಟು ತಾರತಮ್ಯಜ್ಞಾನ ತೋರಿಸುತ್ತಿದ್ದಾರೆ !

ನನಗೆ ಬಂದ ಕೇಡ ಕಂಡು ಕಣ್ಣ ನೀರ ಮಿಡಿಯುತಿಹರು
ಮರ್ತ್ಯಭಾವವನ್ನು ಸುಡಲಿಯೆಂದು ನುಡಿವರು;
ಎನ್ನನಿಂದು ರಕ್ಷಿಸಲ್ಕೆ ಶಕ್ತಿಯಿಲ್ಲದೂರ ಜನರು
ಸ್ವರ್ಗ ನಿನಗೆ ದೊರೆಯಲೆಂದು ಹರಸುತಿರುವರು. ೬

ಚಂಡಾಲರು—ಸರಿಯಿರಿ, ಆರ್ಯರೆ, ಸರಿಯಿರಿ. ಕಾಣಿರಾ—

ಒಯ್ಯುವಿಂದ್ರಕೇತುವನ್ನು,
ಗೋವು ಹಡೆವುದನ್ನು,
ತಾರೆ ಕೆಡೆದು ಬೀಳ್ವುದನ್ನು,
ಸುಜನ ಮಡಿವುದನ್ನು,
ನಾಲ್ಕನಿವನು ಧರೆಯೊಳಿಂದು
ನಿಂದು ನೋಡಲಾಗದು. ೭

ಒಬ್ಬ ಚಂಡಾಲ—ಏ, ಆಹಿಂತ, ನೋಡು—

ನಗರ ಮುಖ್ಯನಿಂದು ಯಮನ
ಆಜ್ಞೆಯಿಂದೆ ವಧ್ಯನಾಗೆ,
ಅಂತರಿಕ್ಷವಳುತಲಿಹುದೊ ? ಮೋಡವಿಲ್ಲದಿದ್ದರೂ–
ಸಿಡಿಲು ತಾನೆ ಸಿಡಿವುದೋ ? ೮

ಇನ್ನೊಬ್ಬ ಚಂಡಾಲ—ಏ, ಗೋಹ—

ಅಂತರಿಕ್ಷವಳುವುದಿಲ್ಲ, ಮೋಡವಿಲ್ಲದಿದ್ದರೂ
ಸಿಡಿಲು ತಾನೆ ಸಿಡಿಯದು;

ಹೆಣ್ಣನೆರವಿಯೆಂಬ ಮೋಡದಿಂದ ಕಣ್ಣನೀರಿನ
ಧಾರೆ ಸುರಿಯುತಿರುವುದು. ೯

(ಮತ್ತು)

ಒಯ್ಯುತಿರಲು ವಧ್ಯನನ್ನು
ಜನಗಳೆಲ್ಲರಳುತಿರೆ;
ಕಣ್ಣ ನೀರು ಇಳಿದ ಬೀದಿ-
ಯಲ್ಲಿ ಧೂಳು ಏಳದು. ೧೦

ಚಾರುದತ್ತ—(ನೋಡಿ ಶೋಕದಿಂದ)

ಇಲ್ಲಿ ಹೆಂಗಸರೇರಿ ಮಾಳಿಗೆ। ಗೆಲ್ಲರೂ ಕಿಟಕಿಗಳಿನಾಚೆಗೆ
ಫುಲ್ಲಮುಖಗಳ ನೀಡಿ ನನ್ನನೆ ಕಂಡು ಮಿಡುಕತಲಿ
ಮೆಲ್ಲನಯ್ಯೋ ಚಾರುದತ್ತನೆ। ಯೆಲ್ಲಿಗೈದುವೆಯೆಂದು ನುಡಿಯುತೆ
ಚೆಲ್ಲಗಣ್ಣುಗಳಿಂದೆ ಮಿಡಿವರು ನೀರ ಕಾಲ್ವೆಗಳ ೧೧

ಚಂಡಾಲರು—ಚಾರುದತ್ತ, ಬಾ, ಬಾ. ಇದೇ ಡಂಗುರ ಸಾರಬೇಕಾದ ಸ್ಥಳ. ನಗಾರಿಯನ್ನು ಬಡಿಯಿರಿ! ಘೋಷಣೆಯನ್ನು ಸಾರಿರಿ!

ಇಬ್ಬರೂ—ಆರ್ಯರೆ, ಕೇಳಿ, ಕೇಳಿ. ಇವನೇ ವರ್ತಕ ವಿನಯದತ್ತನ ಮೊಮ್ಮಗ; ಸಾಗರದತ್ತನ ಮಗ, ಆರ್ಯ ಚಾರುದತ್ತ. ಇವನು ಅಕೃತ್ಯಮಾಡಿದ್ದಾನೆ: ಗಣಿಕೆ ವಸಂತಸೇನೆಯನ್ನು ಒಡವೆಯಾಸೆಯಿಂದ ಶೂನ್ಯವಾಗಿದ್ದ ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಒಯ್ದು ಕೈಯಿಂದ ಕತ್ತನ್ನು ಕಿವುಚಿ ಕೊಂದು ಹಾಕಿದ್ದಾನೆ. ಒಡವೆಯ ಸಮೇತ ಅವನನ್ನು ಹಿಡಿಯಲಾಯಿತು. ತಾನೂ ಅಪರಾಧವನ್ನೊಪ್ಪಿದ್ದಾನೆ. ಆದ್ದರಿಂದ ಪಾಲಕರಾಜನು ಇವನಿಗೆ ಮರಣದಂಡನೆ ವಿಧಿಸಿರುವನು. ಯಾರು ಇಂತಹ ಇಹಪರ ವಿರುದ್ಧವಾದ ಅಕಾರ್ಯ ಮಾಡಿದರೂ ಪಾಲಕರಾಜನು ಹೀಗೆಯೇ ಶಿಕ್ಷೆ ವಿಧಿಸುವನು.

ಚಾರುದತ್ತ—(ನಿರ್ವಿಣ್ಣನಾಗಿ, ಸ್ವಗತ)

ಯಾಗಶತಪೂತವೆನೆ ಬೆಳಗಿತೆನ್ನಯ ಕುಲವು
ವಿಪ್ರಸಭೆಗಳಲಂದು ವೇದ ಮೊಳಗೆ;

ಇಂದೆನಗೆ ಮರಣದೆಸೆ ಬಂದಿರಲು ಸಾರುವರು
ಕುಂದಿಟ್ಟು ಪಾಪಿಗಳು ನೀಚರದನೆ. ೧೨

(ಉದ್ವೇಗದಿಂದ ಕಿವಿಗಳನ್ನು ಮುಚ್ಚಿಕೊಂಡು) ಹಾ ಪ್ರಿಯೆ, ವಸಂತಸೇನೆ—

ಶಶಿಯ ವಿಮಲ ಕಿರಣ ಶುಭ್ರ ದಂತಕಾಂತಿಯೆಸೆವಳೇ,
ಕೆಂಪು ಹವಳದಂತೆ ರುಚಿರವಾದ ತುಟಿಯ ನಲ್ಲೆಯೇ,
ನಿನ್ನ ವದನದಮೃತಪಾನವನ್ನೆ ಗೈಯುತಿರ್ದ ನಾ-
ನಿನ್ನು ಕುಡಿವೆನೆಂತಕೀರ್ತಿವಿಷವನವಶನಾಗಿರಲ್. ೧೩

ಇಬ್ಬರೂ—ಸರಿಯಿರಿ, ಆರ್ಯರೆ, ಸರಿಯಿರಿ—

ಇವನು ಸುಗುಣರತ್ನನಿಧಿಯು
ಸುಜನದುಃಖಸೇತುವು ;
ಕನಕವಲ್ಲದೊಡವೆಯೂರ್ಗೆ
ಪೋಪನೂರಿನಾಚೆಗೆ. ೧೪
ಲೋಕದೊಳಿಲ್ಲವು ನಡೆವುದು ನೋಡಿರಿ
ಲೋಕವು ಸುಖಿಗಳ ಚಿಂತಿಪುದು ;
ಆಪತ್ತೊದಗಿದ ನರನ ಸಹಾಯವ
ಗೈಯುವ ಜನಗಳು ದುರ್ಲಭವು. ೧೫

ಚಾರುದತ್ತ—(ಸುತ್ತಲೂ ನೋಡಿ)

ಅಕಟ, ಸೆರಗಿನಿಂದ ಮೊಗವ ಮುಚ್ಚಿಕೊಂಡು ದೂರ ದೂರ
ಸರಿಯುತಿಹರು ದಾರಿಯಲ್ಲಿ ಮಿತ್ರರೆಲ್ಲರೂ ;
ಕ್ಷೇಮಕಾಲದಲ್ಲಿ ಪರರು ಬಂಧುಭಾವದಿಂದೆ ಬಹರು
ಕೇಡು ಮುಸುಕಲೊಬ್ಬರಿರರು ಮಿತ್ರರೆಂಬರು. ೧೬

ಚಂಡಾಲರು—ಜನರನ್ನು ಸರಿಸಿಯಾಯಿತು. ರಾಜಮಾರ್ಗವೀಗ ನಿರ್ಜನವಾಗಿದೆ. ಈ ವಧ್ಯ ಚಿಹ್ನಧಾರಿಯನ್ನು ಕರೆತನ್ನಿರಿ!

(ಚಾರುದತ್ತನು ನಿಟ್ಟುಸಿರು ಬಿಡುತ್ತ 'ಅಕಟ, ಕೇಡಿದೇನು ಬಂದಿತೆಗೆ. . . (ಪದ್ಯ ix. ೨೯) ಎಂಬ ಪದ್ಯವನ್ನು ಮತ್ತೆ ಹೇಳುವನು.)

(ನೇಪಥ್ಯದಲ್ಲಿ)

'ಅಯ್ಯೋ ತಂದೆ!' 'ಅಯ್ಯೋ ಪ್ರಿಯಮಿತ್ರ!'

ಚಾರುದತ್ತ—(ಆಲಿಸಿ, ದೈನ್ಯದಿಂದ) ಅಯ್ಯಾ, ಸ್ವಜಾತಿನಾಯಕನೆ, ನಿನ್ನಿಂದ ಒಂದು ಭಿಕ್ಷೆಯನ್ನು ಬೇಡುತ್ತಿರುವೆನು.

ಚಂಡಾಲರು—ಏನು ನನ್ನ ಕೈಯಿಂದ ಭಿಕ್ಷೆಯನ್ನು ಸ್ವೀಕರಿಸುವೆಯಾ?

ಚಾರುದತ್ತ—ಶಾಂತಂ ಪಾಪಂ. ಚಂಡಾಲನು ನಿಜವಾಗಿಯೂ ಪಾಲಕ ರಾಜನಂತೆ ಅವಿಚಾರಿಯೂ ದುರಾಚಾರಿಯೂ ಅಲ್ಲ. ಪರಲೋಕ ವಾದರೂ ಸಿಕ್ಕಲೆಂದು ಪುತ್ರನ ಮುಖವನ್ನು ನೋಡಬಯಸುತ್ತೇನೆ.

(ನೇಪಥ್ಯದಲ್ಲಿ)

'ಅಯ್ಯೋ ತಂದೆ, ಅಯ್ಯೋ ಅಪ್ಪ'

(ಚಾರುದತ್ತನು ಮತ್ತೆ ದೈನ್ಯದಿಂದ 'ಅಯ್ಯಾ, ಸ್ವಜಾತಿನಾಯಕನೆ' ಇತ್ಯಾದಿ ವಾಕ್ಯವನ್ನು ಹೇಳುತ್ತಾನೆ)

ಚಂಡಾಲರು—ಓ ಪೌರರೆ, ಸ್ವಲ್ಪ ಸ್ಥಳ ಕೊಡಿರಿ. ಈ ಆರ್ಯ ಚಾರುದತ್ತನು ಮಗನ ಮುಖವನ್ನು ನೋಡಲಿ. (ನೇಪಥ್ಯದ ಕಡೆ ತಿರುಗಿ) ಆರ್ಯ, ಇದೋ ಇತ್ತ ತಿರುಗು. ಏ ಮಗು, ಬಾ.

(ಮಗುವಿನೊಡನೆ ವಿದೂಷಕನ ಪ್ರವೇಶ)

ವಿದೂಷಕ—ಮಗುವೆ, ಬೇಗ ಬಾ, ಬೇಗ ಬಾ. ನಿಮ್ಮ ತಂದೆಯನ್ನು ಕೊಲ್ಲಲು ಹಿಡಿದೊಯ್ಯುತ್ತಿದ್ದಾರೆ.

ಮಗು—ಅಯ್ಯೋ ತಂದೆ! ಅಯ್ಯೋ ಅಪ್ಪಾ!

ವಿದೂಷಕ—ಅಯ್ಯೋ ಪ್ರಿಯಮಿತ್ರ, ನಿನ್ನನ್ನು ಇನ್ನು ನಾನು ನೋಡುವು ದೆಲ್ಲಿ?

ಚಾರುದತ್ತ—(ಮಗುವನ್ನೂ ಮಿತ್ರನನ್ನೂ ನೋಡಿ) ಅಯ್ಯೋ ಪುತ್ರ, ಅಯ್ಯೋ ಮಿತ್ರ! (ದುಃಖದಿಂದ) ಬಹಳ ಕಷ್ಟ—

ಪರಲೋಕದೆ ಬಾಯಾರಿಕೆಯೆನ್ನಯ
ಬೆಳೆವುದು ಪರಿಕಿಸೆ ಬಹುವಾಗಿ;
ಈತನ ಕೈಯಿಂದೆನಗೈತರುವಾ
ತರ್ಪಣಸಲಿಲವು ಅಲ್ಪವೆನೆ. ೧೭

ಮಗನಿಗೇನನ್ನು ಕೊಡಲಿ? (ಮೈಯನ್ನು ನೋಡಿಕೊಂಡು ಜನಿವಾರವನ್ನು

ಕಂಡು) ಆ, ಇದಾದರೂ ನನ್ನದಾಗಿದೆಯಲ್ಲಾ !

ಮುತ್ತಲ್ಲ ಹೊನ್ನಲ್ಲ ವಿಪ್ರರಿಂಗೊಡವೆಯಿದು,
ದೇವಪಿತೃತರ್ಪಣಕೆ ವಿಹಿತವಹುದು. ೧೮

(ಜನಿವಾರವನ್ನು ಕೊಡುವನು)

ಒಬ್ಬ ಚಂಡಾಲ—ಬಾ, ಚಾರುದತ್ತ, ಬಾ.

ಇನ್ನೊಬ್ಬ—ಎಲಾ, ಆರ್ಯ ಚಾರುದತ್ತನನ್ನು ವಿಶೇಷಣವಿಲ್ಲದೆ ಹೆಸರಿಸುವೆಯಾ? ನೋಡು—

ಐಸಿರಿಯಲೆಡರಿನಲಿ ಹಗಲಿನಲಿ ರಾತ್ರಿಯಲಿ
ತಡೆಯಿರದೆ ಪರಿಯುವುದು ನೋಡು ವಿಧಿಯು ;
ಮದಿಸಿದಾ ಪೆಣ್ಕುದುರೆ ಮರಿಯೆನಲು ಲೋಕದಲಿ
ಪುರುಷರೆಲ್ಲರ ಪಿಡಿದು ಮುರಿಯಲೆಂದು. ೧೯

ಮತ್ತು

ಅವನ ಬಿರುದನು ಬರಿದೆಯೆಂಬೆಯ ?
ತಲೆಯ ಬಾಗಿಸಬೇಡವೆ ?
ರಾಹು ನುಂಗೆಯು ಚಂದ್ರನೆಲ್ಲರ
ನತಿಗೆ ತಕ್ಕವನಲ್ಲವೆ ? ೨೦

ಮಗು—ಎಲೈ ಚಂಡಾಲರೆ, ನನ್ನ ತಂದೆಯನ್ನು ಎಲ್ಲಿಗೆ ಒಯ್ಯುವಿರಿ ?

ಚಾರುದತ್ತ—ಮಗು,

ಕೊರಳೊಳು ಕಣಿಗಿಲೆ, ಹೆಗಲೊಳು ಶೂಲವು
ಮನದೊಳು ಶೋಕವು ತರುಬಿರಲು ;
ವಧೆಗೈದುವೆನಿಜೊ ಯಾಗದ ಹೋತನೆ
ಯೂಪಸ್ತಂಭದ ಕಡೆಗೊಡನೆ. ೨೧

ಚಂಡಾಲ—ಮಗು,

ಚಂಡಾಲಕುಲದೊಳಗೆ ಜನಿಸಿಯೂ ಪೂರ್ವದಲಿ
ಚಂಡಾಲರಾವಲ್ತು ನಿಜನ ನೋಡೆ ;
ಸಾಧುಪುರುಷನನಾರು ಪೀಡಿಪರೊ ಪಾಪಿಗಳು
ಅವರೆ ಬುವಿಯೊಳಗಲ್ತೆ ಚಂಡಾಲರು. ೨೨

ಮಗು—ಹಾಗಾದರೆ ತಂದೆಯನ್ನೇಕೆ ಕೊಲ್ಲುವಿರಿ?

ಚಂಡಾಲ—ಚಿರಂಜೀವಿಯೇ, ಈ ತಪ್ಪು ರಾಜಾಜ್ಞೆಯದೇ ಹೊರತು ನಮ್ಮದಲ್ಲ.

ಮಗು—ನನ್ನನ್ನು ಕೊಲ್ಲಿರಿ. ತಂದೆಯನ್ನು ಬಿಟ್ಟುಬಿಡಿ.

ಚಂಡಾಲ—ಮಗು, ಹೀಗೆ ಹೇಳುವ ನೀನು ದೀರ್ಘಾಯುಷ್ಯವಂತನಾಗು.

ಚಾರುದತ್ತ—(ಕಣ್ಣೀರುಬಿಡುತ್ತ ಮಗನ ಕೊರಳನ್ನಪ್ಪಿ)

ಇದೆ ನೇಹದ ಸರ್ವಸ್ವಂ
ಇದರೊಳ್ ಸಿರಿವಂತ-ಬಡವ ಭೇದಗಳಿಲ್ಲಂ
ಹೃದಯಕ್ಕಿದೆಯನುಲೇಪಂ
ಮುದಮೀಯಲ್ ಗಂಧಮಾಲ್ಯಮಿಲ್ಲದೆಯಿರೆಯುಂ ೨೩

(ಕೊರಲೊಳು ಕಣೆಗಿಲೆ.... (ಪದ್ಯ ೨೧) ಮತ್ತು ‘ ಅಕಟ ಸೆರಗಿನಿಂದ ಮೊಗವ....(ಪದ್ಯ ೧೬) ಎಂಬ ಪದ್ಯಗಳನ್ನು ಮತ್ತೆ ತನ್ನಲ್ಲಿಯೇ ತಾನು ಹೇಳಿಕೊಳ್ಳುವನು)

ವಿದೂಷಕ—ನಲ್ಮೊಗದವರೇ, ನನ್ನ ಪ್ರಿಯಮಿತ್ರ ಚಾರುದತ್ತನನ್ನು ಬಿಟ್ಟುಬಿಡಿ. ನನ್ನನ್ನು ಬೇಕಾದರೆ ಕೊಲ್ಲಿರಿ.

ಚಾರುದತ್ತ—ಶಾಂತಂ ಪಾಪಂ. (ನೋಡಿ, ಸ್ವಗತ) ಈಗ ತಿಳಿಯಿತು. (‘ಕ್ಷೇಮಕಾಲದಲ್ಲಿ... (ಪದ್ಯ ೧೬ ಉತ್ತರಾರ್ಧ) ಮತ್ತು (ಪ್ರಕಾಶ)’ ಇಲ್ಲಿ ‘ಹೆಂಗಸರೇರಿ ಮಾಳಿಗೆ....(ಪದ್ಯ ೧೧)’ ಎಂಬ ಪದ್ಯಗಳನ್ನು ತಿರುಗಿ ಹೇಳುವನು)

ನೋಡುವಿರೇತಕೆ ಸತ್ಪುರುಷನನು
ಅಪಯಶವಳಿಸಿರೆ ಜೀವಾಸೆಯನು ;
ಹಗ್ಗವು ಹರಿಯಲು ಬಾವಿಯೊಳುರುಳುವ
ಹೊನ್ನಿನ ಕೊಡದಂತೀತನನು? ೨೪

(ಚಾರುದತ್ತನು ಶೋಕಿಸುತ್ತ ‘ಶಶಿಯ ವಿಮಲ ಕಿರಣ....’ (ಪದ್ಯ ೧೪) ವೆಂಬ ಪದ್ಯವನ್ನು ಮತ್ತೆ ಹೇಳುವನು.)

ಇನ್ನೊಬ್ಬ ಚಂಡಾಲ—ಅರೇ, ಮತ್ತೆ ಸಾರಿ ಹೇಳು.

(ಹಾಗೆಯೇ ಚಂಡಾಲನು ಮಾಡುವನು)

ಚಾರುದತ್ತ—

ಕಡುಕಷ್ಟ ಕೇಡಿಂತು ಬಂದೊದಗಿ ನಿಂದಿರಲು
ಪ್ರಾಣ ಪೋಗುವುದೀಗ ಫಲವೆನಲು ಇದಕೆ;
ಮರಳಿ ಘೋಷಣೆಯೀಗ ಮನವನಿರಿಯುತಲಿಹುದು
ಕೇಳಲ್ಕೆ ನಾನವಳ ಕೊಲೆಗೈದೆನೆಂದು. ೨೫

(ಉಪ್ಪರಿಗೆ ಮೇಲೆ ಕಾಲ್ಬೇಡಿಯಿಂದ ಬದ್ಧನಾದ ಸ್ಥಾವರಕನ ಪ್ರವೇಶ)

ಸ್ಥಾವರಕ—(ಡಂಗುರವನ್ನು ಕೇಳಿ ದುಃಖದಿಂದ) ಅಯ್ಯೋ, ನಿರಪರಾಧಿಯಾದ ಚಾರುದತ್ತನು ಸಾಯುವನೇ! ನನ್ನೊಡೆಯನು ನನ್ನನ್ನು ಬೇಡಿಯಿಂದ ಬಂಧಿಸಿರುವನಲ್ಲಾ. ಇರಲಿ. ಕೂಗಿಕೊಳ್ಳುವೆನು. ಜನರೆ, ಕೇಳಿರಿ, ಕೇಳಿರಿ. ಪಾಪಿಯಾದ ನಾನು ಬಂಡಿಯನ್ನು ಬದಲಾಯಿಸಿ ವಸಂತಸೇನೆಯನ್ನು ಪುಷ್ಪಕರಂಡಕೋದ್ಯಾನಕ್ಕೆ ಒಯ್ದೆನು. ಅಲ್ಲಿ ನನ್ನೊಡೆಯನು ತನ್ನನ್ನು ಮೋಹಿಸುವುದಿಲ್ಲವೆಂದು ಅವಳನ್ನು ಕತ್ತುಹಿಸುಕಿ ಕೊಂದನು, ಈ ಪೂಜ್ಯನಲ್ಲ! ಅಯ್ಯೋ, ದೂರವಾದ್ದರಿಂದ ಒಬ್ಬರೂ ಕೇಳುವುದೇ ಇಲ್ಲವೆ? ಈಗೇನು ಮಾಡಲಿ? ಕೆಳಕ್ಕೆ ಧುಮುಕುವೆನು. (ಆಲೋಚಿಸಿ) ಹೀಗೆ ಮಾಡಿದರೆ ಆರ್ಯ ಚಾರುದತ್ತನು ಸಾಯುವುದಿಲ್ಲ. ಇರಲಿ. ಈ ಮಾಳಿಗೆಯ ಮೇಲ್ಗಡೆಯ ಈ ಹಳೆಯ ಕಿಟಕಿಯಿಂದ ಕೆಳಕ್ಕೆ ಹಾರಿಕೊಳ್ಳುವೆನು. ನಾನು ಸತ್ತರೂ ಉತ್ತಮವೆ; ಕುಲಪುತ್ರಪಕ್ಷಿಗಳಿಗೆಲ್ಲ ವಾಸವೃಕ್ಷನಾಗಿರುವ ಆರ್ಯ ಚಾರುದತ್ತನು ಸಾಯುವುದು ಬೇಡ. ಈಗ ಸತ್ತರೂ ನನಗೆ ಪರಲೋಕ ಸಿಕ್ಕಿಯೇ ತೀರುವುದು. (ಕೆಳಕ್ಕೆ ಹಾರಿಕೊಂಡು) ಆಶ್ಚರ್ಯ! ಸಾಯಲಿಲ್ಲ. ನನ್ನ ಕಾಲ್ಬೇಡಿಯೇ ಮುರಿಯಿತು! ಆ ಡಂಗುರ ಸಾರುವ ಚಂಡಾಲರನ್ನು ಹುಡುಕುವೆನು. (ನೋಡಿ ಸಮೀಪಿಸಿ) ಹೋ, ಹೋ, ಚಂಡಾಲರೆ, ದಾರಿ, ದಾರಿ!

ಚಂಡಾಲರು—ದಾರಿ ಕೇಳುತ್ತಿರುವುದು ಯಾರು?

ಸ್ಥಾವರಕ—('ಕೇಳಿರಿ . . . ಪಾಪಿಯಾದ ನಾನು . . .' ಇತ್ಯಾದಿ ಪೂರ್ವೋಕ್ತ ವಾಕ್ಯವನ್ನು ಪುನರುಚ್ಚರಿಸುವನು)

ಚಾರುದತ್ತ—ಅಹಾ—

ಈಪರಿ ಸಮಯವೆ, ಬಿಗಿದಿರಲೆನ್ನನು
ಕಾಲನ ಪಾಶವು ಬಿಡದಂತೆ;
ಬರದಿಂ ಬೇಯುವ ಸಸ್ಯಕೆ ಮೂಡಿದ
ಹೆನ್ಮೋಡವೆನಲ್ಕಿವನಾರು? ೨೬

ಓ, ನೀವು ಕೇಳಿದಿರಾ?

ನನಗೆ ಮರಣ ಭೀತಿಯಿಲ್ಲ
ಜಸವು ಮಸುಳಿತಲ್ಲ!
ಶುದ್ಧನಾದ ನನಗೆ ಮೃತ್ಯು
ಪುತ್ರಜನ್ಮಕೆಣೆಯಲಾ! ೨೭

(ಮತ್ತು)

ಕ್ಷುದ್ರನಕೃತವೈರದಿಂದೆ
ನೀಚನಲ್ಪಬುದ್ಧಿಯು;
ವಿಷದ ಶರದ ತೆರದೊಳೆನ್ನ
ದೂಷಿಸಿಹನು ದೋಷಿಯು. ೨೮

ಚಂಡಾಲರು—ಸ್ಥಾವರಕ, ಸತ್ಯವನ್ನು ನುಡಿಯುತ್ತಿರುವೆಯೋ?

ಸ್ಥಾವರಕ—ಸತ್ಯ, ನಾನು ಯಾರಿಗೂ ಹೇಳಬಾರದೆಂದು ಮೇಲುಪ್ಪರಿಗೆಯ ಮೇಲೆ ನನಗೆ ಕಾಲ್ಬೇಡಿ ಹಾಕಿ ಒಡೆಯನಿಟ್ಟಿದ್ದನು.

(ಪ್ರವೇಶ—ಶಕಾರ)

ಶಕಾರ—(ಸಂತೋಷದಿಂದ)

ಮಾಂಸವನ್ನು ಖಾರಹುಳಿಯ ಗಂಜಿಯನ್ನು ಶಾಕವ
ಸೂಪವನ್ನು ಮೀನುಮತ್ಸ್ಯವೆರಸು ಗೈದ ಪಾಕವ
ನನ್ನ ಮನೆಯಲುಂಡು ಬಂದೆ ಗಂಧಶಾಲಿಯನ್ನವ
ಬೆಲ್ಲ ತುಪ್ಪ ಬೆರಸಿಯಟ್ಟ ಬಹಳ ರುಚಿಕರಾನ್ನವ. ೨೯

(ಕಿವಿಗೊಟ್ಟು ಕೇಳಿ) ಒಡೆದ ಕಂಚಿನ ಸ್ವರವನ್ನು ನೋಡಿದರೆ ಚಂಡಾಲರ ದನಿಯಂತಿದೆ. ಗಟ್ಟಿಯಾಗಿ ಬಾಜಿಸುವ ಈ ವಧ್ಯ ಡಿಂಡಿಮ ಶಬ್ದವನ್ನೂ ನಗಾರಿಯನ್ನೂ ನೋಡಿದರೆ ದರಿದ್ರಚಾರುದತ್ತ

ನನ್ನು ವಧ್ಯಸ್ಥಾನಕ್ಕೆ ಒಯ್ಯುತ್ತಿದ್ದಾರೆಂದು ಊಹಿಸುತ್ತೇನೆ. ಹೋಗಿ ನೋಡುವೆನು. ಶತ್ರುವಿನಾಶದಿಂದ ನನ್ನ ಮನಸ್ಸಿಗೆ ಮಹದಾನಂದವಾಗುತ್ತದೆ. ಶತ್ರು ಸಾಯುವುದನ್ನು ಕಣ್ಣಿಂದ ಕಂಡವನಿಗೆ ಇಹ ಜನ್ಮದಲ್ಲಿನ್ನು ಕಣ್ಣುಬೇನೆಯಿಲ್ಲವೆಂದು ಹೇಳುವುದನ್ನು ಕೇಳಿದ್ದೇನೆ. ವಿಷಗರ್ಭದಲ್ಲಿ ಸಿಕ್ಕಿದ ಕೀಟವು ಹೊರಬರಲು ದಾರಿಯನ್ನು ಹುಡುಕುವಂತೆ ಹುಡುಕುತ್ತಿದ್ದ ನಾನು ಆ ದರಿದ್ರ ಚಾರುದತ್ತನ ವಿನಾಶವನ್ನೇ ಏರ್ಪಡಿಸಿದೆ! ಈಗ ನನ್ನ ಮೇಲುಪ್ಪರಿಗೆಯ ಮಾಳಿಗೆಯಲ್ಲಿ ನಿಂತು ನನ್ನ ಪರಾಕ್ರಮವನ್ನು ನೋಡುವೆನು. (ಹಾಗೆ ಮಾಡಿ, ನೋಡಿ) ಹೀ, ಹೀ, ಈ ದರಿದ್ರಚಾರುದತ್ತನನ್ನು ವಧ್ಯಸ್ಥಾನಕ್ಕೆ ಒಯ್ಯುತ್ತಿದ್ದರೇ ಜನರ ಗುಜುಗುಂಪು ಇಷ್ಟು! ಎಂದಮೇಲೆ ನನ್ನಂತಹ ಪ್ರವರ ಪುರುಷಶ್ರೇಷ್ಠನನ್ನು ವಧ್ಯಸ್ಥಾನಕ್ಕೆ ಒಯ್ಯುವ ಕಾಲ ಬಂದರೆ ಮತ್ತೆಷ್ಟಾಗಬಹುದೋ ಏನೋ!! (ನೋಡಿ) ಏನು, ಹೊಸ ಗೂಳಿಯಂತೆ ಅಲಂಕೃತನಾದ ಇವನನ್ನು ದಕ್ಷಿಣ ದಿಕ್ಕಿಗೆ ಒಯ್ಯುತ್ತಿರುವರಲ್ಲವೆ? ಇದೇನು ಕಾರಣ, ನನ್ನ ಮೇಲ್ಮಾಳಿಗೆಯ ಸಮೀಪದಲ್ಲಿ ಡಂಗುರವನ್ನು ಸಾರದೆ ನಿಲ್ಲಿಸಿದ್ದಾರೆ! (ನೋಡಿ) ಓ, ಇಲ್ಲಿ ಸ್ಥಾವರಕ ಚೇಟನೂ ಇಲ್ಲ. ಇಲ್ಲಿಂದೋಡಿ ಅವನು ಗುಟ್ಟನ್ನು ಬಯಲಿಗೆಳೆದಿಲ್ಲವಷ್ಟೆ! ಮೊದಲು ಅವನನ್ನು ಹುಡುಕುವೆನು. (ಉಪ್ಪರಿಗೆಯಿಂದಿಳಿದು ಬರುವನು).

ಚಂಡಾಲರು—

ಸರಿಯಿರಿ, ದಾರಿಯ ನೀಡಿರಿ, ಮುಚ್ಚಿರಿ
ದ್ವಾರವನೆಲ್ಲವ ಸುಮ್ಮನಿರಿ ;
ಅವಿನಯವೆನ್ನುವ ಮೊನೆಕೋಡಿಂದಿದೊ
ತಂಟೆಯ ಗೂಳಿಯು ಬರುತಿಹುದು ೩೦

ಶಕಾರ—ಎಲ ಎಲಾ, ದಾರಿ ಕೊಡಿರಿ. (ಸಮೀಪಿಸಿ) ಮಗು, ಸ್ಥಾವರಕ, ಚೇಟ, ಬಾಪ್ಪಾ ಹೋಗೋಣ.

ಚೇಟ—ಛಿ, ಛಿ, ಅನಾರ್ಯ, ವಸಂತಸೇನೆಯನ್ನು ಕೊಂದು ನಿನಗೆ ತೃಪ್ತಿಯಾಗಲಿಲ್ಲ. ಈಗ ಪ್ರಣಯಿಜನಗಳಿಗೆಲ್ಲ ಕಲ್ಪವೃಕ್ಷವಾಗಿರುವ ಚಾರು

ದತ್ತನನ್ನು ಕೊಲ್ಲಿಸಲು ಹೊರಟಿರುವೆ.

ಶಕಾರ—ರತ್ನದ ಕೊಡದಂತಿರುವ ನಾನು ಹೆಣ್ಣನ್ನು ಕೊಲ್ಲುವೆನೆ?

ಎಲ್ಲರೂ—ನೀನೇ ಕೊಂದಿರುವೆ. ಆರ್ಯ ಚಾರುದತ್ತನಲ್ಲ.

ಶಕಾರ—ಹೀಗೆ ಯಾರು ಹೇಳುತ್ತಾರೆ?

ಎಲ್ಲರೂ—(ಚೇಟನನ್ನು ತೋರಿಸಿ) ಈ ಸಜ್ಜನನು ಹೇಳುತ್ತಾನೆ.

ಶಕಾರ—(ಭಯದಿಂದ, ಅಪವಾರಿತ) ಏನು, ಚೇಟ ಸ್ಥಾವರಕನನ್ನು ನಾನು ಸರಿಯಾಗಿ ಕಟ್ಟಿಹಾಕಲಿಲ್ಲವೆ? ಇವನೇ ನನ್ನ ಅಕಾರ್ಯಕ್ಕೆ ಸಾಕ್ಷಿ. (ಆಲೋಚಿಸಿ) ಹೀಗೆ ಮಾಡುವೆನು. (ಪ್ರಕಾಶ) ಜನರೇ, ಎಲ್ಲಾ ಸುಳ್ಳು. ಈ ಚೇಟನು ಹೊನ್ನನ್ನು ಕದ್ದಾಗ ಹಿಡಿದು ಇವನನ್ನು ಬಂಧಿಸಿ, ಹೊಡೆದು, ಕಟ್ಟಿಹಾಕಿದ್ದೆ. ಹೀಗೆ ವೈರದಿಂದ ಇವನು ಹೇಳುತ್ತಿರುವುದು ನಿಜವಾಗುವುದೆ? (ಮರೆಯಿಂದ ಚೇಟನಿಗೆ ಕಡಗವನ್ನು ಕೊಡುವನು. ಮೆಲ್ಲನೆ—) ಮಗು, ಸ್ಥಾವರಕ, ಚೇಟ, ಇದನ್ನು ತೆಗೆದುಕೊಂಡು ಬೇರೆ ರೀತಿಯಾಗಿ ಹೇಳು.

ಚೇಟ—(ತೆಗೆದುಕೊಂಡು) ನೋಡಿರಿ, ಜನರೆ, ನೋಡಿರಿ. ಈ ಹೊನ್ನಿನಿಂದ ನನ್ನನ್ನು ಮರುಳು ಮಾಡುತ್ತಿರುವನು.

ಶಕಾರ—(ಕಡಗವನ್ನು ಕಿತ್ತುಕೊಂಡು) ಇದೇ ಆ ಹೊನ್ನು—ಇವನು ಇದನ್ನು ಕದ್ದನೆಂಪೇ ನಾನು ಕಟ್ಟಿಹಾಕಿದ್ದುದು. (ಕ್ರೋಧದಿಂದ) ಎಲೈ ಚಂಡಾಲರೆ, ಇವನನ್ನು ನನ್ನ ಹೊನ್ನ ಪೆಟ್ಟಿಗೆಯನ್ನು ಕಾಯುವುದಕ್ಕೆ ನೇಮಿಸಿದ್ದೆ. ಇವನು ಕದ್ದಕಾರಣ ಇವನನ್ನು ಹೊಡೆದು ಬಡಿದೆ. ನೀವು ನಂಬದಿದ್ದರೆ ಇವನ ಬೆನ್ನನ್ನು ನೀವೇ ನೋಡಿ.

ಚಾಂಡಾಲರು—(ನೋಡಿ) ಇವನೆನ್ನುವುದು ಸರಿ. ಹೊಡೆಸಿಕೊಂಡ ಚೇಟ ಏನು ತಾನೆ ಮಾಡಲಾರ!

ಸ್ಥಾವರಕ—ಅಯ್ಯೋ, ದಾಸ್ಯವೇ ಹೀಗೆ; ಸತ್ಯವಾದರೂ ಇತರರು ನಂಬುವುದಿಲ್ಲ. (ದೈನ್ಯದಿಂದ) ಆರ್ಯ ಚಾರುದತ್ತ, ನನ್ನ ಬುದ್ಧಿಯಿಲ್ಲಿಗೆ ತೀರಿತು. (ಕಾಲ ಮೇಲೆ ಬೀಳುವನು)

ಚಾರುದತ್ತ—(ಶೋಕದಿಂದ)

ಎದ್ದೇಳು ಕೇಡಿನಲು ಗುಣಿಯು ಕನಿಕರಿಪವನೆ
ನಿಷ್ಕಾರಣೋಪನತಬಂಧು ಧಾರ್ಮಿಕನೆ ;
ಎನ್ನ ಬಿಡಿಸಲ್ಕೆಂದು ಪಿರಿದು ಯತ್ನವ ಗೈದೆ-
ಯಾದೊಡೇಂ ವಿಧಿ ಬಿಡದು ನಿನ್ನಳವೆ ಮುಂದೆ? ೩೧

ಚಂಡಾಲರು—ಒಡೆಯನೆ, ಈ ಚೇಟನನ್ನು ಹೊಡೆದೋಡಿಸು.

ಶಕಾರ—ಎಲೋ, ತೊಲಗೊ. (ಓಡಿಸುವನು) ಚಂಡಾಲರೆ, ಇನ್ನೇಕೆ ತಡ ಮಾಡುವಿರಿ. ಇವನನ್ನು ಕೊಂದುಬಿಡಿ.

ಚಂಡಾಲರು—ಆತುರ ನಿನಗಿದ್ದರೆ ನೀನೇ ಕೊಂದುಬಿಡು.

ರೋಹಸೇನ—ಓ, ಚಂಡಾಲರೆ, ನನ್ನನ್ನು ಕೊಲ್ಲಿರಿ. ತಂದೆಯನ್ನು ಬಿಟ್ಟು ಬಿಡಿ.

ಶಕಾರ—ಇವನನ್ನು ಪುತ್ರಸಮೇತವಾಗಿಯೇ ಕೊಲ್ಲಿರಿ.

ಚಾರುದತ್ತ—ಈ ಮೂರ್ಖನು ಏನು ಬೇಕಾದರೂ ಮಾಡಿಸಬಹುದು. ಆದ್ದರಿಂದ ಮಗು, ತಾಯಿಯ ಬಳಿಗೆ ಹೋಗಪ್ಪಾ.

ರೋಹಸೇನ—ಹೋಗಿ ನಾನೇನು ಮಾಡಬೇಕು?

ಚಾರುದತ್ತ—

ಆಶ್ರಮಕ್ಕಿದೊ ತೆರಳು ಬೇಗದೆ
ತಾಯ ಸಂಗಡವಿಂದೆ ನೀಂ ;
ಜನಕದೋಷದೆ ನಿನಗಮೀಗತಿ
ಬಾರದಿರಲೆಂದೆಂದಿಗೂ. ೩೨

ಆದ್ದರಿಂದ ಮಿತ್ರನೆ, ಇವನನ್ನು ಕರೆದುಕೊಂಡು ನೀನು ಹೋಗು.

ವಿದೂಷಕ—ಅಯ್ಯೋ ಮಿತ್ರ, ನೀನಿಲ್ಲದೆ ಹೋದರೂ ನಾನು ಪ್ರಾಣವನ್ನಿಟ್ಟುಕೊಂಡಿರುವೆನೆಂದೇ ನೀನು ಮಾಡಿಕೊಂಡಿರುವೆ.

ಚಾರುದತ್ತ—ನಿನ್ನ ಪ್ರಾಣ ನಿನ್ನಧೀನದಲ್ಲಿರುವಾಗ ನೀನು ಪ್ರಾಣತ್ಯಾಗ ಮಾಡುವುದು ಯುಕ್ತವಲ್ಲ.

ವಿದೂಷಕ—(ಸ್ವಗತ) ಇದು ನಿಜವೇ. ಆದರೂ ಪ್ರಿಯಮಿತ್ರನಿಲ್ಲದೆ ಪ್ರಾಣವನ್ನಿಟ್ಟುಕೊಂಡಿರಲಾರೆ. ಆದ್ದರಿಂದ ಬ್ರಾಹ್ಮಣಿಗೆ ಮಗುವನ್ನು ಒಪ್ಪಿಸಿ ನಾನೂ ಪ್ರಾಣತ್ಯಾಗಮಾಡಿ ಮಿತ್ರನನ್ನು ಹಿಂಬಾಲಿಸುವೆನು.

(ಪ್ರಕಾಶ) ಮಿತ್ರ, ಇವನನ್ನು ಬೇಗವೇ ಕರೆದೊಯ್ಯುವೆನು. (ಕೊರಳನ್ನಪ್ಪಿಕೊಂಡು, ಕಾಲಿಗೆ ಬೀಳುವನು)

(ಮಗುವೂ ಅಳುತ್ತ ಕಾಲ್ಗೆರಗುವನು)

ಶಕಾರ—ಎಲಾ, ನಾನು ಹೇಳುತ್ತಿದ್ದೇನೆ, ಪುತ್ರಸಮೇತವಾಗಿ ಚಾರುದತ್ತನನ್ನು ಕೊಲ್ಲಿರಿ, ಎಂಬುದಾಗಿ.

(ಚಾರುದತ್ತನು ಭಯವನ್ನು ತೋರಿಸುವನು)

ಚಂಡಾಲರು—ನಮಗೆ ಹೀಗೆ ರಾಜಾಜ್ಞೆಯಾಗಿಲ್ಲ—'ಪುತ್ರಸಹಿತನಾದ ಚಾರುದತ್ತನನ್ನು ಕೊಲ್ಲಿರಿ' ಎಂದು. ಆದ್ದರಿಂದ ಹೋಗು, ಹುಡುಗ, ಹೋಗು. (ಕಳುಹಿಸುವರು) ಇದು ಮೂರನೆಯ ಡಂಗುರದ ಸ್ಥಳ. ಡಂಗುರ ಹೊಡೆಯಿರಿ. (ಮತ್ತೆ ಸಾರಿ ಹೇಳುವರು)

ಶಕಾರ—(ಸ್ವಗತ) ಏನು, ಊರ ಜನರು ನಂಬುವುದೇ ಇಲ್ಲವೆ? (ಪ್ರಕಾಶ) ಎಲೋ ಚಾರುದತ್ತ, ವಟು, ಊರ ಜನರು ನಂಬುತ್ತಿಲ್ಲ. ಆದ್ದರಿಂದ ನಿನ್ನ ನಾಲಗೆಯಿಂದಲೇ ಹೇಳು—'ನಾನೇ ವಸಂತಸೇನೆಯನ್ನು ಕೊಂದೆ' ಎಂಬುದಾಗಿ.

(ಚಾರುದತ್ತನು ಸುಮ್ಮನಿರುವನು)

ಶಕಾರ—ಎಲಾ ಚಂಡಾಲ, ಮನುಷ್ಯ, ಈ ಚಾರುದತ್ತ ವಟು ಹೇಳುವುದಿಲ್ಲ. ಆದ್ದರಿಂದ ನೀವು ಡಂಗುರ ಹೊಡೆಯಲುಪಯೋಗಿಸುತ್ತಿರುವ ಈ ಹಳೆಯ ಬಿದಿರಿನ ಕಡ್ಡಿಯಿಂದ ಹೊಡೆದು ಬಡಿದು ಹೇಳಿಸಿರಿ.

ಚಂಡಾಲ—(ಕೋಲನ್ನೆತ್ತಿ) ಎಲೋ ಚಾರುದತ್ತ, ಹೇಳು.

ಚಾರುದತ್ತ—(ಶೋಕದಿಂದ)

ಇಂತು ಕೆಡೆದು ಶೋಕವೆಂಬ ಸಾಗರಪ್ರಪಾತದೊಳ್
ಭೀತಿಯಿಲ್ಲ ಬಗೆಯೊಳಿಲ್ಲ ದುಃಖವಿನಿತು ಪರಿಕಿಸೆ;
ಸುಡುವುದೆನ್ನನೊಂದೆ ಜನರ ನಿಂದೆಯೆಂಬ ಶಂಕೆಯು
ಪ್ರಿಯಳ ಕೊಂದೆನೆಂದದೆಂತು ಪೇಳ್ವೆನಿನ್ನು ಶಿವಶಿವಾ! ೩೩

(ಶಕಾರನು ಮತ್ತೆ ಮೊದಲಿನಂತೆ ಹೇಳುವನು)

ಚಾರುದತ್ತ—ಎಲೈ ಪೌರರೇ! (ಮತ್ತೆ ೯ ನೆ ಅಂಕದ ೩೦ ಮತ್ತು ೩೮ ನೆಯ ಪದ್ಯಗಳನ್ನು ಹೇಳುವನು.)

ಶಕಾರ—ಕೊಂದಿರುವೆನು !

ಚಾರುದತ್ತ—ಹಾಗೆಯೇ ಆಗಲಿ.

ಮೊದಲನೆಯ ಚಂಡಾಲ—ಇವತ್ತು ಕೊಲ್ಲುವ ಸರದಿ ನಿನ್ನದು.

ಎರಡನೆಯ ಚಂಡಾಲ—ಅಲ್ಲ, ನಿನ್ನದು.

ಮೊದಲನೆಯ ಚಂಡಾಲ—ಹಾಗಾದರೆ ಗೆರೆಯೆಳೆದು ನೋಡೋಣ. (ತುಂಬಾ ಗೆರೆಗಳನ್ನು ಬರೆದು) ನೋಡು, ಸರದಿ ನನ್ನದಾಗಿದ್ದರೆ ಒಂದು ಕ್ಷಣ ತಡೆಯುವೆನು.

ಎರಡನೆಯವನು—ಏಕೆ ?

ಮೊದಲನೆಯವನು—ನನ್ನ ತಂದೆ ಸಾಯುವಾಗ ನನಗೆ ಹೀಗೆ ಹೇಳಿ ಸತ್ತನು—'ಪುತ್ರ, ವೀರಕ, ವಧೆ ಮಾಡುವ ಸರದಿ ನಿನಗೆ ಬಂದಾಗ ವಧ್ಯನನ್ನು ತಟ್ಟನೆ ಕೊಂದು ಬಿಡಬೇಡ.'

ಎರಡನೆಯವನು—ಅದೇಕೆ ?

ಮೊದಲನೆಯವನು—ಅಕಸ್ಮಾತ್ತಾಗಿ ಯಾರಾದರೂ ಧನಿಕರು ವಧ್ಯನನ್ನು ದುಡ್ಡುಕೊಟ್ಟು ಬಿಡಿಸಬಹುದು. ಕದಾಚಿತ್ ರಾಜನಿಗೆ ಪುತ್ರೋತ್ಸವವಾಗಿ ಆ ಸಂತೋಷಪ್ರಸಂಗದಲ್ಲಿ ವಧ್ಯರೆಲ್ಲರಿಗೂ ಬಿಡುಗಡೆಯಾಗಬಹುದು. ಅಥವಾ ಮದ್ದಾನೆ ಸೆರೆಯನ್ನು ಕಿತ್ತುಕೊಂಡೋಡಬಹುದು. ಆ ಗದ್ದಲದಲ್ಲಿ ವಧ್ಯನು ತಪ್ಪಿಸಿಕೊಳ್ಳಬಹುದು. ಇಲ್ಲವೆ ರಾಜನು ಬದಲಾಗಬಹುದು ; ಅದರಿಂದ ವಧ್ಯರಿಗೆ ಬಿಡುಗಡೆ ದೊರೆಯುಬಹುದು.

ಶಕಾರ—ಏನು, ಏನು, ರಾಜನು ಬದಲಾಗುವುದುಂಟೇ ?

ಚಂಡಾಲ—ಎಲೋ, ಕೊಲ್ಲುವ ಸರದಿಯನ್ನು ಗೊತ್ತುಮಾಡಲು ಗೆರೆಗಳನ್ನು ಬರೆಯೋಣ.

ಶಕಾರ— ಅರೇ, ಬೇಗ ಚಾರುದತ್ತನನ್ನು ಕೊಲ್ಲಿಸಿ ! (ಚೇಟನನ್ನು ಹಿಡಿದುಕೊಂಡು ಏಕಾಂತದಲ್ಲಿ ನಿಲ್ಲುವನು)

ಚಂಡಾಲ—ಆರ್ಯ ಚಾರುದತ್ತ, ತಪ್ಪು ರಾಜಾಜ್ಞೆಯದು, ಚಂಡಾಲರಾದ ನಮ್ಮದಲ್ಲ ; ನೀನು ಸ್ಮರಿಸಬೇಕಾದುದನ್ನು ಸ್ಮರಿಸಿ ಮುಗಿಸು.

ಚಾರುದತ್ತ—

ಧರ್ಮವೆನ್ನದು ಪ್ರಬಲವಾದೊಡೆ ನಾನು ದೂಷಿತನಾದರೂ
ಪ್ರಬಲಪುರುಷರ ಮಾತಿನಿಂದಲಿ ಭಾಗ್ಯದೋಷದಿನಂತೆಯೆ ;
ಇಂದ್ರಭವನದೊಳಂತೆ ಮೇಣಿನ್ನೆಲ್ಲಿಯಾದೊಡಮಿರುತಿಹ
ಆಕೆ ತನ್ನಯ ನಲ್ಮೆಯಿಂದಲೆ ತೊಡೆಯಲೆನ್ನ ಕಳಂಕವ ೩೪

ಅಯ್ಯೋ, ನಾನು ಎಲ್ಲಿ ಹೋಗಬೇಕು ?

ಚಂಡಾಲ—(ಮುಂದೆ ತೋರಿಸಿ) ಇಗೋ, ಮುಂದೆ ಕಾಣಿಸುವುದೇ ದಕ್ಷಿಣ ಶ್ಮಶಾನ. ಇದನ್ನು ನೋಡಿದೊಡನೆಯೇ ವಧ್ಯರು ಪ್ರಾಣವನ್ನು ಬಿಡುವರು. ನೋಡು, ನೋಡು—

ಗುಳ್ಳೆನರಿಗಳು ಸೆಳೆವುವೊಡಲಿನ
ಅರ್ಧಭಾಗವನಿತ್ತಲು ;
ವೊದಲಿನರ್ಧವು ಶೂಲದಲ್ಲಿರ-
ಲಟ್ಟಹಾಸದ ಅಚ್ಚೆನಲ್. ೩೫

ಚಾರುದತ್ತ—ಅಯ್ಯೋ, ಮಂದಭಾಗ್ಯನಾದ ನಾನು ಕೆಟ್ಟೆನಲ್ಲಾ ! (ದುಃಖದಿಂದ ಕುಳಿತುಕೊಳ್ಳುವನು)

ಶಕಾರ—ನಾನು ಹೋಗುವುದಿಲ್ಲ. ಕೊಲ್ಲಲ್ಪಡುವ ಚಾರುದತ್ತನನ್ನು ನೋಡುವೆನು. (ಬಂದು ನೋಡಿ) ಏನು, ಕುಳಿತಿರುವನೆ ?

ಚಂಡಾಲ—ಚಾರುದತ್ತ, ಭೀತನಾಗಿರುವೆಯೇನು ?

ಚಾರುದತ್ತ—(ತಟ್ಟನೆ ಎದ್ದು) ಮೂರ್ಖ ! ('ನನಗೆ ಮರಣ ಭೀತಿಯಿಲ್ಲ . . .' (೨೭ ನೆಯ ಪದ್ಯ) ವೆಂಬ ಪದ್ಯವನ್ನು ಮತ್ತೆ ಹೇಳುವನು)

ಚಂಡಾಲ—ಆರ್ಯ, ಚಾರುದತ್ತ, ಗಗನತಲದಲ್ಲಿ ವಾಸಿಸುವ ಚಂದ್ರರಿಗೂ ವಿಪತ್ತು ತಪ್ಪಿದ್ದಲ್ಲ; ಎಂದ ಮೇಲೆ ಮರಣಭೀರುಗಳಾದ ಮಾನವರ ಪಾಡೇನು ! ಲೋಕದಲ್ಲಿ ಎದ್ದವರು ಬೀಳುತ್ತಾರೆ; ಬಿದ್ದವರೂ ಏಳುತ್ತಾರೆ.

ಎದ್ದು ಬೀಳ್ವ ಶವದ ಗತಿಯು
ಅಂಗಿಯಂತೆ ನೆಟ್ಟನೆ;
ಎಂಬುದನ್ನು ಮನದೆ ನೆನೆದು
ಗಟ್ಟಿಮಾಡು ಎದೆಯನೆ ! ೩೬

(ಎರಡನೆಯ ಚಂಡಾಲನನ್ನು ಕುರಿತು) ಇದು ನಾಲ್ಕನೆಯ ಡಂಗುರದ ಸ್ಥಾನ. ಆದ್ದರಿಂದ ಸಾರೋಣ. (ಮತ್ತೆ ಮೊದಲಿನಂತೆ ಸಾರುವರು)

ಚಾರುದತ್ತ—ಹಾ ಪ್ರಿಯೆ, ವಸಂತಸೇನೆ! ('ಶಶಿಯ ವಿಮಲ...' (೧೩ ನೆಯ ಪದ್ಯ) ವೆಂಬ ಪದ್ಯವನ್ನು ಮತ್ತೆ ಹೇಳುವನು)

(ಗಾಬರಿಯಿಂದ ವಸಂತಸೇನೆ, ಮತ್ತು ಭಿಕ್ಷುಗಳ ಪ್ರವೇಶ)

ಭಿಕ್ಷು—ಆಶ್ಚರ್ಯ. ಅನುಚಿತ ಹಿಂಸೆಗೆ ಗುರಿಯಾದ ಈಕೆಯನ್ನುಪಚರಿಸಿ ಕರೆದೊಯ್ಯುವ ಅವಕಾಶ ಕೊಟ್ಟುದರಿಂದ ಸಂನ್ಯಾಸವೂ ನನಗೆ ಉಪಕಾರವನ್ನೇ ಮಾಡಿತು. ಉಪಾಸಕಳೆ, ನಿನ್ನನ್ನೆಲ್ಲಿಗೆ ಕಳುಹಿಸಲಿ?

ವಸಂತಸೇನೆ—ಆರ್ಯಚಾರುದತ್ತನ ಮನೆಗೇ. ಆತನ ದರ್ಶನ ಮಾಡಿಸಿ ಚಂದ್ರದರ್ಶನದಿಂದ ಕುಮುದಿನಿಯಂತೆ ನನ್ನನ್ನೂ ಆನಂದಪಡಿಸು.

ಭಿಕ್ಷು—(ಸ್ವಗತ) ಯಾವ ದಾರಿಯಿಂದ ಪ್ರವೇಶಿಸಲಿ? (ಆಲೋಚಿಸಿ) ರಾಜ ಬೀದಿಯಲ್ಲೇ ಹೋಗುವೆನು. ಉಪಾಸಕಳೆ, ಬಾ. ಇದು ರಾಜಬೀದಿ. (ಆಲಿಸಿ) ಇದೇನು, ರಾಜಬೀದಿಯಲ್ಲಿಷ್ಟು ಕೋಲಾಹಲ.

ವಸಂತಸೇನೆ—(ಮುಂದೆ ನೋಡಿ) ಮುಂದೆ ಇಷ್ಟೊಂದು ಜನರ ಗುಂಪು. ಆರ್ಯ, ಇದೇನೆಂದು ಕೇಳಿ ತಿಳಿ. ಭೂಮಿಯ ಭಾರವೆಲ್ಲ ವಿಷಮ ವಾಗಿ ಒಂದೇ ಕಡೆ ಬಂದಂತೆ ಉಜ್ಜಯಿನಿಯೆಲ್ಲ ಒಂದೇ ಕಡೆ ನೆರೆದಿದೆ.

ಚಂಡಾಲ—ಇದೇ ಕಡೆಯ ಡಂಗುರದ ಸ್ಥಳ. ಡಂಗುರ ಹಾಕಿರಿ, ನಗಾರಿ ಯನ್ನು ಬಡಿಯಿರಿ. ಘೋಷಣೆಯನ್ನು ಸಾರಿರಿ. (ಮಾಡಿ) ಎಲೆ ಚಾರುದತ್ತ, ಕಾಯುತ್ತಿರು. ಭಯಪಡಬೇಡ. ಬೇಗ ಕೊಲ್ಲಲ್ಪ ಡುವೆ.

ಚಾರುದತ್ತ—ಪೂಜ್ಯ ದೇವತೆಯರೆ!

ಭಿಕ್ಷು—(ಕೇಳಿ ಗಾಬರಿಯಿಂದ) ಉಪಾಸಕಳೆ, ನೀನು ಚಾರುದತ್ತನಿಂದ ಕೊಲ್ಲಲ್ಪಟ್ಟೆಯೆಂದು ಚಾರುದತ್ತನನ್ನು ಕೊಲ್ಲಲು ಒಯ್ಯುತ್ತಿದ್ದಾರೆ.

ವಸಂತಸೇನೆ—(ಗಾಬರಿಯಿಂದ) ಅಯ್ಯೋ ಕೇಡೆ! ಅಯ್ಯೋ ಕೇಡೆ! ಮಂದ ಭಾಗಿನಿಯಾದ ನನ್ನ ದೆಸೆಯಿಂದ ಆರ್ಯಚಾರುದತ್ತನನ್ನು ಕೊಲ್ಲು ವರೆ? ಓ, ಬೇಗ ಬೇಗ ದಾರಿ ತೋರಿಸು.

ಭಿಕ್ಷು—ತ್ವರೆ ಮಾಡು, ಉಪಾಸಕಳೇ ತ್ವರೆಮಾಡು. ಇನ್ನೂ ಬದುಕಿರುವ ಚಾರುದತ್ತನನ್ನು ಸಮಾಧಾನಗೊಳಿಸಲು ತ್ವರೆಮಾಡು.

ವಸಂತಸೇನೆ—ದಾರಿ, ದಾರಿ !

ಚಂಡಾಲ—ಆರ್ಯ ಚಾರುದತ್ತ, ತಪ್ಪು ಪ್ರಭುವಿನಾಜ್ಞೆಯದು. ನೀನು ಸ್ಮರಿಸಬೇಕಾದ್ದನ್ನು ಸ್ಮರಿಸಿಬಿಡು.

ಚಾರುದತ್ತ—ಹೆಚ್ಚೇನು ! ('ಧರ್ಮವೆನ್ನದು......' (೩೪ ನೆಯ ಪದ್ಯ) ಎಂಬ ಪದ್ಯವನ್ನು ಪುನರುಚ್ಚರಿಸುವನು)

ಚಂಡಾಲ—(ಕತ್ತಿಯನ್ನೆಳೆದು) ಆರ್ಯ ಚಾರುದತ್ತ, ಬಗ್ಗಿಕೊಂಡು ಒಂದೇ ಸಮವಾಗಿ ನಿಲ್ಲು. ಒಂದೇ ಏಟಿಗೆ ಕೊಂದು ನಿನ್ನನ್ನು ಸ್ವರ್ಗಕ್ಕೆ ಕಳುಹಿಸುವೆವು.

(ಚಾರುದತ್ತನು ಹಾಗೆಯೇ ನಿಲ್ಲುವನು)

ಚಂಡಾಲ—(ಹೊಡೆಯಲನುವಾಗುವನು. ಕೈಯಿಂದ ಕತ್ತಿ ಬೀಳುವುದು)

ಓ, ಇದೇನಿದು—

ರೋಷದಿಂದ ಸೆಳೆದರೂ
ಹಿಡಿಯ ಹಿಡಿದೆ ಇದ್ದರೂ ;
ನೆಲದೊಳೇಕೆ ಬಿದ್ದಿತೋ
ವಜ್ರಸದೃಶ ಖಡ್ಗವು ? ೩೭

ಹೀಗಾದುದರಿಂದ ಊಹಿಸುತ್ತೇನೆ, ಚಾರುದತ್ತನು ಸಾಯುವುದಿಲ್ಲವೆಂದು. ಭಗವತಿ, ಸಹ್ಯವಾಸಿನಿ, ಪ್ರಸನ್ನಳಾಗು, ಪ್ರಸನ್ನಳಾಗು. ಚಾರುದತ್ತನ ಬಿಡುಗಡೆಯಾದ ಪಕ್ಷದಲ್ಲಿ ಚಂಡಾಲಕುಲವನ್ನೇ ನೀನು ಉದ್ಧರಿಸಿದಂತಾಗುವುದು !

ಇನ್ನೊಬ್ಬ—ಆಜ್ಞೆಯಂತೆ ನಡೆಸೋಣ.

ಮೊದಲನೆಯವನು—ಆಗಲಿ. ಹಾಗೆಯೇ ಮಾಡೋಣ.

(ಇಬ್ಬರೂ ಚಾರುದತ್ತನನ್ನು ಶೂಲಕ್ಕೇರಿಸಲನುವಾಗುವರು)

(ಚಾರುದತ್ತನು 'ಧರ್ಮವೆನ್ನದು . . . (೩೪)' ಎಂಬ ಪದ್ಯವನ್ನು ಪುನರುಚ್ಚರಿಸುವನು.)

ಭಿಕ್ಷು ವಸಂತಸೇನೆಯರು—(ನೋಡಿ) ಬೇಡ, ಆರ್ಯರೆ, ಬೇಡ. ಇದೋ

ಯಾರಿಗೋಸ್ಕರ ಇವನನ್ನು ಕೊಲ್ಲುತ್ತಿರುವರೋ ಆ ಮಂದಭಾಗಿನಿಯಾದ ನಾನೇ ಇಲ್ಲಿರುವೆ.

ಚಂಡಾಲ—

ಆರಿವಳು ಹೆಗಲಿನಲಿ ಕೇಶರಾಶಿಗಳುರುಳೆ
ಬೇಗ ಬೇಗದೆ ತಾನು ಬರುತಲಿಹಳು,
ಬೇಡ ಬೇಡೆನುತ್ತೆ ಕೈಯೆತ್ತಿಕೊಂಡಿಹಳು
ಇತ್ತಲೇ ನೋಡಲ್ಕೆ ಪರಿಯುತಿಹಳು? ೩೮

ವಸಂತಸೇನೆ—ಆರ್ಯ ಚಾರುದತ್ತ, ಇದೇನಿದು? (ಎದೆಯ ಮೇಲೆ ಬೀಳುವಳು)

ಭಿಕ್ಷು—ಆರ್ಯ ಚಾರುದತ್ತ, ಇದೇನಿದು? (ಕಾಲ್ಗೆರಗುವನು)

ಚಂಡಾಲ—(ಭಯದಿಂದ ಸರಿದು ನಿಂತು) ಏನು, ವಸಂತಸೇನೆ! ಸತ್ಪುರುಷನನ್ನು ನಾವು ಕೊಂದಾಗಲಿಲ್ಲವಲ್ಲ!

ಭಿಕ್ಷು—(ಎದ್ದು) ಓ, ಚಾರುದತ್ತನು ಬದುಕುವನೋ?

ಚಂಡಾಲ—ನೂರ್ಕಾಲ ಬದುಕುವನು.

ವಸಂತಸೇನೆ—ಮತ್ತೆ ಬದುಕಿದೆ.

ಚಂಡಾಲ—ಈ ಸುದ್ದಿಯನ್ನು ಯಜ್ಞಶಾಲೆಯಲ್ಲಿರುವ ರಾಜನಿಗೆ ಹೋಗಿ ಬಿನ್ನವಿಸೋಣ. (ಹೋಗುವರು)

ಶಕಾರ—(ವಸಂತಸೇನೆಯನ್ನು ನೋಡಿ, ಭಯದಿಂದ) ಆಶ್ಚರ್ಯ! ಈ ಗರ್ಭದಾಸಿಯನ್ನು ಬದುಕಿಸಿದವರಾರು? ನನ್ನ ಪ್ರಾಣಗಳೇ ಹೋಗುತ್ತಿವೆಯಲ್ಲಾ. ಇರಲಿ. ಓಡಿಬಿಡುವೆನು! (ಪಲಾಯನ ಮಾಡುವನು)

ಚಂಡಾಲ—(ಸಮೀಪಿಸಿ) ನಮಗೆ ರಾಜಾಜ್ಞೆ ಹೀಗೆ ಆಗಿದೆ— 'ಯಾರಿಂದ ಆಕೆ ಕೊಲೆಯಾದಳೋ ಅವನನ್ನು ಕೊಲ್ಲಿರಿ' ಎಂದು. ಆದ್ದರಿಂದ ರಾಜಶ್ಯಾಲನನ್ನೇ ಹುಡುಕೋಣ! (ನಿಷ್ಕ್ರಮಿಸುವರು)

ಚಾರುದತ್ತ—(ವಿಸ್ಮಯದಿಂದ)

ಶಸ್ತ್ರ ಪೊಯ್ಯಲೆತ್ತಿರೆ
ಮೃತ್ಯು ಮುಖದೊಳಾನಿರೆ
ಬರದೊಳಳಿವ ಸಸ್ಯಕೆ
ಹಿರಿಯ ಮೋಡವೆಂದೆನೆ
ಈಕೆ ಬಂದಳಾವಳು? ೩೯

(ನೋಡಿ)

ಎರಡನೇ ವಸಂತಸೇನೆಯೇನು ನೋಡಲೀಕೆಯು?
ಇಲ್ಲವಾಗಲಾ ವಸಂತಸೇನೆ ದಿವದಿನಿಳಿದಳೋ?
ಮನದ ಭ್ರಮೆಯಿನಿಂತಿದೆಲ್ಲ ತಾನೆ ಕಾಣುತಿರ್ಪುದೋ?
ಮೇಣ್ ವಸಂತಸೇನೆ ತಾನೆ ಸಾವನೈದಲಿಲ್ಲವೋ? ೪೦

ಅಥವಾ

ಮತ್ತೆ ಸಗ್ಗದಿನವಳೆ ಬಂದಳೊ
ನನ್ನ ಬದುಕಿಸುವಾಸೆಯಿಂ?
ಇಲ್ಲ ರೂಪವ ಹೋಲುವನ್ಯಳೊ
ಇಂತು ಬಂದಳದಾವಳೋ? ೪೧

ವಸಂತಸೇನೆ—(ಕಣ್ಣೀರು ಬಿಡುತ್ತ ಎದ್ದು ಕಾಲ್ಗೆರಗಿ) ಆರ್ಯ ಚಾರುದತ್ತ, ಯಾರ ದೆಸೆಯಿಂದ ಈ ಅನುಚಿತಾವಸ್ಥೆ ನಿನಗೆ ಬಂದಿತೋ ಆ ಪಾಪಿಯೇ ನಾನು.

(ನೇಪಥ್ಯದಲ್ಲಿ)

ಆಶ್ಚರ್ಯ, ಆಶ್ಚರ್ಯ! ವಸಂತಸೇನೆ ಬದುಕಿರುವಳು! (ಎಲ್ಲರೂ ಉದ್ಗರಿಸುವರು)

ಚಾರುದತ್ತ—(ಆಲಿಸಿ, ತಟ್ಟನೆ ಎದ್ದು, ಸ್ಪರ್ಶಸುಖದಿಂದ ಕಣ್ಣು ಮುಚ್ಚಿಕೊಂಡೇ ಹರ್ಷ ಗದ್ಗದಸ್ವರದಲ್ಲಿ) ಪ್ರಿಯೆ, ನೀನು ವಸಂತಸೇನೆಯೆ?

ವಸಂತಸೇನೆ—ನಾನೇ ಆ ಮಂದಭಾಗಿನಿ.

ಚಾರುದತ್ತ—(ನೋಡಿ ಹರ್ಷದಿಂದ) ಏನು ನಿಜವಾಗಿಯೂ ವಸಂತಸೇನೆಯೆ? (ಆನಂದದಿಂದ)

ಕಣ್ಣನೀರಿನ ಧಾರೆ ನೆನೆಸಲು
ನಿನ್ನ ಕುಚಗಳನೀಪರಿ;
ಮೃತ್ಯುವಶನಾದೆನ್ನ ಪಾರ್ಶ್ವಕೆ
ವಿದ್ಯೆಯೆಂದೆನೆ ಬಂದಿಹೆ.

ಪ್ರಿಯೆ, ವಸಂತಸೇನೆ,

ನಿನಗಾಗಿ ಬೀಳಲಿರ್ದೊಡಲಿದನು ಬಿಡಿಸಿರುವೆ
ನೀನೆ ಇಂದೈತಂದು ಪ್ರಾಣಕಾಂತೆ;
ಪ್ರಿಯಸಮಾಗಮಮಹಿಮೆಯೆನಿತೆಂಬೆ ನಾನಿನ್ನು
ಸತ್ತು ಮತ್ತುಳಿದವರು ಬುವಿಯೊಳಿಹರೆ?

ಮತ್ತು, ಪ್ರಿಯೆ, ನೋಡು—

ಇದೊ ಕೆಂಪಿನಾ ಬಟ್ಟೆಯಿದೊ ಮಾಲೆ ಕೊರಳೊಳಗೆ
ಶೋಭಿಪವು ಮದವಣಿಗನೆಂಬಂತೆ ನನಗೆ;
ಈ ವಧ್ಯಪಟಹಗಳ ವಾದ್ಯಘೋಷವು ಮತ್ತೆ
ಸಮವಹುದು ಲಗ್ನದಾ ವಾದ್ಯಕೆಂಬೆ. ೧೪

ವಸಂತಸೇನೆ—ಅತಿದಾಕ್ಷಿಣ್ಯದಿಂದ ನೀನು ಏನು ಮಾಡಲು ಹೊರಟಿದ್ದೆ!

ಚಾರುದತ್ತ—ಪ್ರಿಯೆ, ನೀನು ನನ್ನಿಂದ ಹತಳಾದೆಯೆಂದು—

ಪೂರ್ವಬದ್ಧ ವೈರನಾದ
ಶತ್ರು ಪ್ರಬಲನಾತನು;
ನರಕದಲ್ಲಿ ಬೀಳ್ವನೆನಲು
ಬೀಳಿಸಿದನು ನನ್ನನು. ೪೫

ವಸಂತಸೇನೆ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂ ಪಾಪಂ. ಆ ನೀಚ ರಾಜಶ್ಯಾಲನಿಂದಲೇ ನಾನು ಹತಳಾದುದು.

ಚಾರುದತ್ತ—(ಭಿಕ್ಷುವನ್ನು ನೋಡಿ) ಈತನು ಯಾರು?

ವಸಂತಸೇನೆ—ಆ ಅನಾರ್ಯನಿಂದ ಹತಳಾದೆ; ಈ ಆರ್ಯನಿಂದ ಮತ್ತೆ ಜೀವಿತೆಯಾದೆ.

ಚಾರುದತ್ತ—ಅಕಾರಣಬಂಧುವಾದ ನೀನಾರಪ್ಪಾ?

ಭಿಕ್ಷು—ಆರ್ಯನಿಗೆ ನನ್ನ ಗುರುತು ಸಿಕ್ಕಲಿಲ್ಲ. ಆರ್ಯನ ಕಾಲೊತ್ತುವ ಊಳಿಗದಲ್ಲಿದ್ದ ಸಂವಾಹಕನೇ ನಾನು. ಪಣಕ್ಕಾಗಿ ಜೂಜುಗಾರರಿಂದ ಹಿಡಿಯಲ್ಪಟ್ಟ ನನ್ನನ್ನು ಆರ್ಯನ ಪರಿಚಿತನೆಂಬ ಕಾರಣದಿಂದ ಈ ಉಪಾಸಕಳು ತನ್ನ ಹೊನ್ನಿನೊಡವೆಯನ್ನಿತ್ತು ಬಿಡಿಸಿದಳು. ಜೂಜಿನಲ್ಲೇ ಜಿಹಾಸೆ ಬಂದು ಬೌದ್ಧಭಿಕ್ಷುವಾಗಿದ್ದೇನೆ. ಈ ಪೂಜ್ಯಳ ರಥ ಬದಲಾಗಿ ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ

ಹೋದಾಗ ಆ ಅನಾರ್ಯನು 'ನನ್ನನ್ನು ಮೆಚ್ಚುವುದಿಲ್ಲ' ವೆನ್ನುತ್ತಾ ಇವಳ ಕತ್ತನ್ನು ಕಿವಿಚಿದನು. ಮುಂದೆ ನಾನು ಕಂಡೆನು.

(ನೇಪಥ್ಯದಲ್ಲಿ ಕೋಲಾಹಲ)

ಜಯ ಜಯ ಶಂಕರ ವೃಷಭಧ್ವಜನೆ,
ದಕ್ಷನ ಯಜ್ಞವಿನಾಶಕನೆ ;
ಜಯ ಜಯ ಷಣ್ಮುಖ ಶತ್ರುನಿಷೂದನ,
ಕ್ರೌಂಚಾಚಲಸಂಚೂರ್ಣಕನೆ ;
ಜಯ ಜಯ ಆರ್ಯಕ, ವೈರಿವಿನಾಶಕ,
ಕೈಲಾಸಾಚಲ ಕೇತುವೆನಿಪ್ಪಾ
ಪೃಥ್ವಿಯನೆಲ್ಲವ ಗೆಲಿದವನೆ !
ನೀನೇ ಸಲಹುಜ್ಜಯಿನಿಯನು ! ೪೬

(ತಟ್ಟನೆ ಪ್ರವೇಶಿಸಿ)

ಶರ್ವಿಲಕ—

ನಾನೆ ಕೊಂದು ಕುನೃಪನಾದ ಪಾಲಕಾಖ್ಯನನ್ನು,
ಅವನ ರಾಜ್ಯದಲ್ಲಿ ಬೇಗ ಪಟ್ಟಗಟ್ಟುತಾರ್ಯಕಂ-
ಗವನ ಆಜ್ಞೆಯನ್ನು ಶಿರದೊಳಾಂತು ಮುದದೆ ಮಿಕ್ಕುದಂ
ಗೈವೆ ಚಾರುದತ್ತನನ್ನು ದುಃಖದಿಂದೆ ಬಿಡಿಸುವೆಂ. ೪೭
ಕೊಂದು ಸೈನ್ಯ ಮಂತ್ರಹೀನಾದ ಪಗೆಯನಾತನಂ
ಪೌರರನ್ನು ತುಷ್ಟರೆನಿಸಿ ಮತ್ಪ್ರಭಾವದಿಂದೆ
ಈ ಸಮಸ್ತ ಶತ್ರುರಾಜ್ಯವೆಲ್ಲ ಪ್ರಾಪ್ತವಾದುದು
ಆ ಮಹೇಂದ್ರಗಸುರರಾಜ್ಯವಂದು ತಾನೆ ದೊರೆತವೋಲ್. ೪೮

(ಮುಂದೆ ನೋಡಿ) ಇರಲಿ. ಈ ಜನಗಳ ಗುಂಪಿರುವೆಡೆಯಲ್ಲಿಯೇ ಆತನಿರಬೇಕು. ಆರ್ಯಕ ಮಹಾರಾಜನ ಶಾಸನಾರಂಭವು ಚಾರುದತ್ತನ ಪ್ರಾಣರಕ್ಷಣೆಯಿಂದ ಸಫಲವಾದೀತೆ! (ಬೇಗ ಬೇಗ ಸಮೀಪಿಸಿ) ನೀಚರೇ, ತೊಲಗಿರಿ! (ನೋಡಿ, ಹರ್ಷದಿಂದ) ಓ, ವಸಂತಸೇನೆಯೊಂದಿಗೆ ಚಾರುದತ್ತನು ಬದುಕಿರುವನಲ್ಲ! ನಮ್ಮೊಡೆಯನ ಮನೋರಥಗಳೆಲ್ಲ ಸಂಪೂರ್ಣವಾದುವು.

ಭಾಗ್ಯವೇ ಸರಿ ! ಪಾರವಿಲ್ಲದ ದುಃಖಸಾಗರವನ್ನಹಾ
ದಾಂಟಿದೀತನು ಸುಗುಣಶೀಲೆ ವಸಂತಸೇನೆಯ ಯತ್ನದಿಂ ;
ನಾವೆಯಿಂದೆನೆ ಕಾಂತೆಯಿಂದೊಡಗೂಡಿ ಶೋಭಿಪನ್ನೈಸಲೆ
ಗ್ರಹಣನಿರ್ಮುಕ್ತೇಂದುವೆಂದನೆ ಜೊನ್ನದಿಂದೊಡಗೂಡಿರಲ್.

ಇವನಿಗೆ ಹಾಗೆ ಕೆಡುಕನ್ನು ಮಾಡಿದ ನಾನು ಹೇಗೆ ತಾನೆ ಈಗ ಸಮೀಪಿಸಲಿ? ಅಥವಾ ಎಲ್ಲಿಯೋ ಆದರೂ ನೇರವಾಗಿರುವುದು ಲೇಸು. (ಪ್ರಕಾಶ ; ಸಮೀಪಿಸಿ, ಕೈ ಮುಗಿದುಕೊಂಡು) ಆರ್ಯ ಚಾರುದತ್ತ!

ಚಾರುದತ್ತ—ನೀನು ಯಾರಪ್ಪಾ !

ಶರ್ವಿಲಕ—

ನಿನ್ನ ಮನೆಯನು ಕೊರೆದು ನಿನ್ನಯ
ನ್ಯಾಸದೊಡವೆಯ ಕದ್ದವಂ ;
ಘೋರ ಪಾತಕಿ ನಾನೆ ಬಂದಿಹೆ
ನಿನ್ನ ಶರಣವ ಕೋರತೆ. ೫೦

ಚಾರುದತ್ತ—ಮಿತ್ರನೆ, ಹಾಗಲ್ಲ. ಅದು ನೀನು ಮಾಡಿದ ಉಪಕಾರ. (ಕಂಠವನ್ನಾಲಿಂಗಿಸುವನು)

ಶರ್ವಿಲಕ—ಮತ್ತು—

ಕುಲದ ಮಾನವ ಪೊರೆದ ಸುಪುರುಷ-
ನಾರ್ಯವೃತ್ತನು ಆರ್ಯಕ ;
ಯಜ್ಞಶಾಲೆಯೊಳಧಮ ಪಾಲಕ
ನನ್ನು ಕೊಂದನು ಪಶುವೆನಲ್. ೫೧

ಚಾರುದತ್ತ—ಏನು ?

ಶರ್ವಿಲಕ—

ನಿನ್ನ ರಥವನೇರುತಾರು
ನಿನಗೆ ಶರಣು ಬಂದನೋ
ಅವನೆ ಕೊಂದನಿಂದು ಯಜ್ಞ
ಪಶುವಿನಂತೆ ದೊರೆಯನು.

ಚಾರುದತ್ತ—ಶರ್ವಿಲಕ, ಅವನೇ ತಾನೆ, ಆರ್ಯಕನೆಂದರೆ; ಪಾಲಕನಿಂದ ನಿಷ್ಕಾರಣವಾಗಿ ಗೊಲ್ಲಹಳ್ಳಿಯಿಂದ ತರಿಸಿ ಸೆರೆಯಲ್ಲಿಡಿಸಲ್ಪಟ್ಟದ್ದವನು; ನಿನ್ನಿಂದ ಆಮೇಲೆ ಬಿಡಿಸಲ್ಪಟ್ಟವನು.

ಶರ್ವಿಲಕ—ಹೌದು, ನೀನು ಹೇಳಿದವನೇ.

ಚಾರುದತ್ತ—ಸಂತೋಷ, ನನಗೆ ಬಹಳ ಸಂತೋಷ!

ಶರ್ವಿಲಕ—ಉಜ್ಜಯಿನಿಯ ಪಟ್ಟವನ್ನೇರಿದೊಡನೆಯೇ ನಿನ್ನ ಮಿತ್ರನಾದ ಆರ್ಯಕನು ನಿನಗೆ ವೇಣಾನದಿಯ ತೀರದ ಕುಶಾವತೀ ರಾಜ್ಯವನ್ನು ಇತ್ತಿರುವನು. ಮಿತ್ರನ ಮೊದಲನೆಯ ಪ್ರೇಮವನ್ನು ಸ್ವೀಕರಿಸಬೇಕು. (ಅತ್ತ ತಿರುಗಿ) ಅರೇ, ರೇ, ಆ ಪಾಪಿ ರಾಜಶ್ಯಾಲನನ್ನು ಹಿಡಿದು ತನ್ನಿರಿ.

(ನೇಪಥ್ಯದಲ್ಲಿ)

'ಶರ್ವಿಲಕನ ಅಪ್ಪಣೆ.'

ಶರ್ವಿಲಕ—ಆರ್ಯ, ಆರ್ಯಕ ರಾಜನು ಮತ್ತೂ ವಿಜ್ಞಾಪಿಸುತ್ತಾನೆ—'ನಿನ್ನ ಸದ್ಗುಣದಿಂದ ನನಗೆ ಈ ರಾಜ್ಯ ಲಭಿಸಿದೆ. ಆದ್ದರಿಂದ ಇದು ನಿನ್ನ ಉಪಯೋಗಕ್ಕೇ ಸಲ್ಲಲಿ' ಎಂದು.

ಚಾರುದತ್ತ—ಏನು, ನನ್ನ ಸದ್ಗುಣದಿಂದ ರಾಜ್ಯ ಲಭಿಸಿದೆಯೆ?

(ನೇಪಥ್ಯದಲ್ಲಿ)

'ಅರೇ, ರೇ, ರಾಜಶ್ಯಾಲ, ಬಾ, ಬಾ! ನಿನ್ನ ಅಪರಾಧದ ಫಲವನ್ನು ಅನುಭವಿಸು.'

(ಆಳುಗಳೊಡನೆ ಹಿಂಗಟ್ಟು ಮುರಿಕಟ್ಟಿಸಿಕೊಂಡ ಶಕಾರನ ಪ್ರವೇಶ)

ಶಕಾರ—ಆಶ್ಚರ್ಯ!

ಹಗ್ಗ ಕಿತ್ತ ಕತ್ತೆಯಂತೆ
ಅಷ್ಟುದೂರ ಓಡಿದೆ;
ಮತ್ತೆ ಕಟ್ಟಿ ತಂದರೆನ್ನ
ಕೆಟ್ಟ ಕುನ್ನಿಯಂದದೆ. ೫೨

(ದಿಕ್ಕು ದಿಕ್ಕಿಗೆ ನೋಡಿ) ಎಲ್ಲ ಕಡೆಗಳಲ್ಲೂ ಇವರು ರಾಜಶ್ಯಾಲನನ್ನು ಸುತ್ತಿಬಿಟ್ಟಿದ್ದಾರೆ. ಈಗ ಯಾರಿಗೆ ಶರಣಾಗತನಾಗಲಿ? (ಆಲೋಚಿಸಿ)

ಇರಲಿ. ಬಂದ ಶರಣಾಗತರನ್ನೆಲ್ಲ ಸಂರಕ್ಷಿಸುವ ಈತನನ್ನೇ ಮರೆ ಹೋಗುವೆನು. (ಸಮೀಪಿಸಿ) ಆರ್ಯ ಚಾರುದತ್ತ, ಕಾಪಾಡು, ಕಾಪಾಡು. (ಕಾಲಿಗೆರಗುವನು)

(ನೇಪಥ್ಯದಲ್ಲಿ)

ಆರ್ಯ ಚಾರುದತ್ತ, ಬಿಡು ಬಿಡು. ಇವನನ್ನು ನಾವು ಕೊಲ್ಲುವೆವು.

ಶಕಾರ—(ಚಾರುದತ್ತನನ್ನು ಕುರಿತು) ಅನಾಥರಕ್ಷಕನೇ, ಕಾಪಾಡು.

ಚಾರುದತ್ತ—(ಅನುಕಂಪೆಯಿಂದ) ಅಭಯವಿತ್ತಿದ್ದೇನೆ. ಶರಣಾಗತನಿಗೆ ಅಭಯವಿತ್ತಿದ್ದೇನೆ.

ಶರ್ವಿಲಕ—(ಆವೇಗದಿಂದ) ಏ, ಇವನನ್ನು ಚಾರುದತ್ತನ ಪಕ್ಕದಿಂದ ಆಚೆಗೆ ಎಳೆದುಕೊಂಡು ಹೋಗಿರಿ. (ಚಾರುದತ್ತನನ್ನು ಕುರಿತು) ಈ ಪಾಪಿಗೆ ಏನು ಶಿಕ್ಷೆ ಕೊಡೋಣವೆಂದು ತಿಳಿಸು.

ಕಟ್ಟಿದಿವನನೆಳೆಸಲೋ ?
ಕುನ್ನಿ ತಿನ್ನಲಿರಿಸಲೋ ?
ಶೂಲಕೊಡನೆ ನಿಲಿಸಲೋ ?
ಗರಗಸಕ್ಕೆ ಹರಿಸಲೋ ? ೫೪

ಚಾರುದತ್ತ—ನಾನು ಹೇಳುವುದನ್ನು ಮಾಡುವಿರೇನು ?

ಶರ್ವಿಲಕ—ಸಂಶಯವೇಕೆ ?

ಶಕಾರ—ಪ್ರಭೋ, ಚಾರುದತ್ತ, ಶರಣಾಗತನಾಗಿದ್ದೇನೆ. ಆದ್ದರಿಂದ ಕಾಪಾಡು, ಕಾಪಾಡು. ನಿನಗೆ ಯೋಗ್ಯವಾದುದನ್ನು ಮಾಡು. ನಾನು ಮತ್ತೆ ಹೀಗೆ ಮಾಡುವುದಿಲ್ಲ.

(ನೇಪಥ್ಯದಲ್ಲಿ ಪೌರರ ಗುಜುಗುಜು)

'ಕೊಲ್ಲಿರಿ. ಪಾತಕಿಯನ್ನು ಉಳಿಸುವುದೇಕೆ ?'

(ವಸಂತಸೇನೆ ಚಾರುದತ್ತನ ಕೊರಳಿನಿಂದ ವಧ್ಯಮಾಲೆಯನ್ನು ತೆಗೆದು ಶಕಾರನ ಮೇಲೆ ಎಸೆಯುವಳು)

ಶಕಾರ—ಗರ್ಭದಾಸೀಪುತ್ರಿ, ಪ್ರಸನ್ನಳಾಗು, ಪ್ರಸನ್ನಳಾಗು. ಮತ್ತೆ ನಾನು ಸಾಯಿಸುವುದಿಲ್ಲ. ಆದುದರಿಂದ ಕಾಪಾಡು.

ಶರ್ವಿಲಕ—ಅರೇ, ರೇ, ಇವನನ್ನು ಕರೆದೊಯ್ಯಿರಿ! ಆರ್ಯ ಚಾರುದತ್ತ

ಆಜ್ಞಾಪಿಸು—ಈ ಪಾಪಿಗೆ ಏನು ಶಿಕ್ಷೆ ಕೊಡೋಣ?

ಚಾರುದತ್ತ—ನಾನು ಹೇಳುವದನ್ನೇ ಮಾಡುವಿರೋ?

ಶರ್ವಿಲಕ—ಸಂಶಯವೇಕೆ?

ಚಾರುದತ್ತ—ಸತ್ಯವೋ?

ಶರ್ವಿಲಕ—ಸತ್ಯ!

ಚಾರುದತ್ತ—ಹಾಗಾದರೆ ಇವನನ್ನು ಬೇಗನೆ....

ಶರ್ವಿಲಕ—ಕೊಂದುಬಿಡೋಣವೋ?

ಚಾರುದತ್ತ—ಇಲ್ಲ, ಇಲ್ಲ, ಬಿಟ್ಟು ಬಿಡಿ.

ಶರ್ವಿಲಕ—ಏಕೆ?

ಚಾರುದತ್ತ—

ತಪ್ಪುಗೈದ ವೈರಿಯಿರಲಿ
ಶರಣುಬಂದು ಕಾಲಿಗೆರಗೆ
ಶಸ್ತ್ರಘಾತ ಸಲ್ಲದೆನಲು....

ಶರ್ವಿಲಕ—ಸರಿಯೆ. ಹಾಗಾದರೆ ಕುನ್ನಿಗಳು ತಿನ್ನಲಿ!

ಚಾರುದತ್ತ—ಬೇಡ—

ಸುಕೃತಿಘಾತ ಯುಕ್ತವು ೫೫

ಶರ್ವಿಲಕ—ಅಹಾ, ಆಶ್ಚರ್ಯ. ಏನು ಮಾಡಲಿ? ಅಪ್ಪಣೆ ಮಾಡು.

ಚಾರುದತ್ತ—ಬಿಟ್ಟು ಬಿಡು.

ಶರ್ವಿಲಕ—ಬಿಟ್ಟುಬಿಡಿರಿ!

ಶಕಾರ—ಆಶ್ಚರ್ಯ. ಉಳಿದುಕೊಂಡೆ! (ಆಳುಗಳೊಡನೆ ನಿಷ್ಕ್ರಮ)

(ನೇಪಥ್ಯದಲ್ಲಿ ಕಲಕಲ)

(ಮತ್ತೆ ನೇಪಥ್ಯದಲ್ಲಿ)

'ಅಯ್ಯೋ! ಚಾರದತ್ತನ ಪತ್ನಿ ಧೂತಾದೇವಿ ಕಾಲಿಗೂ ಸೆರೆಗಿಗೂ ಅಂಟಿಕೊಳ್ಳುತ್ತಿರುವ ಮಗುವನ್ನೂ ತಳ್ಳಿ ಉರಿಯುವ ಬೆಂಕಿಯಲ್ಲಿ ಬೀಳುತ್ತಿದ್ದಾಳೆ!'

ಶರ್ವಿಲಕ—(ಆಲಿಸಿ, ನೇಪಥ್ಯದ ಕಡೆ ತಿರುಗಿ) ಏನು, ಚಂದನಕನೆ? ಚಂದನಕ, ಇದೇನು?

ಚಂದನಕ—(ಪ್ರವೇಶಿಸಿ) ಆರ್ಯನಿಗೆ ಕಾಣದೆ? ಮಹಾರಾಜನ ಅರಮನೆಯ ದಕ್ಷಿಣಕ್ಕೆ ದೊಡ್ಡ ಜನರ ಗುಂಪು ಸೇರಿದೆ. ('ಅಯ್ಯೋ! ಚಾರುದತ್ತನ ಪತ್ನಿ.....' ಎಂಬ ವಾಕ್ಯವನ್ನು ಮತ್ತೆ ಹೇಳುವನು) ಆಕೆಗೆ ಸಾಹಸ ಮಾಡಬೇಡ. ಆರ್ಯ ಚಾರುದತ್ತನು ಜೀವದಿಂದಿದ್ದಾನೆ; ಎಂದು ; ಆದರೆ ದುಃಖದಲ್ಲಿ ಮುಳುಗಿರುವಾಗ ಕೇಳುವುದೆಲ್ಲಿ? ನಂಬುವುದೆಲ್ಲಿ?

ಚಾರುದತ್ತ—(ಉದ್ವಿಗ್ನನಾಗಿ) ಹಾ ಪ್ರಿಯೆ, ನಾನು ಬದುಕಿದ್ದರೂ, ಇದೇನು ಮಾಡಲು ಹೊರಟಿರುವೆ? (ಮೇಲೆ ನೋಡಿ; ನಿಟ್ಟುಸಿರು ಬಿಡುತ್ತ)

ನಿನ್ನ ಸುಕೃತಕೆ ಬುವಿಯು ಸಲ್ಲದು
ಚಾರುಶೀಲೆಯೆ! ಆದೊಡಂ;
ನಾಕಸುಖವದು ಪತಿಯನಗಲಿರ-
ಲಂತೆ ಸಲ್ಲ ಪತಿವ್ರತೇ. ೫೭

(ಮೂರ್ಛೆ ಹೋಗುವನು)

ಶರ್ವಿಲಕ—ಅಯ್ಯೋ, ಪ್ರಮಾದ!

ಅತ್ತ ಬೇಗನೆ ಪೋಗಬೇಕೆನ-
ಲಿತ್ತ ಮೂರ್ಛಿತನಾರ್ಯನು;
ಅಕಟ, ಯತ್ನಗಳೆಲ್ಲ ವಿಫಲವೆ-
ಯೆಲ್ಲ ದೆಸೆಯಿಂದೆನಿಪುದು. ೫೭

ವಸಂತಸೇನೆ—ಆರ್ಯನು ಚೇತರಿಸಿಕೊಳ್ಳಬೇಕು. ಅಲ್ಲಿ ಹೋಗಿ ಪೂಜ್ಯಳನ್ನು ಬದುಕಿಸಬೇಕು. ಇಲ್ಲದಿದ್ದರೆ ಅಧೀರತೆಯಿಂದ ಅನರ್ಥವಾದೀತು!

ಚಾರುದತ್ತ—(ಚೇತರಿಸಿಕೊಂಡು ತಟ್ಟನೆ ಎದ್ದು) ಹಾ ಪ್ರಿಯೆ, ಎಲ್ಲಿರುವೆ! ಮರುಮಾತು ಕೊಡು.

ಚಂದನಕ—ಆರ್ಯನು ಇತ್ತ ಬರಬೇಕು.

(ಎಲ್ಲರೂ ನಡೆಯುವರು)

(ಅನಂತರ ಮೊದಲು ಹೇಳಿದಂತೆ ಧೂತಾದೇವಿ, ಅವಳ ಸೆರಗನ್ನೆಳೆಯುತ್ತಿರುವ ರೋಹಸೇನ, ವಿದೂಷಕ ಮತ್ತು ರದನಿಕೆ, ಇವರ ಪ್ರವೇಶ)

ಧೂತಾದೇವಿ—(ಅಳುತ್ತ) ಮಗು, ನನ್ನನ್ನು ಬಿಡು. ಅಡ್ಡಿ ಮಾಡಬೇಡ. ಪತಿಯ ಅಶುಭವಾರ್ತೆಯನ್ನೆಲ್ಲಿ ಕೇಳಿಬಿಡುವೆನೋ ಎಂದು ಭೀತಳಾಗಿರುವೆ.

ರೋಹಸೇನ—ತಾಯೆ, ಅಮ್ಮಾ, ನನ್ನನ್ನು ನೋಡಿಕೊ. ನೀನಿಲ್ಲದೆ ನಾನು ಜೀವದಿಂದಿರಲಾರೆ. (ಓಡಿಬಂದು ಮತ್ತೆ ಸೆರಗನ್ನು ಹಿಡಿಯುವನು)

ವಿದೂಷಕ—ಬ್ರಾಹ್ಮಣ ಪತ್ನಿಯಾದ ನೀನು ಪ್ರತ್ಯೇಕವಾಗಿ ಚಿತೆಯನ್ನೇರುವುದು ಪಾಪವೆಂದು ಋಷಿಗಳು ನುಡಿದಿದ್ದಾರೆ!

ಧೂತಾದೇವಿ—ಪಾಪಾಚರಣೆಯೇ ಲೇಸು, ಪತಿಯ ಅಶುಭವನ್ನು ಕೇಳುವುದಕ್ಕಿಂತಲೂ!

ಶರ್ವಿಲಕ—(ಮುಂದೆ ನೋಡಿ)—ಪೂಜ್ಯಳು ಬೆಂಕಿಯ ಹತ್ತಿರ ಸೇರಿದ್ದಾಳೆ. ತ್ವರೆ ಮಾಡಿರಿ! ತ್ವರೆ ಮಾಡಿರಿ!

(ಚಾರುದತ್ತನು ಬೇಗ ನಡೆಯುವನು)

ಧೂತಾದೇವಿ—ರದನಿಕೆ, ಮಗುವನ್ನು ಹಿಡಿದುಕೊ. ನಾನು ಇಷ್ಟಾರ್ಥವನ್ನು ಈಡೇರಿಸಿಕೊಳ್ಳುವೆನು.

ಚೇಟಿ—(ಶೋಕದಿಂದ)ನಾನಂತೂ ಒಡತಿಯಿಂದ ಕಲಿತಂತೆ ನಡೆಯುವವಳೇ.

ಧೂತಾದೇವಿ—(ವಿದೂಷಕನನ್ನು ನೋಡಿ) ಆರ್ಯನು (ಮಗುವನ್ನು) ನೋಡಿಕೊಳ್ಳಬೇಕು:

ವಿದೂಷಕ—(ಆವೇಗದಿಂದ) ಇಷ್ಟಾರ್ಥಸಿದ್ಧಿಗೆ ಹೊರಡುವಾಗ ಬ್ರಾಹ್ಮಣನನ್ನು ಮುಂದೆ ಮಾಡಿಕೊಳ್ಳಬೇಕು. ಆದ್ದರಿಂದ ನಾನು ನಿನಗಿಂತ ಮುಂದಾಗುವೆನು!

ಧೂತಾದೇವಿ—ಏನು, ಇಬ್ಬರೂ ಒಪ್ಪಿಕೊಳ್ಳಲಿಲ್ಲವೇ! (ಮಗುವನ್ನಪ್ಪಿಕೊಂಡು ಮಗು, ನೀನೇ ಮನಸ್ಸನ್ನು ಸಮಾಧಾನ ಮಾಡಿಕೊಂಡು ನಮಗೆ ತಿಲಾಂಜಲಿ ಕೊಡಬೇಕಪ್ಪಾ. ಮಿಂಚಿ ಹೋದುದಕ್ಕೆ ಚಿಂತಿಸಿ ಫಲವೇನು? (ನಿಟ್ಟುಸಿರು ಬಿಡುತ್ತ) ಪತಿಯಂತೂ ನಿನ್ನನ್ನೂ ಸಮಾಧಾನ ಮಾಡಲು ಬರುವುದಿಲ್ಲ!

ಚಾರುದತ್ತ—(ಕೇಳಿ, ತಟ್ಟನೆ ಬಂದು) ನಾನೇ ಬಾಲಕನನ್ನು ಸಮಾಧಾನ

ಮಾಡುವೆನು (ಮಗುವನ್ನು ತೋಳ್ಗಳಿಂದೆತ್ತಿಕೊಂಡು ಎದೆಯಿಂದಪ್ಪುವನು)

ಧೂತಾದೇವಿ—(ನೋಡಿ) ಆಶ್ಚರ್ಯ. ಪತಿಯ ದನಿಯಂತಿದೆ. (ಮತ್ತೆ ಸರಿಯಾಗಿ ನೋಡಿ ಆನಂದದಿಂದ) ಭಾಗ್ಯವೇ ಸರಿ! ಪತಿಯೇ ಇವನು! ಸಂತೋಷ, ಸಂತೋಷ!

ರೋಹಸೇನ—(ನೋಡಿ, ಸಂತೋಷದಿಂದ) ಆಶ್ಚರ್ಯ. ತಂದೆಯೇ ನನ್ನನ್ನು ಅಪ್ಪಿಕೊಳ್ಳುತ್ತಿದ್ದಾನೆ! (ಧೂತಾದೇವಿಯನ್ನು ಕುರಿತು) ತಾಯೆ, ನೀನು ಭಾಗ್ಯವಂತೆ. ತಂದೆಯೇ ನನ್ನನ್ನು ಸಮಾಧಾನ ಮಾಡುತ್ತಿರುವನು. (ಪ್ರತಿಯಾಗಿ ಅಪ್ಪುವನು).

ಚಾರುದತ್ತ—(ಧೂತಾದೇವಿಯನ್ನು ಕುರಿತು)

ಪ್ರಿಯತಮೆ, ಪ್ರಿಯತಮನುಳಿದಿರುವಾಗಲೆ
ದಾರುಣಕಾರ್ಯಕೆ ತೊಡಗುವರೆ?
ಸೂರ್ಯನು ಮುಳುಗುವ ಮುನ್ನವೆ ಕಮಲಿನಿ
ನೇತ್ರನಿಮೀಲನಗೈಯುವಳೆ? ೫೮

ಧೂತಾದೇವಿ—ಆರ್ಯಪುತ್ರ, ಅದರಿಂದಲೇ ಕಮಲಿನಿಯನ್ನು ಅಚೇತನವೆನ್ನುವುದು!

ವಿದೂಷಕ—(ನೋಡಿ ಹರ್ಷದಿಂದ) ಆಶ್ಚರ್ಯ! ಈ ಕಣ್ಣುಗಳಿಂದಲೇ ಪ್ರಿಯಮಿತ್ರನನ್ನು ಕಾಣುತ್ತಿರುವೆ! ಅಬ್ಬಾ, ಪತಿವ್ರತೆಯ ಪ್ರಭಾವ ಎಷ್ಟು! ಅಗ್ನಿಪ್ರವೇಶದ ಪ್ರಯತ್ನದಿಂದಲೇ ಪ್ರಿಯ ಸಮಾಗಮ ಪ್ರಾಪ್ತವಾಯಿತು.

ಚಾರುದತ್ತ—ಬಾ, ಮೈತ್ರೇಯ! (ಆಲಿಂಗಿಸುವನು)

ಚೇಟಿ—ಏನು ಸಂವಿಧಾನ! ಆರ್ಯನೆ, ನಮಸ್ಕರಿಸುವೆನು. (ಚಾರುದತ್ತನ ಕಾಲಿಗೆರಗುವಳು)

ಚಾರುದತ್ತ—(ಬೆನ್ನಮೇಲೆ ಕೈಯಿಟ್ಟು) ರದನಿಕೆ, ಎದ್ದೇಳು. (ಎಬ್ಬಿಸುವನು)

ಧೂತಾದೇವಿ—(ವಸಂತಸೇನೆಯನ್ನು ನೋಡಿ) ಅದೃಷ್ಟದಿಂದ ತಂಗಿಯೂ ಕುಶಲದಿಂದಿರುವಳು!

ವಸಂತಸೇನೆ—ಈಗ ಕುಶಲ ಲಭಿಸಿದವಳಾಗಿರುವೆ!

(ಇಬ್ಬರೂ ಪರಸ್ಪರ ಆಲಿಂಗಿಸುವರು)

ಶರ್ವಿಲಕ—ಅದೃಷ್ಟವಶಾತ್ ಆರ್ಯನ ಮಿತ್ರವರ್ಗವೆಲ್ಲ ಬದುಕಿದಂತಾಯಿತು.

ಚಾರುದತ್ತ—ನಿನ್ನ ಅನುಗ್ರಹದಿಂದ.

ಶರ್ವಿಲಕ—ಆರ್ಯೆ, ವಸಂತಸೇನೆ, ಪರಿತುಷ್ಟನಾದ ರಾಜನು ನಿನಗೆ 'ಕುಲವಧು' ಎಂಬ ಪದವಿಯನ್ನಿತ್ತು ಅನುಗ್ರಹಿಸಿರುವನು!

ವಸಂತಸೇನೆ—ಆರ್ಯ, ಕೃತಾರ್ಥಳಾದೆ!

ಶರ್ವಿಲಕ—(ವಸಂತಸೇನೆಗೆ ಅವಗುಂಠನ ಹಾಕಿ ಚಾರುದತ್ತನ ಕಡೆಗೆ ತಿರುಗಿ) ಆರ್ಯ, ಈ ಭಿಕ್ಷುವಿಗೆ ಏನು ಮಾಡೋಣ?

ಚಾರುದತ್ತ—ಭಿಕ್ಷುವೆ? ನಿನ್ನ ಅಭೀಷ್ಟವೇನು?

ಭಿಕ್ಷು—ಈ ಪರಿ ಅನಿತ್ಯತ್ವವನ್ನು ನೋಡಿ ನನ್ನ ವೈರಾಗ್ಯ ದ್ವಿಗುಣತರವಾಗಿದೆ.

ಚಾರುದತ್ತ—ಮಿತ್ರನೆ, ಇವನ ನಿಶ್ಚಯ ದೃಢವಾದುದು! ರಾಜ್ಯದಲ್ಲಿರುವ ವಿಹಾರಗಳಿಗೆಲ್ಲ ಇವನನ್ನು ಕುಲಪತಿಯನ್ನಾಗಿ ಮಾಡು.

ಶರ್ವಿಲಕ—ಆರ್ಯನೆಂದಂತಾಗಲಿ!

ಭಿಕ್ಷು—ನನಗೆ ಸಂತೋಷ, ಸಂತೋಷ!

ವಸಂತಸೇನೆ—ಈಗ ನಿಜವಾಗಿ ಬದುಕಿದವಳಾದೆ!

ಶರ್ವಿಲಕ—ಸ್ಥಾವರಕನಿಗೆ ಏನು ಮಾಡೋಣ?

ಚಾರುದತ್ತ—ಸುಚರಿತ್ರನಾದ ಅವನ ದಾಸ್ಯವನ್ನು ನೀಗಿಸು. ಆ ಚಂಡಾಲರು ಸರ್ವಚಂಡಾಲರಿಗೂ ಅಧಿಪತಿಗಳಾಗಲಿ! ಚಂದನಕನು ರಾಜ್ಯದ ದಂಡಪಾಲಕನಾಗಲಿ! ಆ ರಾಜಶ್ಯಾಲನಿಗೆ ಹಿಂದೆ ಇದ್ದ ಸ್ಥಾನವೇ ಈಗಲೂ ಉಳಿದಿರಲಿ!

ಶರ್ವಿಲಕ—ನೀನು ಹೇಳಿದ್ದೆಲ್ಲವೂ ಆಗಲಿ. ಆದರೆ ಇವನನ್ನು ಬಿಡು, ಬಿಡು. ಕೊಲ್ಲುವೆನು.

ಚಾರುದತ್ತ—ಶರಣಾಗತನಿಗೆ ಅಭಯವಾಗಲಿ! ('ತಪ್ಪುಗೈದ ವೈರಿ....' (ಪದ್ಯ ೫೫) ಎಂಬ ಪದ್ಯವನ್ನು ಪುನರುಚ್ಚರಿಸುನು.)

ಶರ್ವಿಲಕ—ಹಾಗಾದರೆ ಹೇಳು. ನಿನಗೆ ಇನ್ನಾವ ಪ್ರಿಯವನ್ನು ಮಾಡಲಿ!

ಚಾರುದತ್ತ—ಇದಕ್ಕಿಂತಲೂ ಬೇರೆ ಪ್ರಿಯವುಂಟೆ?

ಶುದ್ಧಂ ಚಾರಿತ್ರಮೀಗಳ್ ಚರಣನಿಪತಿತಂ ವೈರಿಯುಂ ಮತ್ತೆ ಮುಕ್ತಂ
ಉತ್ಖಾತಾರಾತಿಮೂಲಂ ಮಮ ಸಖನೆ ಮಹೀಪಾಲಕಂ ಆರ್ಯಕಂ ತಾಂ
ಪ್ರಾಪ್ತಳ್ ಮತ್ಕಾಂತೆ ಮತ್ತಂ, ಪ್ರಿಯಸಖನೆನೆ ನೀಂ, ಸಂಗತಂ ಮೇಣ್ ವಯಸ್ಯಂ
ಲಭ್ಯಂ ಮತ್ತಾವುದಿರ್ಕುಂ ನಿನಗುಸಿರಲಹಾ ಪ್ರಾರ್ಥಿಸಲ್ ಮೇಣಭೀಷ್ಟಂ
ಕೆಲರಂ ದೂಷಿಸಿ ತುಂಬಿಸುತ್ತೆ ಕೆಲರಂ ಮೇಲ್ತಂದು ಮತ್ತನ್ಯರಂ
ಕೆಲರಂ ಬೀಳಿಸುತಂತೆ ಮತ್ತೆ ಕೆಲರಂ ಕೂಗಾಡಿಸುತ್ತುಂ ವಲಂ
ಸಲೆಯನ್ಯೋನ್ಯ ಮೆನಿಪ್ಪಲೋಕಗತಿಯಂ ಲೋಕಕ್ಕಣಂ ಸೂಚಿಸಂ-
ತಿಳಿಯೊಳ್ ಕ್ರೀಡಿಪುದಲ್ತೆ ಕೂಪಘಟದಾ ಯಂತ್ರೋಪಮಂ ದೈವಮೇ ೬೦

ಆದರೂ ಇದನ್ನು ಹಾರೈಸುವೆನು

(ಭರತವಾಕ್ಯ)

ಪಾಲಂ ಗೋವೀಯಲೆತ್ತಂ, ಧರಣಿಯೊಳಿರಲಿಂ ಸರ್ವಸಂಪನ್ನಸಸ್ಯಂ
ಪರ್ಜನ್ಯಂ ಕಾಲವರ್ಷಾಕರನೆನೆ ಸುಜನಾಹ್ಲಾದಕಂ ತಾಂ ಸಮೀರಂ
ಮೋದಂ ಜಂತೂತ್ಕರಕ್ಕಂ ನೆಲಸುಗೆ ಬರಲಿಂ ಗೌರವಂ ಬ್ರಾಹ್ಮಣರ್ಗಂ
ಭೂಪರ್ ಶ್ರೀಯುಕ್ತರೆಂದುಂ ಜಿತರಿಪುಗಳಿನಲ್ ಪೃಥ್ವಿಯಂ ಕಾಯ್ಗೆ ನಿಚ್ಚಂ

(ಎಲ್ಲರೂ ನಿಷ್ಕ್ರಮಿಸುವರು)

ಇಲ್ಲಿಗೆ 'ಉಪಸಂಹಾರ' ಎಂಬ ಹತ್ತನೆಯ ಅಂಕ ಮುಗಿದುದು.

ಮೃಚ್ಛಕಟಿಕ ಮುಗಿಯಿತು.

---

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| iii | ೬ | ವಿರಬಹುದೆನೋ | ವಿರಬಹುದೇನೋ |
| ೧೧ | ೧೪ | ಬಲೆಯನ್ನು | ಬಲಿಯನ್ನು |
| ೧೪ | ೨೭ | ಕಳಚುನೊಲು | ಕಳಚುವೊಲು |
| ೨೨ | ೨೫ | ದಿಟನೆ | ದಿಟದೆ |
| ೨೪ | ೮ | ದಶ್ವತಾಮು | ದಶ್ವತ್ಥಾಮು |
| ೩೧ | ೧೩ | ರಾಜ್ಯಮಾರ್ಗ | ರಾಜಮಾರ್ಗ |
| ೪೩ | ೬ | ಅದಕ್ಕೆ | ಅದಕ್ಕೇ |
| ೪೬ | ೧೪ | ಕಡೆಗಣ್ಣನೊರೆನೋಟ | ಕಡೆಗಣ್ಣನೋರೆನೋಟ |
| ೪೮ | ೨೨ | ಆನೆ ನಳಿನಿಯಂತೆ ಪ್ರಫುಲ್ಲ | ಆನೆ ಪ್ರಫುಲ್ಲ |
| ೪೯ | ೧೬ | ಸಂನ್ಯಾಸಿಯಾ | ಸಂನ್ಯಾಸಿಯ |
| ೫೯ | ೧೩ | ಶ್ರೋತ್ರೀಯನ | ಶ್ರೋತ್ರಿಯನ |
| ೯೧ | ೧೩ | ಹಕ್ಕಿ ಹಾರಿದೆ | ಹಕ್ಕಿ ಹಾರಿದೆ |
| ೯೬ | ೧೫ | ಅನ್ನದ ಗುಳಿಗೆ | ಅನ್ನದಗುಳಿಗೆ |
| ೧೦೨ | ೧೯ | ಅರಿಯದ ಪೋಡೆಯರ್ | ಅರಿಯದೆ ಪೋದಯರ್ |
| ೧೦೨ | ೨೪ | ಬೇಳ್ಗುಡಿಯು | ಬೆಳ್ಗುಡಿಯು |
| ೧೦೩ | ೧೨ | ವಿದ್ಯುದ್ವಾರಿತ | ವಿದ್ಯುದ್ವಾರಿದ |
| ೧೦೮ | ೧೩ | ಇದೋ ತಾಂ | ಇದೊ ತಾಂ |
| ೧೧೬ | ೧೨ | ವರ್ಣಮಾನಕೆ | ವರ್ಧಮಾನಕ |
| ೧೧೭ | ೧೯ | ಕೋಟೆಯು | ಕೋಟೆಯು |
| ೧೧೯ | ೧ | ವಿಹಾರಾರ್ಥನಾಗಿ | ವಿಹಾರಾರ್ಥವಾಗಿ |
| ೧೨೬ | ೯ | ಸುಳಿಯುತ್ತಿರ್ದರ್ | ಸುಳಿಯುತ್ತಿರ್ಪರ್ |
| ೧೩೪ | ೧೭ | ಕುಸಿಯುತಿರ್ಕುಂ | ಕುಸಿಯುತ್ತಿರ್ಕುಂ |
| ೧೩೬ | ೧೭ | ಬಾರದೆಯಿರ್ವುದೆ | ಬಾರದೆಯಿರ್ಪುದೆ |
| ೧೪೨ | ೧೪ | ದೇವತೆಗಳಿಗೆ | ದೇವತೆಗಳಿಗೇ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೪೭ | ೧೯ | ಹೋದಾನು | ಹೋದಾನು. |
| ೧೪೮ | ೨೭ | ತೊರುವುವೆ | ತೊರೆವುವೆ |
| ೧೫೨ | ೧೩ | ದಾಕ್ಷಿಣೋದಕ | ದಾಕ್ಷಿಣ್ಯೋದಕ |
| ೧೫೩ | ೨೨ | ....ದರೆ ನೋಟಂ.... | ದರೆನೋಟಂ |
| ೧೬೬ | ೨೨ | ಚಾರುದತ್ರ | ಚಾರುದತ್ತ |
| ೧೯೭ | ೨೦ | ವಾಸಿಸುವಚಂದ್ರ | ವಾಸಿಸುವ ಸೂರ್ಯಚಂದ್ರ |
| ೨೦೦ | ೬ | ಬೇಡೆನುತೆ | ಬೇಡೆನ್ನುತ್ತೆ |
| ೨೦೩ | ೧೫ | ಪಟ್ಟುಗಟ್ಟು | ಪಟ್ಟಗಟ್ಟು |
| ,, | ೧೮ | ಮಂತ್ರಹೀನಾದ | ಮಂತ್ರಹೀನನಾದ |
| ೨೦೪ | ೧೪ | ಕೋರತೆ | ಕೋರುತೆ |
| ೨೦೫ | ೮ | ಸ್ವಿಕರಿಸ | ಸ್ವೀಕರಿಸ |
| ೨೦೭ | ೨೩ | ಚಾರದತ್ತನ | ಚಾರುದತ್ತನ |
| ೨೦೮ | ೫ | ಎಂದು | ಎಂದೆ |

೭ ಭವಭೂತಿ

೮ ಸಂಸ್ಕೃತ ಕಾವ್ಯ

೯ ರಸೋಲ್ಲಾಸ

ಸಂಸ್ಕೃತ

೧೦ ಅಲಂಕಾರಶಾಸ್ತ್ರೇ ಕಾವ್ಯ
ವೈವಿಧ್ಯವಾದ ವಿಮರ್ಶಃ

ಇಂಗ್ಲಿಷ್

೧೧ Dvanyaloka and its Critics

೧೨ Dvanyaloka